# ಹೊಸತು

ನೆಮ್ಮದಿಯ ನಾಳೆ ನಮ್ಮದು

## ಒಳಗೇನಿದೆ ...




ಚಿತ್ರಗಳು : ಶ್ರೀಹರಿ, ಕಮಲಂ ಅರಸು, ರಾಂಚಂದ್ರ ಕೊಪ್ಪಲು, ಆಚಾರ್ಯ

ಮುಖಚಿತ್ರ : ಉಚಿತ ಶಿಕ್ಷಣ (ಚಿತ್ರ ಸೌಜನ್ಯ : ಅಂತರಜಾಲ)

ವಿನ್ಯಾಸ : ನವಕರ್ನಾಟಕ ವಿನ್ಯಾಸ

ಕಚೇರಿ ಸಹಕಾರ : ಜಿ. ವಿ. ತೇಜೋವತಿ


## ಈ ತಿಂಗಳು

ದಂತೇವಾಡ ಈಗ ದಿನನಿತ್ಯ ಸುದ್ದಿಯಲ್ಲಿರುವ ಊರಾಗಿಬಿಟ್ಟಿದೆ. ಅದರ ಸುತ್ತಮುತ್ತಲ ಕಾಡು ಪ್ರದೇಶ, ಕಾಡೊಳಗಿನ ಚಿಕ್ಕಚಿಕ್ಕ ಹಳ್ಳಿಗಳು, ಜನ, ಉತ್ಸವಗಳು, ನಕ್ಸಲರ ಬೀಡುಗಳು-ಹಾದಿಗಳು, ಮುಂತಾಗಿ ಹಲವು ಸಂಗತಿಗಳನ್ನು 'ಔಟ್‌ಲುಕ್' ವಾರಪತ್ರಿಕೆಯಲ್ಲಿ ಅರುಂಧತಿ ರಾಯ್ ಬರೆದಿದ್ದ ದೀರ್ಘಲೇಖನದಿಂದ ತಿಳಿದಿದ್ದೆವು. ''ಹೀಗೆ ಚೆನ್ನಾಗಿ ಬರೆದುಕೊಂಡಿರುವುದು ಬಿಟ್ಟು ಕಾಡಿಗೆಲ್ಲಾ ಹೋಗಿ ನಕ್ಸಲರ ಸಹವಾಸ ಮಾಡುವುದೇಕೆ, ಅವರ ಬಗ್ಗೆ ಒಂದು ಬಗೆಯ ಸಾಂತ್ವನ ಮೂಡಿಸುವುದೇಕೆ,'' ಎಂದು ಆಕೆಯನ್ನು ಬೆಂಗಳೂರಿನಲ್ಲಿ ನೆಲೆಸಿರುವ ಒಬ್ಬ ಚರಿತ್ರಕಾರ – ಕ್ರಿಕೆಟ್ ಬರಹಗಾರ ಕೇಳಿದರಂತೆ. ಕಾಡಿಗೆ ಹೋಗಿರದಿದ್ದರೆ ಆಕೆಗೆ ಚೆನ್ನಾಗಿ ಬರೆಯಲಾಗುತ್ತಿರಲಿಲ್ಲವೇನೊ ! ಆಕೆ ಬರೆದ ನಂತರ ಶಾಯಿ ಇನ್ನೂ ಆರುವ ಮೊದಲೇ ಅಲ್ಲಿ ರಕ್ತದ ಕೋಡಿ ಹರಿಯಿತು. ನಕ್ಸಲರು ೭೫ಕ್ಕೂ ಹೆಚ್ಚು ಮಂದಿ ಪೊಲೀಸರನ್ನು ಕೊಂದು ಹಾಕಿದರು. ಕೊಲ್ಲಲು ಹೋಗಿದ್ದವರು ಕೊಲ್ಲಲ್ಪಟ್ಟರು ಮತ್ತು ಕೊಲ್ಲಿಸಿಕೊಳ್ಳಬೇಕಾಗಿದ್ದವರು ಕೊಂದರು. ಮುಂದಿನ ಘಟನೆಯಲ್ಲಿ ಪಾತ್ರಗಳು ಅದಲುಬದಲಾಗಬಹುದು. ಆಗ ಪೊಲೀಸರ ಬದಲು ನಕ್ಸಲರು ಸಾಯುತ್ತಾರೆ. ಯಾವುದು ಖಂಡನೀಯ ಮತ್ತು ಯಾವುದು ಶ್ಲಾಘನೀಯ ಎಂಬುದರ ಬಗ್ಗೆ ಗಂಟೆಗಟ್ಟಲೆ ಚರ್ಚೆಗಳು ನಡೆದಿವೆ. ನಕ್ಸಲರನ್ನು ಸದೆಬಡಿಯಬೇಕೆಂದು ಚಿದಂಬರಂ, ಅಡ್ವಾನಿ, 'ತರುಣ ಭಾರತ'ದ ಸಂಪಾದಕ, ಎಲ್ಲರೂ ಹೇಳಿದ್ದಾರೆ. ನಕ್ಸಲರು ಮಾಡಿದ್ದು ಸರಿಯೆಂದು ಯಾರೂ ಹೇಳಿಲ್ಲ. ವಿಶ್ವನಾಥ ಸೇನ್ ನಕ್ಸಲರ ಕೃತಿಯನ್ನು ಖಂಡಿಸಿದ್ದಾರೆ. ಅರುಂಧತಿ ರಾಯ್ ಸಹ ನಕ್ಸಲರನ್ನು ಸಮರ್ಥಿಸಿಲ್ಲ. ಕೊಲ್ಲುವ – ಕೊಲ್ಲಿಸಿಕೊಳ್ಳುವ ಕ್ರಿಯೆ ಹೀಗೆಯೇ ಚಕ್ರದಂತೆ ತಿರುಗುತ್ತಿದ್ದರೆ ಸಮಸ್ಯೆಗೆ ಪರಿಹಾರವೆಲ್ಲಿ? ೫೫ ವರ್ಷಗಳ ಕಾಶ್ಮೀರದಲ್ಲಿನ ಅನುಭವವು ದಮನದ ನೀತಿಯು ಯಶಸ್ವಿಯಾಗುವುದಿಲ್ಲ ಎಂಬ ಪಾಠವನ್ನು ಕಲಿಸಿದ್ದರೆ ಪರಸ್ಪರ ಕೊಲ್ಲುವಿಕೆಯನ್ನು ಹೇಗಾದರೂ ಮಾಡಿ ನಿಲ್ಲಿಸಲು ಯತ್ನಿಸುತ್ತಿದ್ದೆವೋ ಏನೋ ! ಪೊಲೀಸರು ಮತ್ತು ನಕ್ಸಲರು ಇಬ್ಬರೂ ನಮ್ಮ ದೇಶದವರು, ನಮ್ಮ ಅಣ್ಣ-ತಮ್ಮಂದಿರು, ಬಂಧುಗಳು. ಬಹುಮಟ್ಟಿಗೆ ಒಂದೇ ವರ್ಗದವರು ಕೂಡ. ಆದರೂ ಕೊಲ್ಲುವಾಗ ಇದಾವುದೂ ಪ್ರಸ್ತುತವಾಗಿಲ್ಲ. ಹೋಗಲಿ, ದಂತೇವಾಡದ ಜನರಿದ್ದಾರಲ್ಲ, ಅವರೇನು ಮಾಡಬೇಕು ? ಈಗೇನೋ ಹಳ್ಳಿಗಳನ್ನು ತೊರೆದು ಕಾಡಿನಲ್ಲೆಲ್ಲೋ ಅಡಗಿಕೊಂಡಿದ್ದಾರಂತೆ. ಪೊಲೀಸರ ಭಯ ಒಂದು ಕಡೆ, ನಕ್ಸಲರು ಕಾಡುತ್ತಾರೇನೋ ಎಂಬ ಭಯ ಇನ್ನೊಂದು ಕಡೆ. ದಂತೇವಾಡದ ಜನ ಮತ್ತು ಇರಾಕಿನ ಜನ ಒಂದರ್ಥದಲ್ಲಿ ಸಾಮ್ಯತೆ ಹೊಂದಿದ್ದಾರೆ. ಅದೇನೆಂದರೆ ಅವರಿಬ್ಬರೂ ಅಗಾಧ ಸಂಪತ್ತಿನ ಮೇಲೆ ನೆಲೆಸಿದ್ದಾರೆ. ದಂತೇವಾಡದಲ್ಲಿ ಖನಿಜಗಳು, ಇರಾಕಿನಲ್ಲಿ ತೈಲ. ಅವರ ಸಂಪತ್ತೇ ಅವರಿಗೆ ಮುಳುವಾಗಿದೆ. ಪಾಪದ ಪ್ರಾಣಿಗಳು; ಸಂಪತ್ತಿನ ಮೇಲೆ ನೆಲೆಸಿದ್ದಾರೆ, ಬೇರೆಲ್ಲೂ ಹೋಗಲಾರರು ಮತ್ತು ಸಂಪತ್ತು ದೊಡ್ಡವರ ಕಣ್ಣಿಗೆ ಬಿದ್ದಿದೆ, ಅದನ್ನವರು ಪಡೆದು ''ದೇಶದ ಅಭಿವೃದ್ಧಿ''ಗಾಗಿ ಶ್ರಮಿಸಬೇಕು. ಸಂಪತ್ತನ್ನು ಕಾಲಿನಡಿ ಇಟ್ಟುಕೊಂಡಿರುವ ಅಲ್ಲಿಯ ನಿವಾಸಿಗಳಿಗೆ ಆ ಸಂಪತ್ತು ಸೇರಿಲ್ಲ, ಅದನ್ನವರು ರೂಢಿಸಿಕೊಳ್ಳಲು ಅಸಮರ್ಥರು. ಸಮರ್ಥರು ಯಾರು ? ವಿದೇಶಿ ಕಂಪನಿಗಳವರು, ಟಾಟಾ ಕಂಪನಿಯವರು, ಚಿದಂಬರಂ – ಅಡ್ವಾನಿ ಬಂಧುಗಳು. ''ಅದನ್ನು ವೃದ್ಧಿಗೊಳಿಸುತ್ತೇವೆ, ಬಿಡಿ'' ಎಂದು ಇವರೆಲ್ಲಾ ದಂತೇವಾಡದ ಬುಡಕಟ್ಟು ಜನರಿಗೆ ಹೇಳುತ್ತಾರೆ. ''ಅದು ಸರ್ವಥಾ ಸಾಧ್ಯವಿಲ್ಲವೆನ್ನಿ'' ಎಂದು ನಕ್ಸಲರು ಹೇಳುತ್ತಾರೆ. ಒಟ್ಟಿನಲ್ಲಿ ಯಾರೋ ಸಂಪತ್ತನ್ನು ಭೋಗಿಸುವುದಕ್ಕೋಸ್ಕರ ದಂತೇವಾಡದ ಜನರನ್ನು ಒಕ್ಕಲೆಬ್ಬಿಸಬೇಕು, ಪೊಲೀಸರು-ನಕ್ಸಲರು ಪರಸ್ಪರರನ್ನು ಕೊಲ್ಲುತ್ತಿರಬೇಕು. ಇದು ಯಾವ ಪುರುಷಾರ್ಥ ಸಾಧನಕ್ಕೆ ? ಇದರ ಬದಲು ಚಿದಂಬರಂ ಹೇಳಿಬಿಡಬಹುದು : ''ಸಂಪತ್ತನ್ನು ಯಾರಿಗೂ ಕೊಡುವುದಿಲ್ಲ; ಮುಂದೊಂದು ದಿನ ದಂತೇವಾಡದ ಜನ ಅದನ್ನು ಹೇಗೆ ಮೌಲ್ಯಯುತವನ್ನಾಗಿಸುತ್ತಾರೋ ಕಾದು ನೋಡೋಣ. ಸದ್ಯಕ್ಕೆ ಅವರಿಗೆ ಶಾಲೆ, ಆಸ್ಪತ್ರೆ, ಮನೆ ಮಾತ್ರ ಕೊಡುತ್ತೇವೆ, ಕಾಡನ್ನು ನಾಶಮಾಡದೆ ಹೇಗೆ ಜೀವಿಸುತ್ತಾರೋ ಜೀವಿಸಲಿ.'' ಇದೇನು ಮಹಾ ಕಷ್ಟದ ಮಾತೆ ? ಸಂಪತ್ತು, ಪೊಲೀಸರು, ನಕ್ಸಲರು, ದಂತೇವಾಡದ ಜನ, ಎಲ್ಲರೂ ನಿಸೂರಾಗಿರಬಹುದಲ್ಲ! ಆದರೆ ಚಿದಂಬರಂ-ಅಡ್ವಾನಿ ಹಾಗೆಂದು ಹೇಳುವುದಿಲ್ಲ. ಅವರು ಪ್ರತಿನಿಧಿಸುವ ವರ್ಗಕ್ಕೆ ಸಂಪತ್ತು ಮುಖ್ಯ, ಜೀವ ಗೌಣ. ''ನಾವು ಹೇಳಿದಂತೆ ಕೇಳದ ಈ ದಂತೇವಾಡದ ಮೂರ್ಖ ಜನ ಮತ್ತು ಆ ಕೊಬ್ಬಿದ ನಕ್ಸಲರು ಏನು ತಿಳಿದಿದ್ದಾರೆ'' ಎಂಬ ಹಠ, ಕೋಪ. ಹೀಗಿರುವಾಗ ಪರಿಹಾರ ಹೇಗೆ ಸಾಧ್ಯ ? ಪ್ರಜಾಪ್ರಭುತ್ವವಿರುವಾಗ ನಕ್ಸಲರ ಅಟ್ಟಹಾಸ ಅಸಹನೀಯವೆಂದು ಒಂದು ರಾಗ; ಪ್ರಜಾಪ್ರಭುತ್ವದ ಮೂಲಸೂತ್ರಗಳನ್ನು ಮಣ್ಣುಪಾಲು ಮಾಡುತ್ತಿರುವಾಗ ನಾವು ಸುಮ್ಮನಿದ್ದೇವೆಯೆ ಎಂದು ಇನ್ನೊಂದು ರಾಗ. ಈ

(೬ನೇ ಪುಟಕ್ಕೆ)



ತಿಂಗಳ ಪತ್ರಿಕೆ

# ಹೊಸತು

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೧೧ ಸಂಚಿಕೆ - ೧೦ ಮೇ ೨೦೧೦

**ಸಂಪಾದಕ**

ಜಿ. ರಾಮಕೃಷ್ಣ

**ಸಹಸಂಪಾದಕರು**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ಕೆ. ಎಸ್. ಪಾರ್ಥಸಾರಥಿ
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೯೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್ : ೩೦೫೭೮೦೨೩
e-mail : navakarnataka@gmail.com
hosathu@gmail.com
URL : www.navakarnataka.com
http://navakarnataka.blogspot.com
http://hosathu.blogspot.com

ಸಂಪಾದಕೀಯ

## ಸ್ವಾತಂತ್ರ್ಯಕ್ಕೆ ವಿಜ್ಞಾನದ ದೀವಿಗೆ

**ಭಾ**ರತೀಯ ಬಾಹ್ಯಾಕಾಶ ಸಂಸ್ಥೆಯ ಮುಖ್ಯಸ್ಥರಾದ ಡಾ|| ಕೆ. ರಾಧಾಕೃಷ್ಣನ್ ಅಧಿಕಾರ ವಹಿಸಿಕೊಂಡಾಗ ಗುರುವಾಯೂರಿಗೆ ತೆರಳಿ ತುಲಾಭಾರ ಮಾಡಿಸಿಕೊಂಡ ಕೃಷ್ಣನಿಗೆ ತಮ್ಮ ತೂಕದಷ್ಟು ಬೆಲ್ಲ ಕೊಟ್ಟು ಬಂದಿದ್ದರು. ಆ ಸ್ಥಾನ ದೊರೆತುದಕ್ಕೆ ವಂದನೆ ಸಲ್ಲಿಸುವ ವಿಧಾನ ಅದಾಗಿತ್ತು. ಅದು ವಿಜ್ಞಾನಿಯ ಮೂಢನಂಬಿಕೆಯೋ ಅಲ್ಲವೋ ಎಂಬುದು ಅಪ್ರಸ್ತುತವೆಂದೇ ಭಾವಿಸಿ ಇತ್ತೀಚಿನ ಜಿಎಸ್ಎಲ್‌ವಿ – ಡಿ ೩ ಉಡಾವಣೆಯ ವೈಫಲ್ಯಕ್ಕೂ ಗುರುವಾಯೂರಿಗೂ ಸಂಬಂಧವಿಲ್ಲವೆಂದು ಭಾವಿಸೋಣ. ಈ ಸೋಲಿನಿಂದ ಕಂಗೆಡದೆ ಮುಂದೆ ಯಶಸ್ಸು ಪಡೆಯಲು ವಿಜ್ಞಾನದ ಭರವಸೆ ಸದಾ ಇಸ್ರೋ ಮುಂದಿರುತ್ತದೆ. ಒಮ್ಮೆ ಕ್ರಯೋಜೆನಿಕ್ ಇಂಜಿನ್ ಕೈಕೊಟ್ಟರೆ ಅದು ಯಾವಾಗಲೂ ಹಾಗೇ ಆಗಬೇಕೆಂದಿಲ್ಲ. ಈಗಿನ ನ್ಯೂನತೆಯನ್ನು ಗುರುತಿಸಿ ಇಂಜಿನ್ನನ್ನು ದುರಸ್ತಿಗೊಳಿಸುತ್ತಾರೆ, ಉಡಾವಣೆಯ ಕೀರ್ತಿ ಇಸ್ರೋಗೆ ಕಟ್ಟಿಟ್ಟ ಬುತ್ತಿಯೆಂಬುದನ್ನು ಪ್ರಾಯೋಗಿಕವಾಗಿ ತೋರಿಸುತ್ತಾರೆ. ಕೃಷ್ಣನಿಗೂ ಅದಕ್ಕೂ ಜಂಟಿ ಹಾಕಬೇಕಾಗಿಲ್ಲ; ಜಂಟಿ ಹಾಕಬೇಕಾದ್ದು ಜ್ಞಾನದ ಬೆಳೆವಣಿಗೆಯ ವಿಧಾನದೊಂದಿಗೆ. ಮಾನವರು ಅನೇಕ ಶತಮಾನಗಳಿಂದ ಹಾದಿ ಸವೆಸಿ ನಾಗರಿಕತೆಯನ್ನು ಇಂದಿನ ಮಟ್ಟಕ್ಕೆ ತಂದಿದ್ದಾರೆ ಮತ್ತು ಅದಕ್ಕೆ ಇಸ್ರೋ ತನ್ನ ಕಾಣಿಕೆಯನ್ನು ನೀಡಿ ಅದನ್ನು ವರ್ಧಿಸುತ್ತದೆ.

ಇಸ್ರೋಗೆ ಯಶಸ್ಸೆಂಬ ಸ್ವಾತಂತ್ರ್ಯ ಲಭಿಸುವುದು ತಾನು ವಿಜ್ಞಾನದ ಎಲ್ಲೆಯನ್ನು ವಿಸ್ತರಿಸಿದಾಗ, ತಪ್ಪಾಗಿಹೋದ ತಂತ್ರಜ್ಞಾನವನ್ನು ಸರಿಪಡಿಸಿಕೊಂಡಾಗ. ಹೀಗೆ ವಿಜ್ಞಾನ ಮತ್ತು ಸ್ವಾತಂತ್ರ್ಯ ಕಾರಣ-ಕಾರ್ಯ ಸಂಬಂಧವಿರಿಸಿಕೊಂಡಿವೆ. ನಾಳೆ ಭೂಕಂಪದ ಅನಾಹುತದಿಂದ ತಪ್ಪಿಸಿಕೊಳ್ಳುವ ಸ್ವಾತಂತ್ರ್ಯವು ಮನುಕುಲಕ್ಕೆ ದಕ್ಕಬೇಕಾದರೆ ಇಂದು ವಿಜ್ಞಾನದ ವ್ಯಾಪ್ತಿ ಹಿಗ್ಗಬೇಕು. ಅದು ನಿಯಮ. ಆದರೆ ಜ್ಞಾನ ಲಭ್ಯವಿದ್ದಾಗೆಲ್ಲಾ ಸ್ವಾತಂತ್ರ್ಯ ಖಚಿತವಲ್ಲ; ಏಕೆಂದರೆ, ಜ್ಞಾನದ ಪ್ರಯೋಗಕ್ಕೆ ಸೌಲಭ್ಯಗಳ ಕಲ್ಪನೆಯೂ ಆಗಿರಬೇಕು. ಅನಕ್ಷರತೆ ನಿವಾರಿಸುವುದು ಹೇಗೆಂಬ ಜ್ಞಾನ ನಮ್ಮಲ್ಲಿದೆ, ಆದರೆ ಅದನ್ನು ಪ್ರಯೋಗಿಸಿ ಅನಕ್ಷರತೆಯಿಂದ ದೂರವಾಗುವ ಸ್ವಾತಂತ್ರ್ಯವನ್ನು ಎಲ್ಲರಿಗೂ ದೊರಕಿಸಿಕೊಟ್ಟಿಲ್ಲ. ಕೆಲವರು ನಕ್ಸಲರಾಗುವುದನ್ನು ತಡೆಯುವುದು ಹೇಗೆಂದು ನಮಗೆ ತಿಳಿದಿದೆ, ಆದರೆ ಅವರು ನಕ್ಸಲರಾಗದಿರುವ ಸ್ವಾತಂತ್ರ್ಯವನ್ನು ನಾವವರಿಗೆ ದೊರಕಿಸಿಕೊಟ್ಟಿಲ್ಲ. ಸಂಪನ್ಮೂಲಗಳನ್ನು ಮಾನವರ ಏಳಿಗೆಗೆ ಹೇಗೆ ಬಳಸಬೇಕೆಂಬ ವೈಜ್ಞಾನಿಕ ಅರಿವು ಇಲ್ಲಿ ಮೂಲಭೂತವಾದ ಸ್ಥಾನವನ್ನು ಪಡೆಯುತ್ತದೆ. ಬೆಂಗಳೂರಿನಿಂದ ದೆಹಲಿಗೆ ಹೋಗಬಯಸುವವರಿಗೆಲ್ಲಾ ವಿಮಾನದಲ್ಲಿ ಹೋಗುವ ಸ್ವಾತಂತ್ರ್ಯವಿದೆ; ವಿಮಾನವನ್ನು ತಯಾರಿಸಿ ಹಾರಿಸುವ ಜ್ಞಾನ ಲಭ್ಯವಾಗಿರುವುದರಿಂದ. ಆದರೆ ಹಾರಲು ಹಣದ ಅಡಚಣೆ ಇಲ್ಲದಿರುವಂತೆ ಮಾಡಲಾಗಿಲ್ಲ; ಆದ್ದರಿಂದ ಹಾರಿಹೋಗುವ ಸ್ವಾತಂತ್ರ್ಯಕ್ಕೆ ಕಡಿವಾಣ ಹಾಕಲಾಗಿದೆ. ಜ್ಞಾನ ಮತ್ತು ಅದನ್ನು ಪ್ರಯೋಗಿಸುವ ತಂತ್ರ ಹಾಗೂ ಸೌಲಭ್ಯಗಳು ಸ್ವಾತಂತ್ರ್ಯದ ಮಿತಿಯನ್ನು ನಿರ್ಧರಿಸುತ್ತವೆ.

ಸ್ವಾತಂತ್ರ್ಯದ ಲಕ್ಷಣ ಹೇಳುವಾಗ ಫ್ರೆಡರಿಕ್ ಏಂಗೆಲ್ಸ್ ''ಅದು ಸಾಧ್ಯತೆಯ ಗುರುತಿಸುವಿಕೆ ಅಥವಾ ಅದು ವಿಧಿಸುವ ಅಂಗೀಕಾರ'' ಎನ್ನುತ್ತಾನೆ. ಯಾವುದೇ ಸಂದರ್ಭದಲ್ಲೂ ಸ್ವಾತಂತ್ರ್ಯಕ್ಕೆ ಮಿತಿಯನ್ನು ವಿಧಿಸುವುದು ಆ ಸಂದರ್ಭದಲ್ಲಿರುವ ಜ್ಞಾನದ ಮಟ್ಟ ಮತ್ತು ಅದರ ಪ್ರಯೋಗಕ್ಕಿರುವ ಇತಿಮಿತಿಗಳು. ಈ ಇತಿಮಿತಿಗಳನ್ನು ಕುಗ್ಗಿಸಬಹುದು, ಇಲ್ಲವೆ ಹಿಗ್ಗಿಸಬಹುದು; ಜ್ಞಾನವನ್ನೂ ಅಷ್ಟೆ. ಆ ಪ್ರಕ್ರಿಯೆಯಲ್ಲಿ ಸ್ವಾತಂತ್ರ್ಯ ಕಡಿಮೆಯಾಗಬಹುದು, ಹೆಚ್ಚಲೂಬಹುದು. ಮಾನವನ ನಾಗರಿಕತೆಯ ವಿಕಾಸದ ಇತಿಹಾಸವು ಈ ಸ್ವಾತಂತ್ರ್ಯದ ವಿಕಾಸದ ಇತಿಹಾಸವೇ ಆಗಿದೆ.

ಇತಿಮಿತಿಗಳಿಲ್ಲದಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು ಅಲ್ಲವೆ! ಆಗ ಎಲ್ಲರಿಗೂ ವಿದ್ಯೆ, ಊಟ, ಮನೆ, ಆರೋಗ್ಯ, ವಾಹನ, ಕೊಟ್ಟುಬಿಡಬಹುದಿತ್ತು; ಯಾರೂ ನಕ್ಸಲರಾಗಬೇಕಾಗುತ್ತಿರಲಿಲ್ಲ. ಹಸಿವಿನ ಸ್ವಾತಂತ್ರ್ಯದ ಬದಲು ಸಂತೃಪ್ತಿಯ ಸ್ವಾತಂತ್ರ್ಯ, ಅಜ್ಞಾನದ ಸ್ವಾತಂತ್ರ್ಯದ ಬದಲು ಜ್ಞಾನದ ಸ್ವಾತಂತ್ರ್ಯ, ಹೀಗೆ ಎಲ್ಲಾ ಭವ್ಯವಾಗಿರಬಹುದಿತ್ತು. ಮನುಕುಲವು ಸ್ವರ್ಗ, ಮೋಕ್ಷ, ಇತ್ಯಾದಿಗಳನ್ನು ಕಲ್ಪಿಸಿಕೊಂಡಿದ್ದು ಇದೇ ನೆಲೆಯಲ್ಲಿರಬೇಕು. ಆದರೆ ಉಸಿರಾಡದೆ ಬದುಕುವ ಸ್ವಾತಂತ್ರ್ಯವನ್ನು ನಮಗೆ ನಿಸರ್ಗವು ನಿರಾಕರಿಸಿದೆ; ಹಸಿವಿಲ್ಲದೆ ಬದುಕುವ ಸ್ವಾತಂತ್ರ್ಯವನ್ನು ನಮ್ಮ ಸಾಮಾಜಿಕ-ಆರ್ಥಿಕ ರಚನೆಯು ಬಹುಜನರಿಗೆ ನಿರಾಕರಿಸಿದೆ. ಉಸಿರಾಡದೆ ಬದುಕುವ ಸ್ವಾತಂತ್ರ್ಯ ಎಂದೂ ನಮಗೆ ದಕ್ಕದು, ಆದರೆ ಹಸಿವಿರದ ಸ್ವಾತಂತ್ರ್ಯವನ್ನು ನಮ್ಮ ಸಮಾಜದ ಪುನರ್‌ರಚನೆಯಿಂದ ದಕ್ಕಿಸಿಕೊಳ್ಳಲು ಸಾಧ್ಯವಿದೆ; ಅದಕ್ಕಿರುವ ಅಡ್ಡಿಗಳ ನಿವಾರಣೆಯನ್ನು ನಾವೇ ಮಾಡಿಕೊಳ್ಳಬೇಕು. ಕೆಲವು ಸನ್ನಿವೇಶಗಳಲ್ಲಿ ಮನುಕುಲ ಇದನ್ನು ಮಾಡಿಕೊಂಡಿದೆ, ಇನ್ನು ಕೆಲವೆಡೆ ಅದು ಸೋತಿದೆ. ಉದಾಹರಣೆಗೆ, ಗುಲಾಮಿ ಪದ್ಧತಿಯನ್ನು ಮನುಕುಲವು ಕಿತ್ತೊಗೆದಾಗ ಒಂದೇ ಏಟಿಗೆ ಸ್ವಾತಂತ್ರ್ಯದ ಹತ್ತು ಹೆಜ್ಜೆಗಳನ್ನು ಇಟ್ಟಿತು; ಹನ್ನೊಂದನೆಯ ಹೆಜ್ಜೆಗೆ ಊಳಿಗಮಾನ್ಯ ವ್ಯವಸ್ಥೆಯು ಅಡ್ಡಬಂತು. ಹೀಗೆ ಅಡ್ಡಿಗಳನ್ನು ನಿವಾರಿಸಿಕೊಳ್ಳುತ್ತಾ ಹೋಗುವುದಕ್ಕೆ ವಿಜ್ಞಾನವು ಊರುಗೋಲು. ಹೆಗೆಲ್ ಎಂಬ ತತ್ತ್ವಶಾಸ್ತ್ರಜ್ಞ ಹೇಳಿದ, ಇತಿಮಿತಿ ಅಥವಾ ಸಾಧ್ಯತೆ ಎನ್ನುವುದು ತಿಳುವಳಿಕೆಯ ಪರಿಮಿತಿ ಅಷ್ಟೇ, ಎಂದು. ಆದ್ದರಿಂದ, ಇಂದು ಸೋತಿರುವ ಇಸ್ರೋ ನಾಳೆ ಯಶಸ್ಸು ಗಳಿಸುತ್ತದೆ. ಆದರೆ ಕೃಷ್ಣನ ಕೃಪೆಯಿಂದಲ್ಲ ಜ್ಞಾನ-ತಂತ್ರಜ್ಞಾನಗಳ ವೃದ್ಧಿಯಿಂದ, ಅದರ ಅಳವಡಿಕೆಯ ಜಾಣತನದಿಂದ. ಅಂದರೆ, ಸ್ವಾತಂತ್ರ್ಯದ ಎಲ್ಲೆಯನ್ನು ಮನುಕುಲ ವಿಸ್ತರಿಸುತ್ತಲೇ ಹೋಗುತ್ತದೆ.

ಅದೆಲ್ಲ ಸರಿ, ಆದರೆ ಜಿಎಸ್ಎಲ್‌ವಿ- ಡಿ ೩ ಉಡಾವಣೆಯಿಂದ ಹಸಿವನ್ನು ದೂರಮಾಡುವ ಸ್ವಾತಂತ್ರ್ಯ ಸಿಗುವುದಿಲ್ಲವಲ್ಲ ಎಂದು ಕೆಲವರು ಸಿಟ್ಟಿಗೇಳುತ್ತಾರೆ. ಬೇಟೆಯಾಡಿ ಜೀವನ ನಡೆಸುತ್ತಿದ್ದಾಗ ಮನುಕುಲವು ನೇಗಿಲು ಮಾಡುವ ಪ್ರಕ್ರಿಯೆಯಲ್ಲಿ ತೊಡಗಿದಾಗಲೂ ಇಂಥದೇ ಸಿಟ್ಟು ಪ್ರದರ್ಶನವಾಗಿದ್ದಿರಬೇಕು. ಮೂಲಪ್ರಶ್ನೆ ಇರುವುದು ಆಯ್ಕೆಯಲ್ಲಿ, ಯಾವ ಸಾಧ್ಯತೆ ಪೂರೈಸಬಹುದಾದ ಹಂತದಲ್ಲಿ ನಾವಿದ್ದೇವೆಂದು ತಿಳಿಯುವುದರಲ್ಲಿ. ನೇಗಿಲು ಆವಿಷ್ಕಾರ ಮಾಡಬೇಕಾಗಿದ್ದ ಹಂತದಲ್ಲಿ ಯಾರಾದರೂ ಅಣ್ವಸ್ತ್ರದ ಆವಿಷ್ಕಾರಕ್ಕೆ ಕೈ ಹಚ್ಚಿದ್ದಿದ್ದರೆ ಅದು ಮೂರ್ಖತನವಾಗುತ್ತಿತ್ತು, ಏಕೆಂದರೆ ಸಾಧ್ಯತೆಯ ಎಲ್ಲೆ ಆಗಿನ್ನು ಬಹಳ ದೂರವಿತ್ತು, ದುಸ್ತರವಾಗಿತ್ತು.

ಇಂತಹ ಸ್ವಾತಂತ್ರ್ಯ ಏನು ಮಹಾ, ನಮಗೆ ಸಂಪೂರ್ಣ - ಅಂತಿಮ ಸ್ವಾತಂತ್ರ್ಯ ಮುಖ್ಯ, ಎಂದು ಉಪನ್ಯಾಸ ನೀಡುತ್ತಾ

ಬೊಜ್ಜು ಬೆಳೆಸಿಕೊಳ್ಳುವವರ ''ಬುಡಕಟ್ಟು'' ಎಲ್ಲ ದೇಶಗಳಲ್ಲಿ, ಎಲ್ಲ ಧಾರ್ಮಿಕ ಪಂಥಗಳಲ್ಲಿ ಇವೆ. ಅವರು ಆತ್ಮ, ಬ್ರಹ್ಮನ್, ಸ್ವರ್ಗ, ಮೋಕ್ಷಮುಂತಾದ ಪರಿಭಾಷೆ ಬಳಸುವಂತೆ ಪ್ರವಾದಿ, ಶರಿಯ, ಉಮ್ಮ, ಹಜ್, ಇಬ್ಲೀಸ್, ಮುಂತಾದ ಪರಿಭಾಷೆಯನ್ನೂ ಬಳಸುತ್ತಾರೆ. ಇಲ್ಲವೆ, ಕನ್ಯೆ ಮೇರಿ ಏಸುವಿನ ತಾಯಿಯೆಂದೋ, ಮೂರು ದಿನದ ನಂತರ ಏಸು ಪುನರುತ್ಥಾನಗೊಂಡ ಎಂದೋ, ಅಂತಿಮ ನ್ಯಾಯ ದೊರಕುವ ದಿನದವರೆಗಿನ ಪರಿತಾಪವೆಂದೋ ರೈಲು ಬಿಡಬಹುದು. ಅದು ಸಾಲದಿದ್ದರೆ ಯಹೂದಿಗಳಂತೆ 'ಅಲಿಯ' (ಎಲ್ಲರೂ ಭಗವಂತನು ನಿಗದಿಗೊಳಿಸಿಕೊಟ್ಟ ಪ್ರದೇಶಕ್ಕೆ ಹಿಂದಿರುವುದು) ಎಂಬ ಪರಿಭಾಷೆ ಬಳಸಿ ಸಹಸ್ರಾರು ಪ್ಯಾಲಿಸ್ಟೈನ್ ಜನಗಳನ್ನು ಕೊಲ್ಲಬಹುದು. ಇವೆಲ್ಲಾ 'ಅಮೂರ್ತ ಸ್ವಾತಂತ್ರ್ಯ'ದ ಹಿರಿಮೆಯನ್ನು ಹೊಗಳುತ್ತಾ ಮೂರ್ತ ಸ್ವಾತಂತ್ರ್ಯಕ್ಕೆ ಕಡಿವಾಣ ಹಾಕುವ ಕೆಲಸದಲ್ಲಿ ನಿರತವಾಗಿರುತ್ತವೆ.

ನಾವು ಆಯ್ದುಕೊಳ್ಳಬೇಕಾದ ದೀವಿಗೆ ವಿಜ್ಞಾನ. ಅದು ಕಂದುವುದಿಲ್ಲ, ಕುಂದುವುದಿಲ್ಲ; ಮೂರ್ತ ಸ್ವಾತಂತ್ರ್ಯವನ್ನು ವಿಪುಲಗೊಳಿಸಲು ಅದು ಪರಮ ಸಾಧನ.

**ಸಂಪಾದಕೀಯ ಲೇಖನ**

# ಮಾರ್ಕ್ಸ್‌ವಾದ ಮತ್ತು ಸಂಸ್ಕೃತಿ

**ಎಸ್. ಸುರೇಂದ್ರ**

ಮಹಾನ್ ಚಿಂತಕ ಕಾರ್ಲ್ ಮಾರ್ಕ್ಸ್ ಕಣ್ಮರೆಯಾಗಿ ಇಂದಿಗೆ ಸುಮಾರು ೧೨೭ ವರ್ಷಗಳೇ ಸಂದಿವೆ. ಇಡೀ ಜಗತ್ತನ್ನೇ ತಲ್ಲಣಕ್ಕೀಡುಮಾಡಿದ, ಶ್ರಮಿಕ ವರ್ಗ ಹೊಸ ಕನಸುಗಳನ್ನು ಕಾಣಲು ಪ್ರೇರೇಪಿಸಿದ ಮತ್ತು ಜಾಗತಿಕ ಆಗುಹೋಗುಗಳಿಗೆ ಹೊಸ ತಿರುವು ನೀಡಿದ ಕೃತಿ 'ದಿ ಕಮ್ಯುನಿಸ್ಟ್ ಮ್ಯಾನಿಫೆಸ್ಟೊ'ಅನ್ನು ಈ ಕ್ರಾಂತಿಕಾರಿ ಕೊಡಮಾಡಿದ್ದು ೧೮೪೮ರಲ್ಲಿ. ಮಾರ್ಕ್ಸ್‌ವಾದದಲ್ಲಾಗಲಿ, ಇತರ ಸಮಾಜವಾದಿ ಕೃತಿಗಳಲ್ಲಾಗಲಿ, ಸಂಸ್ಕೃತಿ ಕುರಿತ ಚರ್ಚೆ, ಚಿಂತನಶೀಲತೆ ಎಂಬುದಿದೆಯೇ, ಎಂದು ಪ್ರಶ್ನಿಸುವ ಸಿನಿಕರಿಗೇನೂ ಕಡಿಮೆಯಿಲ್ಲ.

ಮಾರ್ಕ್ಸ್‌ನ ಕುರಿತ ಯಾವುದೇ ಜೀವನಚರಿತ್ರೆಯ ಪುಟಗಳನ್ನು ತಿರುವಿಹಾಕಿದರೆ ಆತನ ಅಭಿರುಚಿ ಮತ್ತು ಸಂಸ್ಕೃತಿ ಕುರಿತ ಆತನ ಒಲವುಗಳು ಓದುಗರಲ್ಲಿ ರಸಾನುಭವ ಉಂಟುಮಾಡುವುದರಲ್ಲಿ ಯಾವ ಸಂದೇಹವೂ ಇಲ್ಲ. ಮನುಕುಲದ ಇತಿಹಾಸದಲ್ಲಿ ಅಂದಿನವರೆಗೂ ನಡೆದುಬಂದಿದ್ದ ಸಾಂಸ್ಕೃತಿಕ ಅಂಶಗಳನ್ನು ಆಮೂಲಾಗ್ರವಾಗಿ ಸಮೀಕರಿಸಿದ್ದ ಮಾರ್ಕ್ಸ್‌ನ ಚಿಂತನಶೀಲತೆ, ಆಲೋಚನಾಕ್ರಮ ಅನನ್ಯ. ಜರ್ಮನ್ ಭಾಷೆಯೇ ಅಲ್ಲದೆ ರಷ್ಯನ್ ಭಾಷೆಯೂ ಸೇರಿದಂತೆ ಯೂರೋಪಿನ ಹಲವು ಭಾಷೆಗಳ ಮೇಲೆ ಪರಿಶ್ರಮ ಸಾಧಿಸಿದುದು ಮಾರ್ಕ್ಸ್‌ನ ಹೆಗ್ಗಳಿಕೆ. ಗ್ರೀಕ್ ಮತ್ತು ಲ್ಯಾಟಿನ್ ಭಾಷೆಯಲ್ಲಿನ ಶ್ರೇಷ್ಠ ಕೃತಿಗಳ ಆಳವಾದ ಅಧ್ಯಯನ ಆತನ ವಿಚಾರಗಳು ರೂಪುಗೊಳ್ಳುವಲ್ಲಿ ಹಲವಾರು ಬಗೆಯಲ್ಲಿ ನೆರವಾದುವು. ಶೇಕ್ಸ್‌ಪಿಯರ್‌ನ ನಾಟಕಗಳ ಸಾಲುಗಳನ್ನು ಕ್ಷಣಮಾತ್ರದಲ್ಲಿ ಮಾರ್ಕ್ಸ್ ಉದ್ಧರಿಸುತ್ತಿದ್ದ. ವಿಹಾರ ಪ್ರವಾಸಗಳಲ್ಲಿ ಅಡ್ಡಾಡುವ ವೇಳೆಯಲ್ಲಿ ಶ್ರೇಷ್ಠ ಕಾವ್ಯಗಳು ಮತ್ತು ಕಾವ್ಯಾತ್ಮಕ ನಾಟಕಗಳ ಸಾಲುಗಳನ್ನು ಸರಾಗವಾಗಿ ನಿರೂಪಿಸುತ್ತಿದ್ದುದು ಆತನ ಸಂಗಾತಿಗಳಿಗೆ ಅಪರೂಪದ ಅನುಭವ. ತನ್ನ ಸಂಪರ್ಕಕ್ಕೆ ಬಂದವರಿಗೆಲ್ಲ ಇತರ ಭಾಷೆಗಳನ್ನು ಕಲಿಯಲು, ಬೇರೆಬೇರೆ ಸಾಹಿತ್ಯ ಕೃತಿಗಳನ್ನು ಓದಲು ಪ್ರೇರೇಪಿಸುತ್ತಿದ್ದ. ಹೀಗೆ ಪ್ರೇರೇಪಿಸುತ್ತಿದ್ದುದು ತಾನೊಬ್ಬ 'ಪುಸ್ತಕದ ಕ್ರಿಮಿ' ಎಂಬ ಕಾರಣಕ್ಕಲ್ಲ; ಬೇರೆಬೇರೆ ಭಾಷೆಗಳ ಕಲಿಕೆ, ಶ್ರೇಷ್ಠ ಸಾಹಿತ್ಯ ಕೃತಿಗಳ ಅಧ್ಯಯನವು ಮನುಕುಲದ ಪ್ರಗತಿ, ವಿವಿಧ ದೇಶಗಳ ಜನರ ಜೀವನಶೈಲಿಯ ವೈಶಿಷ್ಟ್ಯ ಮತ್ತು ಜಾಗತಿಕ ಸಂಸ್ಕೃತಿಗೆ ಆ ಜನರು ನೀಡಿರುವ ಕೊಡುಗೆಗಳನ್ನು ಮನನ ಮಾಡಿಕೊಳ್ಳಲು ಅನುವು ಮಾಡಿಕೊಡುತ್ತದೆ ಎಂಬ ಕಾರಣಕ್ಕಾಗಿ.

ಮಾರ್ಕ್ಸ್‌ನ ದೃಷ್ಟಿಯಲ್ಲಿ ಸಂಸ್ಕೃತಿ ಎಂದರೇನು ? ಇದು ನಿಜಕ್ಕೂ ಒಂದು ಕುತೂಹಲಕಾರಿ ಪ್ರಶ್ನೆಯೆ. ಆತನ ಬರಹಗಳು, ಸೂಕ್ಷ್ಮದೃಷ್ಟಿಯುಳ್ಳ ಟೀಕೆಗಳು ಹರಿತವಾದ ಒಳನೋಟಗಳಿಂದ ಕೂಡಿವೆ; ಆತನ ವಿವೇಚನಾಶಕ್ತಿಗೆ ಸಾಕ್ಷಿಯಾಗಿವೆ. ಗ್ರೀಕ್ ಭಾಷೆಯ ಶ್ರೇಷ್ಠ ಕೃತಿಗಳ ಕುರಿತು ಮಾರ್ಕ್ಸ್ ನಡೆಸುತ್ತಿದ್ದ ಚರ್ಚೆಯು ಆತ ಶೇಕ್ಸ್‌ಪಿಯರ್‌ನ ಯಾವುದಾದರೊಂದು ನಾಟಕದ ಸಾಲುಗಳನ್ನು ಉದ್ಧರಿಸಿ ವಿಶ್ಲೇಷಿಸಿದಷ್ಟೇ ಜ್ಞಾನಬೋಧವಾಗಿರುತ್ತಿತ್ತು. ಅಂತಹ ವೇಳೆಯಲ್ಲಿ ನಡೆಯುತ್ತಿದ್ದ ಚರ್ಚೆಗಳ ಮೂಲಕ ಆಯಾ ಕಾಲದ ಸಾಮಾಜಿಕ ಜೀವನಶೈಲಿ, ಪದ್ಧತಿಗಳು ಯಾವ ರೀತಿಯಲ್ಲಿ ಸಾಹಿತ್ಯ, ಕಲೆಗಳ ಮೇಲೆ ಪ್ರಭಾವ ಬೀರುತ್ತಿದ್ದವು ಎಂಬಂತಹ ಅಂಶಗಳು ಬೆಳಕಿಗೆ ಬರುತ್ತಿದ್ದವು. ಸಾಂಸ್ಕೃತಿಕ ವಿಚಾರಗಳ ಕುರಿತು ಮಾರ್ಕ್ಸ್‌ಗೆ ಇದ್ದ ಪ್ರಬುದ್ಧತೆಗೆ ಸರಿಸಾಟಿಯಾಗಿದ್ದವರು ಏಂಗೆಲ್ಸ್, ಪ್ಲೆಖನೋವ್, ಲೆನಿನ್ ಅವರಂತಹ ಅನೇಕ ಶ್ರೇಷ್ಠ ಮಾರ್ಕ್ಸ್‌ವಾದಿಗಳು. ಅದು ಸರಿ, ಈಗ ನಮ್ಮ ಮುಂದಿರುವ ಪ್ರಶ್ನೆ ಮಾರ್ಕ್ಸ್‌ವಾದದ ದೃಷ್ಟಿಯಲ್ಲಿ ಸಂಸ್ಕೃತಿ ಎಂದರೇನು, ಎಂಬುದು. ಮಾರ್ಕ್ಸ್‌ವಾದವು ಹಲವಾರು ಅಂಶಗಳನ್ನು ಒಳಗೊಂಡಿದೆ. ಅಲ್ಲದೆ, ಅವುಗಳಲ್ಲಿ ಪ್ಲೆಖನೋವ್, ಲೆನಿನ್ ಮತ್ತಿತರ ಸಮರ್ಥ ಮಾರ್ಕ್ಸ್‌ವಾದಿಗಳ ಕೊಡುಗೆಯೂ ಸೇರಿದೆ.

ಸಂಸ್ಕೃತಿ ಎಂಬುದನ್ನು ಬೇರೆಬೇರೆ ಜನರು ಹಲವಾರು ದೃಷ್ಟಿಕೋನಗಳಿಂದ ಅರ್ಥೈಸುವುದುಂಟು. ಸಾಂಸ್ಕೃತಿಕ ಚಳುವಳಿ ಎಂಬುದು ಇದೇ ಬಗೆಯ ಒಂದು ಪರಿಕಲ್ಪನೆ. ಇಂತಹ ಪರಿಕಲ್ಪನೆಯಲ್ಲಿ ಯಾವುದೇ ಒಂದು ದೇಶದ ಇತಿಹಾಸವನ್ನು ಹೆಕ್ಕಿ ತೆಗೆದು, ಎಲ್ಲ ಅಂಶಗಳನ್ನೂ ಸೇರಿಸಿರುವ ಪ್ರವೃತ್ತಿಯೂ ಇದೆ. ಇದಲ್ಲದೆ ರಾಷ್ಟ್ರೀಯ ಸಂಸ್ಕೃತಿ ಎಂಬ ಪರಿಕಲ್ಪನೆಯೂ ಇದೆ. ಇದು ಹಲವಾರು ರಾಷ್ಟ್ರೀಯ ಸಂಸ್ಕೃತಿಯನ್ನೊಳಗೊಂಡಿರುವ ಭಾರತದಂತಹ ರಾಷ್ಟ್ರವನ್ನು ಚರ್ಚೆಗೆ ತೆಗೆದುಕೊಂಡಾಗ ಸಮಸ್ಯಾತ್ಮಕವಾಗುತ್ತದೆ.

*(ಲನೇ ಪುಟಕ್ಕೆ)*

ತಿಂಗಳ ಪತ್ರಿಕೆ
**ಹೊಸತು**
ನಮ್ಮೆಡೆಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ



**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೫೦/- |
| ಮೂರು ವರ್ಷಕ್ಕೆ | ರೂ. ೩೫೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೮೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨

ಈ ತಿಂಗಳು (೩ನೇ ಪುಟದಿಂದ)
ಎರಡು ರಾಗಗಳ ನಡುವೆ ವಿದೇಶಿ ಕಂಪನಿಯು ಖನಿಜಗಳನ್ನು ಹೊತ್ತುಹೋಗಲು ದೆಹಲಿಯಲ್ಲಿ ತಾಳ ಹಾಕಿಸುತ್ತಿದೆ. ಇದು ನಮ್ಮ ದೇಶದ ರಾಜಕೀಯ, ಅರ್ಥಶಾಸ್ತ್ರ ಮತ್ತು ಸಂಸ್ಕೃತಿ.

ಚಿದಂಬರಂ-ಅದ್ವಾನಿ ದಂತೇವಾಡದಲ್ಲಿ ಒಂದೇ ಬಣ್ಣ, ಒಂದೇ ರಾಗ, ಒಂದೇ ಉದ್ದೇಶ ಹೊಂದಿದ್ದಾರೆ ಅಂದೆವಲ್ಲ, ಅದು ಸರಿಯಾದ ಮಾತೆ? ತೀರ್ಮಾನ ನಿಮ್ಮದು, ಮಾಹಿತಿ ಮಾತ್ರ ಎಲ್ಲರದು. ಏನದು ಮಾಹಿತಿ? ಇತ್ತೀಚೆಗೆ ಬೆಂಗಳೂರು ಬೃಹತ್ ಮಹಾಪಾಲಿಕೆಗೆ ನಡೆದ ಚುನಾವಣೆಯಂತೆ ದಂತೇವಾಡ ಮುನಿಸಿಪಾಲಿಟಿಗೆ ಚುನಾವಣೆ ನಡೆಯಿತು. ಅಲ್ಲಿ ೧೮ ಸದಸ್ಯರಿಲ್ಲ, ಕೇವಲ ೧೦ ಮಂದಿ ಇದ್ದಾರೆ. ಚುನಾವಣೆಯಲ್ಲಿ ಚಿದಂಬರಂ ಪಕ್ಷಕ್ಕೆ ಮೂರು, ಅದ್ವಾನಿ ಪಕ್ಷಕ್ಕೆ ಮೂರು ಸ್ಥಾನಗಳು ದೊರೆತವು. ಒಬ್ಬ ಅವರಿಬ್ಬರ ಪಕ್ಷಕ್ಕೂ ಸೇರಿಲ್ಲ, ನಕ್ಸಲರು ಸ್ಪರ್ಧೆಯಲ್ಲಿರಲಿಲ್ಲ, ಹಾಗಿದ್ದರೆ ಇನ್ನು ಮೂರು ಯಾರಿಗೆ? ಭಾರತೀಯ ಕಮ್ಯುನಿಸ್ಟ್ ಪಕ್ಷಕ್ಕೆ. ಐದು ವರ್ಷದ ಅವಧಿಯನ್ನು ಚಿದಂಬರಂ-ಅದ್ವಾನಿ ಪಕ್ಷಗಳು ಸಮನಾಗಿ ಹಂಚಿಕೊಂಡು ದಂತೇವಾಡದಲ್ಲಿ ಆಳ್ವಿಕೆ ನಡೆಸಿ ಜನರ ಉದ್ಧಾರ ಮಾಡುವುದಾಗಿ ಒಡಂಬಡಿಕೆಯಾಗಿದೆ. ಇಬ್ಬರೂ ಸೇರಿ ಕಮ್ಯುನಿಸ್ಟರನ್ನು ದೂರವಿರಿಸಿದ್ದಾರೆ, ಆಮೇಲೆ ನಕ್ಸಲರನ್ನು 'ಸಾಲ್ವಾ ಜುಡುಂ' ತಂತ್ರದಿಂದ ಸೋಲಿಸಿ ಜನರಿಗೆ ಮುಕ್ತಿ ದೊರಕಿಸಿಕೊಡುತ್ತಾರೆ. ನಮ್ಮ ದೇಶಕ್ಕೆ ಉತ್ತಮ ಭವಿಷ್ಯವಿಲ್ಲವೆಂದು ಯಾರು ತಾನೆ ಭಾವಿಸಿಯಾರು!! ಆಳ್ವಿಕೆಯನ್ನು ಜಂಟಿಯಾಗಿ ನಡೆಸುವ ''ಭಾಜಕಾಂ'' ಪಕ್ಷವು ಟಾಟಾ, ವೇದಾಂತ ಮತ್ತು ಬಹುರಾಷ್ಟ್ರೀಯ ಕಂಪನಿಗಳಿಗೆ ದಂತೇವಾಡದ ಹೆಬ್ಬಾಗಿಲು ತೆರೆದು, ರತ್ನಗಂಬಳಿ ಹಾಸಿ, ಬಾಗಿ ನಿಂತಿದೆ. ಅದನ್ನು ನೋಡಿ ನಕ್ಸಲರು ಕಾಡಿನಿಂದ ಓಡಿಹೋಗಬಹುದು ಮತ್ತು ಆಗ ಪೊಲೀಸರು ರಾಯಪುರಕ್ಕೆ ಹಿಂದಿರುಗಬಹುದು. ಇಲ್ಲವೆ ಹೊಲ-ಮನೆ ಕಳೆದುಕೊಂಡು ಕಾಂದಿಶೀಕರಾಗುವವರು ನಕ್ಸಲ್ ಪಡೆಗೆ ಸೇರಿಕೊಂಡಾಗ ಅವರನ್ನು ಬೇಟೆಯಾಡಲು ಕಾಡಿನಲ್ಲೇ ಉಳಿಯಬೇಕಾಗಬಹುದು.

* * *

ಸರ್ವೋಚ್ಚ ನ್ಯಾಯಾಲಯದ ಇತ್ತೀಚಿನ ತೀರ್ಪೊಂದು ಬಹಳ ಚರ್ಚೆಗೆ ಬಂದಿತು. ವಿವಾಹ ಪೂರ್ವದಲ್ಲಿ ಗಂಡು-ಹೆಣ್ಣು ಜೊತೆಯಲ್ಲಿ ವಾಸಿಸಬಹುದು ಎಂದು ಹೇಳುವಾಗ ನ್ಯಾಯಾಲಯವು ರಾಧಾ-ಕೃಷ್ಣರ 'ಸಹವಾಸ'ದ ನಿದರ್ಶನವನ್ನು ನೀಡಿ ತನ್ನ ನಿಲುವನ್ನು ಸಮರ್ಥಿಸಿಕೊಂಡಿತು. ಅಂತಹ ಪುರಾಣ ಕತೆ ಇಲ್ಲದಿದ್ದರೆ ಇಂತಹ ತೀರ್ಪು ಸಾಧ್ಯವಿಲ್ಲವೆಂದು ನ್ಯಾಯಾಲಯವು ಬಗೆಯುತ್ತದೆಯೆ? ಅಷ್ಟಕ್ಕೂ ರಾಧೆ ಮತ್ತು ಕೃಷ್ಣ ನದಿಯ ಬಳಿಯೋ ತೋಪಿನ ಬಳಿಯೋ ಸಂಧಿಸಿ ಕಾಲ ಕಳೆಯುತ್ತಿದ್ದುದೇ ಹೆಚ್ಚೆಂದು ಕತೆಗಳು ಹೇಳುತ್ತವೆ. ಪುರಾಣದ ಕತೆಯನ್ನು ಐತಿಹಾಸಿಕ ಸತ್ಯವೆಂದು ಭ್ರಮಿಸಿ ಕೋಲಾಹಲ ಎಬ್ಬಿಸಿರುವ ನಮ್ಮ ದೇಶದ ಹಿನ್ನೆಲೆಯಲ್ಲಿ ಸರ್ವೋಚ್ಚ ನ್ಯಾಯಾಲಯವು ಪ್ರಶ್ನಾರ್ಹ ರೀತಿಯಲ್ಲಿ ಮುಗ್ಗರಿಸಿದೆ. ಸದ್ಯಕ್ಕಿನ್ನೂ ಕೃಷ್ಣನ ತಥಾಕಥಿತ ಹದಿನಾರು ಸಾವಿರ ಪ್ರೇಯಸಿಯರ ಒಡನಾಟವನ್ನು ಉದ್ಧರಿಸಿ ನ್ಯಾಯಾಲಯ ಯಾವ ತೀರ್ಪನ್ನೂ ನೀಡಿಲ್ಲದಿರುವುದು ಸಮಾಧಾನದ ಸಂಗತಿ. ಹೀಗೆ ಪುರಾಣ ಕತೆಗಳ ಆಧಾರವು ತೀರ್ಪುಗಳಿಗೆ ಯೋಗ್ಯವೆಂದಾದರೆ ಇನ್ನೆಷ್ಟು ಮತ್ತು ಇನ್ನೆಂತೆಂತಹ ಕತೆಗಳನ್ನು ಆಯ್ಕೆ ಮಾಡಿಕೊಳ್ಳಬೇಕು? ತೀರಾ ಅವೈಜ್ಞಾನಿಕವಾದ ಪದ್ಧತಿಯೊಂದನ್ನು ಅನುಸರಿಸುವುದು ಸರ್ವೋಚ್ಚ ನ್ಯಾಯಾಲಯಕ್ಕೆ ಶೋಭಿಸುವುದಿಲ್ಲ. ಕಾವ್ಯದ ಕತೆಯೊಂದನ್ನು ಸಾಮಾಜಿಕ ವಾಸ್ತವ ಮತ್ತು ನೈತಿಕತೆಗೆ ಬುನಾದಿಯನ್ನಾಗಿ ಸ್ವೀಕರಿಸುವುದು ಕಾವ್ಯಕ್ಕೆ ಅವಮರ್ಯಾದೆಯಾಗುವುದಲ್ಲದೆ ಸಮಾಜವು ಸಂದಿಗ್ಧತೆಯಲ್ಲಿ ಪರ್ಯವಸಾನವಾಗಬಹುದೆಂಬ ಎಚ್ಚರ ಅಗತ್ಯ. ''ಶ್ರೀರಾಮಚಂದ್ರ ಇಲ್ಲಿಯೇ ಹುಟ್ಟಿದ್ದ'' ಎಂದು ಅಬ್ಬರಿಸಿ ಸಮಕಾಲೀನ ರಾಜಕೀಯಕ್ಕೆ ತಿರುವು ಕೊಡುವ ಪ್ರಸಂಗಕ್ಕೆ ಸರ್ವೋಚ್ಚ ನ್ಯಾಯಾಲಯವು ತನ್ನ ಮುದ್ರೆಯೊತ್ತುವ ಪೂರ್ವಸೂಚನೆ ಇದಾಗಬಾರದು, ಅಷ್ಟೆ.

* * *

ಐವತ್ತು ವರ್ಷಗಳ ಹಿಂದಿನ ವರದಿಗಳ ಕೆಲವು ತುಣುಕುಗಳನ್ನು ಪ್ರಕಟಿಸುವುದು ನಮ್ಮ ಕೆಲವು ವೃತ್ತಪತ್ರಿಕೆಗಳ ಪದ್ಧತಿ. ಅಂದಿನ ಚಿಂತನೆ ಮತ್ತು ವ್ಯವಹಾರ ಹೇಗಿತ್ತೆಂಬುದನ್ನು ನೆನಪಿಸಿಕೊಳ್ಳಲು ಇದು ಸಾಮಗ್ರಿಯನ್ನೊದಗಿಸುತ್ತದೆ. 'ದಿ ಹಿಂದು' ಪತ್ರಿಕೆಯು ಏಪ್ರಿಲ್ ೧, ೧೯೬೦ರಂದು ಪ್ರಕಟಿಸಿದ್ದ ವರದಿಯೊಂದನ್ನು ಏಪ್ರಿಲ್ ೧, ೨೦೧೦ರಂದು ಮುದ್ರಿಸಿತ್ತು. ಏಪ್ರಿಲ್ ೧ನ್ನು 'ಮೂರ್ಖರ ದಿನ' ಎನ್ನುವುದು ಒಂದು ಸಂಪ್ರದಾಯ; ವರ್ಷದ ಎಲ್ಲ ದಿನಗಳಲ್ಲೂ ಮೂರ್ಖರಾಗಿರುವುದು ಇನ್ನೊಂದು ಸಂಪ್ರದಾಯ. ತಮಿಳುನಾಡಿನ ಸಿ. ರಾಜಗೋಪಾಲಾಚಾರಿಯವರು ಅಲ್ಪಕಾಲ ಬಾಳಿದ ''ಸ್ವತಂತ್ರ ಪಕ್ಷ''ದ ಜನಕರು. ಅವರು ಛಪ್ರಾದಲ್ಲಿ ಮಾತನಾಡುತ್ತಾ ೧೯೬೦ರ ಮಾರ್ಚ್ ೩೦ರಂದು ಹೇಳಿದ್ದರಂತೆ, ತಮ್ಮ ಪಕ್ಷವು ದೇಶದಲ್ಲಿ ಧರ್ಮವನ್ನು ಸಂಸ್ಥಾಪಿಸಿ ರಾಜಕೀಯವನ್ನು ಧರ್ಮದ ಜಾಡು ಹಿಡಿಯುವಂತೆ ಮಾಡಲು ಶ್ರಮಿಸುತ್ತದೆ, ಎಂದು. ಶ್ರೀಕೃಷ್ಣ ಪರಮಾತ್ಮನೂ ಹಾಗೆಯೇ ಹೇಳಿಕೊಂಡಿದ್ದನೆಂದು ಭಗವದ್ಗೀತೆಯು ಸೂಚಿಸುತ್ತದೆ. ಕೃಷ್ಣ ಗೆದ್ದನೋ, ರಾಜಗೋಪಾಲಾಚಾರಿಯವರು ಸೋತರೋ ಎನ್ನುವುದು ಪ್ರಶ್ನೆಯಲ್ಲ. ಯಾವುದನ್ನು ಧರ್ಮವೆಂದು ಸ್ವೀಕರಿಸಬೇಕೆಂಬುದು ನಿಜಕ್ಕೂ ಪ್ರಮುಖವಾದ ಸವಾಲು. ರಾಜಾಜಿಯವರು ಪಂಚವಾರ್ಷಿಕ ಯೋಜನೆಗಳನ್ನು ''ಧರ್ಮದ ತಳಹದಿಯಲ್ಲಿ ರೂಪಿಸಬೇಕೇ ವಿನಾ ಭೌತವಾದಿ ನಿಯಮಗಳ ಪ್ರಕಾರ ಅಲ್ಲ'' ಎಂದು ಛಪ್ರಾದಲ್ಲಿ ಹೇಳಿದ್ದರು. ಹಾಗೇಕೆ ಹೇಳಿದರು ಗೊತ್ತೆ? ಎರಡನೆಯ ಯೋಜನೆಯು ''ಖಾಸಗಿ ಆಸ್ತಿಯ ನಿರ್ಮೂಲನ ಮಾಡಹೊರಟಿದೆ, ಅದು ಧರ್ಮವಲ್ಲ'' ಎಂಬ ಕಾರಣದಿಂದ. ಇದರಲ್ಲಿ ಹತ್ತಾರು ಆಭಾಸಗಳಿವೆ; ಎರಡನ್ನು ಮಾತ್ರ ಇಲ್ಲಿ ಪ್ರಸ್ತಾಪಿಸಬಹುದು: (ಅ) ಎರಡನೆಯ ಪಂಚವಾರ್ಷಿಕ ಯೋಜನೆಯು ಭೂಸುಧಾರಣೆಯ ಅವಶ್ಯಕತೆಯನ್ನು ಒತ್ತಿಹೇಳಿತ್ತೇ ವಿನಾ ಖಾಸಗಿ ಆಸ್ತಿಯನ್ನು ಉತ್ಪಾಟಿಸಲು ಉದ್ದೇಶಿಸಿರಲಿಲ್ಲ, ಬದಲಾಗಿ, ಔದ್ಯಮಿಕ ಕ್ಷೇತ್ರದಲ್ಲಿ ಖಾಸಗಿ ಆಸ್ತಿಯ ವೃದ್ಧಿಗೆ ನಕಾಶೆ ತಯಾರಿಸಿದ್ದಿತು. (ಆ) ಭೂಸುಧಾರಣೆಯನ್ನು ರಾಜಾಜಿಯವರು ಅಧರ್ಮವೆಂದು ಮೂದಲಿಸಿದಾಗ ಭೂಮಾಲೀಕರ ಒಡೆತನ ಮತ್ತು ಉಪಟಳವನ್ನು ಧರ್ಮ ಎಂದು ಸಾರಿದರು. ಊಳಿಗಮಾನ್ಯ ಪದ್ಧತಿಯು ಅವರಿಗೆ ಧಾರ್ಮಿಕ ಮೌಲ್ಯವಾಗಿ ಕಂಡಿತ್ತೆಂದರೆ ಬಹುಜನರ ಸೌಖ್ಯವು ಅವರಿಗೆ ಅಪಥ್ಯವಾಗಿತ್ತೆಂದರ್ಥ. ಅಸ್ಪೃಶ್ಯತೆಯನ್ನು ರಾಜಾಜಿ ಸ್ವತಃ ತೀವ್ರವಾಗಿ, ಪ್ರಾಯೋಗಿಕವಾಗಿ, ವಿರೋಧಿಸಿದ್ದರು; ಆ ದೃಷ್ಟಿಯಿಂದ ಅವರು ಶ್ಲಾಘನೀಯರು. ಆದರೆ ಊಳಿಗಮಾನ್ಯ ಪ್ರಭುತ್ವವು ಜನವಿರೋಧಿ ಮಾದರಿಯೆಂದು ಅವರಿಗೆ ತೋರಲಿಲ್ಲ. ರಾಜಾಜಿಯವರು ಬೋಧಿಸಿದ್ದ ಧರ್ಮದ ಅನುಯಾಯಿಗಳು ಈಗಲೂ ಪ್ರಭುತ್ವದ ಆಧ್ಯಸ್ಥಾನಗಳಲ್ಲಿದ್ದಾರೆ. ಕಳೆದ ಐವತ್ತು ವರ್ಷಗಳಲ್ಲಿ ನಾವು ಕ್ರಮಿಸಿದ ಹಾದಿ ಅಷ್ಟೇನೂ ಪ್ರಶಸ್ತವಲ್ಲವೆಂದು ಇದರ ಭಾವಾರ್ಥ. ಹಾಗಾದರೆ ಮುಂದಿನ ಐವತ್ತು ವರ್ಷಗಳ ಪಾಡೇನು? ಸ್ವತಂತ್ರ ಪಕ್ಷವು ಮಹಾರಾಜ-ಮಹಾರಾಣಿಯರ ಪಕ್ಷವೆಂದು ಹೇಳಲಾಗುತ್ತಿತ್ತು. ಆ ಪಕ್ಷವೇನೋ ಹೋಯಿತು, ಆದರೆ ಅದರ ತಾತ್ವಿಕ ನಿಲುವನ್ನು ಜೀವಂತವಾಗಿರಿಸುವ ಮನಮೋಹನ ಸಿಂಗ್ – ನಿತಿನ್ ಗಡ್ಕರಿ ಸಮೂಹ ಪ್ರಬಲವಾಗಿದೆ. ಮುಂದಿನ ಐವತ್ತು ವರ್ಷಗಳಲ್ಲಿ ಅದು ಮುಂದುವರಿಯಬೇಕೆ?

* * *

ಗೇತ್ನರ್ ಎಂಬ ಅಮೆರಿಕಾ ಸರ್ಕಾರದ ಪ್ರತಿನಿಧಿ ಇತ್ತೀಚೆಗೆ ನಮ್ಮ ದೇಶಕ್ಕೆ ಬಂದಿದ್ದು, ಆರ್ಥಿಕ ''ಸುಧಾರಣೆ'' ಗಳು ಇನ್ನೂ ಆಳವಾಗಿ, ವ್ಯಾಪಕವಾಗಿ ಆಗಬೇಕೆಂದು ಉಪದೇಶಿಸಿ ಹೋದನೆಂದು ವರದಿಯಾಗಿದೆ. ಹೀಗೆ ಉಪದೇಶಿಸುವ ಮಂದಿ ಪ್ರತಿನಿತ್ಯ ಹಿಂಡುಹಿಂಡಾಗಿ ನಮ್ಮ ದೇಶಕ್ಕೆ ಧಾಳಿ ಇಡುವುದನ್ನು ನೋಡುತ್ತಲೇ ಇದ್ದೇವೆ. ಆದರೆ ಗೇತ್ನರ್ ತನ್ನ ದೇಶದ ಆರ್ಥಿಕತೆಯನ್ನು ಸುಧಾರಿಸಿಕೊಳ್ಳಲು ಉಪದೇಶ ಮಾಡಿದ್ದೆಂದು ಸ್ವತಃ ಗೇತ್ನರ್‌ನೇ ಹೇಳಿ ಉಪಕರಿಸಿದ್ದಾನೆ. ಅವನ ಹೇಳಿಕೆ ಭಾಗಶಃ ಹೀಗಿದ್ದಿತು: ''ನಮ್ಮ ದೇಶದಲ್ಲಿ ಸಾಲ ಮಾಡಿ ಸರಕುಗಳನ್ನು ಖರೀದಿಸಿ ಭೋಗಿಸುವ ಪದ್ಧತಿ ಮಿತಿಮೀರಿದೆ. ಅದರಿಂದ ಹೊರಬರುವುದು ಅಮೆರಿಕಾ ಮುಂದಿರುವ ಇಂದಿನ ಸವಾಲು. ಅದಕ್ಕಾಗಿ ನಾವು ವಿಶಾಲವಾದ ಸುಧಾರಣೆಗಳನ್ನು, ಬದಲಾವಣೆಗಳನ್ನು, ಹೊರದೇಶಗಳಲ್ಲಿ ನಿರೀಕ್ಷಿಸುತ್ತೇವೆ. ...ವಿಶ್ವದ ಬೇರೆ ದೇಶಗಳಲ್ಲಿ ಮುಕ್ತ ವಾತಾವರಣ ಬರುವಂತಹ ಸುಧಾರಣೆಗಳಾಗುವುದು ಅವಶ್ಯಕ.'' ಹೀಗೆ ಹೇಳಿದ ಮಹಾನುಭಾವ ನಮ್ಮ ದೇಶದ ಮೂರು ವಲಯಗಳಲ್ಲಿ ಮೂಲಭೂತ ಬದಲಾವಣೆಗಳನ್ನು ಮಾಡಿಕೊಳ್ಳಬೇಕೆಂದು ಸಲಹೆ ನೀಡಿದ್ದಾನೆ: (ಅ) ವಿಸ್ತತಾರ್ಥದಲ್ಲಿ ಆರ್ಥಿಕ ನೀತಿಗಳು, (ಆ) ಹಣಕಾಸು ಕ್ಷೇತ್ರದಲ್ಲಿ ಸುಧಾರಣೆಗಳು (ಅಂದರೆ, ವಿದೇಶಿ ಹಣದ ಮಾನ್ಯತೆಗೆ ಅಗ್ರಸ್ಥಾನವಿರಬೇಕೆಂದರ್ಥ), ಮತ್ತು (ಇ) ಮೂಲಭೂತ ಅವಶ್ಯಕತೆಯ ನಿರ್ಮಾಣಕ್ಕೆ ಹಣಕಾಸು ಒದಗಿಸುವುದು (ಅಂದರೆ, ಯಾವುದೇ ಕ್ಷೇತ್ರವಾಗಲಿ, ವಿದೇಶಿ ಬಂಡವಾಳದ ಹೂಡಿಕೆಗೆ ಆದ್ಯತೆ ನೀಡಬೇಕೆಂದರ್ಥ). ಇದನ್ನೆಲ್ಲಾ ಮನಮೋಹನ ಸಿಂಗ್ – ಪ್ರಣವ ಮುಖರ್ಜಿ – ಅಹ್ಲುವಾಲಿಯ ಮುತುವರ್ಜಿ ವಹಿಸಿ ಮಾಡುತ್ತಿದ್ದಾರೆ. ಇನ್ನೂ ಹೆಚ್ಚು ಕ್ಷಿಪ್ರಗತಿಯಲ್ಲಿ ಅದನ್ನು ಮಾಡಬೇಕೆಂದು ಗೇತ್ನರ್ ಆದೇಶಿಸಿದ್ದಾನೆ, ಇಂಥದಕ್ಕೆಲ್ಲಾ ಓಂಕಾರ ಹೊರಡಿಸುವ ಪ್ರಣವ ಮುಖರ್ಜಿ ಅದನ್ನು ಮಾಡಲು ಕಾಯಾ-ವಾಚಾ-ಮನಸಾ ಬದ್ಧರಾಗಿದ್ದಾರೆಂಬುದು

ನಾಚಿಕೆಗೇಡಿನ, ಅಯೋಗ್ಯತನದ, ಸೂಚನೆ.

* * *

ಅಮೆರಿಕಾದ ಆಣತಿಯನ್ನು ಇಂದ್ರನ ವರಪ್ರಸಾದ ವೆಂಬಂತೆ ಸ್ವೀಕರಿಸುವ ನಮ್ಮ ದೇಶದ ಸರ್ಕಾರದ ನೇತಾರರಿಗೆ ಹೇಡ್ಲಿಯೆಂಬ ಧೂರ್ತನನ್ನು ಭೇಟಿಯಾಗಲು ಅಮೆರಿಕಾ ಸರ್ಕಾರದ ಪರವಾನಗಿ ದೊರೆತಿಲ್ಲ. ಅದಿನ್ನೆಷ್ಟು ಅಂಗಲಾಚಿ ಬೇಡಿಕೊಳ್ಳಬೇಕೋ ಮನಮೋಹನ ಸಿಂಗ್ ! ಸ್ನೇಹ ಏಕಮುಖಿಯಾದರೆ ಇದೇ ಅವಸ್ಥೆ. ಅಂತಹ ಅವಸ್ಥೆಗೆ ನಮ್ಮ ದೇಶವನ್ನು ಸಿಂಗ್ ಸರ್ಕಾರ ದೂಡಿದೆ. ಪರಮಾಣು ಆಧರಿತ ವಿದ್ಯುತ್ ಕೇಂದ್ರವನ್ನು ಅಮೆರಿಕಾ ಕಂಪನಿಗಳು ನಮ್ಮ ದೇಶದಲ್ಲಿ ಸ್ಥಾಪಿಸಲು ಹಾಕ ಲಾಗಿರುವ ಷರತ್ತುಗಳನ್ನು ಸಿಂಗ್ ಸರ್ಕಾರ ಒಪ್ಪಿರುವುದು ಇಂತಹ ಅಸಮಾನತೆಯ ಮೂಲದ ಸ್ನೇಹದ ಪರಿಣಾಮ. ಅದನ್ನು ಧಿಕ್ಕರಿಸಿ ನಿರಾಕರಿಸಬೇಕಾದ್ದು ನಮ್ಮ ದೇಶದ ಗೌರವವನ್ನು ಉಳಿಸಿಕೊಳ್ಳಲು ಇರುವ ಏಕೈಕ ಮಾರ್ಗ.

* * *

ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಗೆ ಚುನಾವಣೆ ನಡೆದಾಗ ಮತದಾನ ಶೇಕಡ ೫೦ನ್ನೂ ಮುಟ್ಟಲಿಲ್ಲ. ಮತದಾರರು ಬೇಜವಾಬ್ದಾರಿಯಿಂದ ವರ್ತಿಸಿದ್ದಾರೆ, ಅವರಿಗೆ ಪ್ರಜಾಪ್ರಭುತ್ವದ ಬಗ್ಗೆ ಆದರವಿಲ್ಲ, ಇನ್ನು ಮುಂದೆ ಕಡ್ಡಾಯ ಮತದಾನದ ಆಜ್ಞೆ ಹೊರಡಿಸ ಬೇಕು, ಇತ್ಯಾದಿ ಹಲವು ವಿಮರ್ಶೆಗಳು – ಸಲಹೆಗಳು ಬಂದಿವೆ. ಕಗ್ಗಂಟಿನ ಒಂದು ಪ್ರಶ್ನೆ ಮಾತ್ರ ಹಾಗೆಯೇ ಉಳಿದಿದೆ : ಎಷ್ಟು ಮಂದಿ ಅಗಾಧ ನಿಷ್ಠೆಯಿಂದ ಮತದ ಹಕ್ಕು ಚಲಾಯಿಸಿದರೂ ಇದೇ ಅಭ್ಯರ್ಥಿಗಳಿಗೆ ತಾನೆ ಮತ ನೀಡಬೇಕು? ದೇಶಪಾಂಡೆ - ಈಶ್ವರಪ್ಪ - ದೇವೇಗೌಡ, ಈ ಮೂವರಲ್ಲಿ ನಮಗೆ 'ಹಿತವರು' ಯಾರೂ ಇಲ್ಲದಿದ್ದಾಗ ಏನು ಮತದಾನ ಮಾಡುವುದು ? ಪ್ರಮಾಣಾನುಗುಣ ಪ್ರಾತಿನಿಧ್ಯದ ಪದ್ಧತಿಯನ್ನು ಜಾರಿ ಗೊಳಿಸಿದರೆ ಮತದಾನಕ್ಕೆ ಅರ್ಥವಿರುತ್ತದೆ; ಅದಿಲ್ಲದಿದ್ದಾಗ ನಮಗೆ ಬೇಡದಿದ್ದವರ ಪೈಕಿ ಆಯ್ಕೆಯೆಂಬ ಪ್ರಹಸನದಲ್ಲಿ ನಾವೇಕೆ ಕೋಡಂಗಿಗಳಾಗಬೇಕೆಂಬ ಪ್ರಶ್ನೆ ಹಾಗೇ ಉಳಿಯುತ್ತದೆ. ಈಗ ಗೆದ್ದಿರುವವರು ಗಳಿಸಿದ ಮತಗಳ ಶೇಕಡ ಪ್ರಮಾಣವನ್ನು ನೋಡಿದರೆ ಅವರು ಯಾರ ಪ್ರತಿನಿಧಿಗಳಾಗಲು ಯೋಗ್ಯರೆಂಬ ಶಂಕೆ ಬಾಧಿಸುತ್ತದೆ.

* * *

ಮುಸಲ್ಮಾನ ಅಲ್ಪಸಂಖ್ಯಾತರಿಗೆ ಶಿಕ್ಷಣ ಮತ್ತು ಉದ್ಯೋಗದಲ್ಲಿ ಮೀಸಲಾತಿಯು ಸರಿಯೆಂದು ಸರ್ವೋಚ್ಚ ನ್ಯಾಯಾಲಯವು ತೀರ್ಪಿತ್ತಿದೆ. ಈಗಾಗಲೆ ಇದರ ಸೌಲಭ್ಯವನ್ನು ಪಡೆದಿರುವ ಪಂಗಡಗಳಲ್ಲಿ ಎಂತಹ ಕುಟುಂಬಗಳ ಹಿನ್ನೆಲೆಯುಳ್ಳವರಿಗೆ ಅದರ ಲಾಭ ದಕ್ಕಿದೆ ಯೆಂಬುದನ್ನು ವಿಶ್ಲೇಷಿಸಿ ಮೀಸಲಾತಿಯು ಉಂಟು ಮಾಡಿರುವ ಸಾಮಾಜಿಕ ಬದಲಾವಣೆಯನ್ನು ಮಾಪನ ಮಾಡಿದರೆ ಅಲ್ಪಸಂಖ್ಯಾತರಲ್ಲಿ ಮೀಸಲಾತಿ ಎಷ್ಟು ಫಲಕಾರಿಯಾಗಬಹುದೆಂದು ಊಹಿಸಲು ಸಾಧ್ಯ. ಪಶ್ಚಿಮ ಬಂಗಾಳದಲ್ಲಿ ಮುಸಲ್ಮಾನರಿಗೆ ಶೇಕಡ ೧೦ರಷ್ಟು ಮೀಸಲಾತಿ ಜಾರಿಯಲ್ಲಿದೆಯೆಂದು ಹೇಳುತ್ತಾರೆ. ಅದರ ಪ್ರಭಾವವನ್ನು ಅಧ್ಯಯನ ಮಾಡಿ ತಿಳಿಸುವ ಕೆಲಸವಾಗಿಲ್ಲ. ಪ್ರಾಥಮಿಕ-ಮಾಧ್ಯಮಿಕ ಶಾಲೆಯನ್ನು ತಟಾಯಿಸಿ ಬರದವರಿಗೆ ಮೀಸಲಾತಿಯ ಗುಲಗಂಜಿ ಪ್ರಮಾಣದ ಪ್ರಯೋಜನವೂ ದೊರೆಯುವುದಿಲ್ಲವೆಂದು ನಿಖರವಾಗಿ ತಿಳಿದಿದೆ. ಹೀಗಿರುವಾಗ ಮೀಸಲಾತಿಯು ಯಾರಿಗೆ ಅವಶ್ಯಕವೋ ಅವರಿಗೆ ಪ್ರಾಥಮಿಕ ಶಿಕ್ಷಣದ ಹಂತದಲ್ಲಿ ಉಚಿತ ವಸತಿ ಶಾಲೆಗಳನ್ನು ರಚಿಸಿಕೊಡುವುದು ಅತ್ಯವಶ್ಯಕ. ಇಲ್ಲದಿದ್ದರೆ ಅವಕಾಶ ವಂಚಿತರು ಹಾಗೆಯೇ ಉಳಿದುಬಿಡುವ ಅಪಾಯವಿದೆ.

ಈ ಸಂದರ್ಭದಲ್ಲಿ ಬಂಗ್ಲಾದೇಶದ ನ್ಯಾಯಾಲಯವು ನೀಡಿರುವ ಒಂದು ತೀರ್ಪನ್ನು ಪ್ರಸ್ತಾಪಿಸಬಹುದೇನೊ. ಮುಖಕ್ಕೆ ಮುಸುಕು ಹಾಕಿಕೊಳ್ಳುವುದು ಅಥವಾ ಹಾಕಿ ಕೊಳ್ಳದಿರುವುದು ಮುಸಲ್ಮಾನ ಮಹಿಳೆಯರಿಗೆ ಸ್ವಂತದ ಆಯ್ಕೆಯ ವಿಷಯವೇ ಹೊರತು ಮುಲ್ಲಾ - ಮೌಲ್ವಿಗಳು ವಿಧಿಸಬಹುದಾದ ನಿಯಮ ಸರ್ವಥಾ ಅಲ್ಲವೆಂದು ನ್ಯಾಯಾಲಯ ಹೇಳಿದೆ. ಜಡ್ಡು ಮತಾಂಧತೆಗೆ ಇದು ಒಂದು ಪ್ರಬಲ ಪ್ರತಿಕ್ರಿಯೆ. ಎಲ್ಲ ಮತಧರ್ಮಗಳಲ್ಲೂ ಅವುಗಳದೇ ಆದ ವಿಶಿಷ್ಟ ಜಡ್ಡುತನಗಳು ಸಾಂದ್ರವಾಗಿರುವ ಸಂದರ್ಭದಲ್ಲಿ ಈ ನಿಲುವು ಸ್ವಾಗತಾರ್ಹವಾಗಿದೆ. ವೈಚಾರಿಕ ವಿಮರ್ಶೆಯು ಎಲ್ಲ ಮತಧರ್ಮಗಳಿಗೂ ಅಗತ್ಯವಾಗಿ ಬೇಕಾಗಿದೆ. ಕಳೆದ ಶತಮಾನದಲ್ಲಿ ಎಲ್ಲೆಡೆ ಸ್ವಲ್ಪ ಪ್ರಖರವಾಗಿ ವ್ಯಕ್ತವಾಗುತ್ತಿದ್ದ ವೈಚಾರಿಕತೆಯು ಕೆಲವು ರಾಜಕೀಯ ಕಾರಣಗಳಿಂದಾಗಿ ತನ್ನ ಹರಿತವನ್ನು ಕಳೆದು ಕೊಳ್ಳುತ್ತಿರುವುದು ಯೋಚನೆಗೀಡುಮಾಡುವಂತಹ ಅಂಶ. ಅಸ್ಪೃಶ್ಯರೆಂದು ಯಾರನ್ನು ಹೀನಾಯವಾಗಿ ನಡೆಸಿಕೊಳ್ಳಲಾಗುತ್ತಿತ್ತೋ (ಅದರ ಬೇರು ಇನ್ನೂ ಉಳಿದಿದೆ) ಅಂಥವರ ಪ್ರಜ್ಞೆಯನ್ನು ಹೊಡೆದೆಬ್ಬಿಸಲು ಇತರರು ಸಹ ಮಧ್ಯ ಪ್ರವೇಶಿಸಿದ್ದರು. ಅದಾಗಿ ಅದೇ ಆ ಪ್ರಜ್ಞೆ ಅವರಲ್ಲೇ ಅರಳಲಿ ಎಂದು ಇತರರು ಅಂತಹ ಘೋರ ಪಾತಕವನ್ನು ವಿಮುಖರಾಗಿ ನೋಡುತ್ತಾ ಕುಳಿತಿರಲಿಲ್ಲ. ಅಂದರೆ, ವೈಚಾರಿಕತೆಗೆ ಸಾರ್ವತ್ರಿಕ ಅನ್ವಯ ಇದೆ ಮತ್ತು ಅದು ಅಗತ್ಯ. ಟೆನಿಸ್‌ನಲ್ಲಿ ಸೋಲಿನ ಸರಮಾಲೆಯನ್ನು ಧರಿಸಿದ ಸಾನಿಯಾ ಎಂಬ ಬಾಲೆ ಇತ್ತೀಚೆಗೆ ಒಬ್ಬ ಕ್ರಿಕೆಟಿಗನನ್ನು ಮದುವೆಯಾಗುವ ಸಂದರ್ಭದಲ್ಲಿ ಮತಧರ್ಮಗಳ ಅತಿಮೌಢ್ಯದ ದಟ್ಟಹೊಗೆ ಯನ್ನು ನಾವು ಕಂಡೆವು. ಅಂತಹ ಹೊಗೆಯ ನಡುವೆ ಉಸಿರಾಡಿಕೊಂಡು ಜೀವಿಸಬೇಕಾಗಿರುವ ಜನ ನಮ್ಮ ನಡುವಿನಲ್ಲಿದ್ದಾರೆ. ಸ್ವತಃ ಮುಲ್ಲಾ – ಮೌಲ್ವಿಗಳೇ ತಮ್ಮ ಕಟ್ಟುನಿಟ್ಟಾದ ನಿಯಮಗಳ ಅರ್ಥರಹಿತ ಜಡತನವನ್ನು ಕಂಡುಕೊಳ್ಳುವ ಸನ್ನಿವೇಶವನ್ನು ಸಾನಿಯಾ ಸೃಷ್ಟಿಸಿಬಿಟ್ಟಳು. ಯಾವುದೇ ಮತಧರ್ಮದ ಅನುಯಾಯಿಗಳಾಗಿರಲಿ, ಅವರಿಗೆಲ್ಲಾ ಅನ್ವಯವಾಗುವ ಕನಿಷ್ಠ ನಾಗರಿಕ ಕಾನೂನು ನಿಯಮಾವಳಿ ಅಗತ್ಯವೆಂಬುದನ್ನು ಈ ಪ್ರಸಂಗ ಎತ್ತಿತೋರಿಸಿತು. ದೂರವಾಣಿಯ ಹೆಸರೇ ಇಲ್ಲದಿದ್ದಾಗ ಆಚರಣೆಗೆ ಬಂದಿದ್ದ ಮಧ್ಯಕಾಲೀನ ಯುಗದ 'ತಲಾಕ್' ನಿಯಮವನ್ನು ಈಗ ದೂರವಾಣಿಯ ಮುಖೇನ ಜಾರಿಗೆ ತರುವುದು, ಈ-ಮೇಲ್ ಮೂಲಕ ವಿವಾಹ ವಿಚ್ಛೇದನ ತಿಳಿಸುವುದು, ಇದೆಲ್ಲಾ ಹಳೆಯ ನಿಯಮದ ವಿಡಂಬನೆಯಂತೆ ತೋರುತ್ತದೆ. ಎಲ್ಲರೂ ಅವರವರ ಮತಧರ್ಮಗಳ ಆಚರಣೆಗಳನ್ನು ಸರ್ವಥಾ ಪಾಲಿಸಿಕೊಳ್ಳಲಿ, ಆದರೆ ಅತಿರೇಕಕ್ಕೆ ಹೋಗಿ ಯಾವುದೇ ವ್ಯಕ್ತಿಗೆ ಕಳಂಕ, ನಷ್ಟ ಉಂಟುಮಾಡುವ ಸಂಭವ ಕೂಡದು. ಆದ್ದರಿಂದ, ಮತಧಾರ್ಮಿಕ ಕಟ್ಟುಪಾಡಿನ ಜೊತೆ ಒಂದು ಸಮಾನ ನಾಗರಿಕ ಸಂಹಿತೆಯೂ ಅಸ್ತಿತ್ವದಲ್ಲಿರಬೇಕು. ಯಾವ ಮತಧರ್ಮದ ವೈಶಿಷ್ಟ್ಯವನ್ನೂ ರದ್ದುಗೊಳಿಸದೆ ಎಲ್ಲರಿಗೂ ನಾಗರಿಕ ಹಕ್ಕುಗಳು ಮತ್ತು ನಾಗರಿಕ ಗೌರವದ ಸ್ಥಾನಮಾನ ದೊರೆಯುವಂತೆ ಕ್ರಮಗಳನ್ನು ಅನುಸರಿಸುವುದು ಪ್ರಜಾಪ್ರಭುತ್ವವನ್ನು ಗಟ್ಟಿಗೊಳಿಸುವ ಒಂದು ಹಾದಿ.

* * *

ಯುವಕರು ತಮ್ಮ ಸಹಜ ಲಕ್ಷಣವಾದ ಕ್ರಿಯಾಶಾಲಿತ್ವ ವನ್ನು ಕಳೆದುಕೊಂಡರೆ ಏನು ಗತಿ, ಎಂಬುದನ್ನು ಸೂಚಿಸಲು ಗಾಂಧೀಜಿ ''ಉಪ್ಪು ತನ್ನ ಉಪ್ಪುತನ ಕಳೆದುಕೊಂಡರೆ ಉಪ್ಪನ್ನು ಎಲ್ಲಿ ಅರಸೋಣ'' ಎಂಬ ನುಡಿಯನ್ನು ಬಳಸಿದ್ದರು. ಈಗ ನಾವೇನು ಮಾಡುತ್ತೇವೆ ? ಎಂಥದೋ ಅನ್ಯಾಯವಿದ್ದರೆ ಅದನ್ನು ಹೋಗಲಾಡಿಸಬೇಕೆಂದು ರಾಜಭವನದಲ್ಲಿರುವ ರಾಜ್ಯಪಾಲರಲ್ಲಿಗೆ ಧಾವಿಸುತ್ತೇವೆ. ಆದರೆ ರಾಜಭವನವು ತನ್ನ ರಾಜತ್ವ ಕಳೆದುಕೊಂಡರೆ ಎಲ್ಲಿಗೆ ಹೋಗಬೇಕು ? ಇದು ಯೋಚಿಸಬೇಕಾದ ವಿಷಯ. ನಲವತ್ತು ಅತಿಥಿಗಳಿಗೆ ರಾಜಭವನದಲ್ಲಿ ಭೋಜನದ ಏರ್ಪಾಡಾಗಬೇಕಾಗಿದೆಯೆನ್ನಿ. ಎಷ್ಟು ಖರ್ಚು ಅಂದಾಜಿ ಸುತ್ತೀರಿ ? ಐವತ್ತು ಸಾವಿರವೆ ? ಒಂದು ಲಕ್ಷ ನಲವತ್ತು ಸಾವಿರವೆ ? ಎರಡನೆಯ ಊಹೆ ಹೆಚ್ಚುಕಡಿಮೆ ಸರಿಯೆಂದು ತಿಳಿದುಬಂದಿದೆ. ಭೋಜನಶಾಲೆಗೆ ಪುಷ್ಪಾಲಂಕಾರ ಬೇಕು. ಅಂದಾಜು ವೆಚ್ಚವೆಷ್ಟು? ೫೦,೦೦೦ ರೂಪಾಯಿಗಳು. ಮೂಗಿನ ಮೇಲೆ ಬೆರಳಿಡುತ್ತೀರಾ ? ಇಡಿ, ನಿಮ್ಮ ಮೂಗಿಗೆ ಒಂದು ಬೆರಳು ಅಷ್ಟೇನೂ ಭಾರವಲ್ಲ. ಆದರೆ ರಾಜಭವನದ ವಹಿವಾಟು ಸಾಕಷ್ಟು ಭಾರ ಹೇರುತ್ತಿದೆ. ನಮ್ಮದು ಗಾಂಧೀಜಿ ನಾಡು, ರಾಜಭವನದ ಆವರಣದಲ್ಲಿ ಕೂಡ ಒಂದು ಗಾಂಧಿ ಪ್ರತಿಮೆ ಇದೆ !

ಕೆಲವು ತಿಂಗಳುಗಳ ಹಿಂದೆ ರಾಜಭವನದಲ್ಲಿ ನೌಕರರ ನೇಮಕಾತಿಯಲ್ಲಿ ಎಂಥದೋ ಹಗರಣಗಳಿದ್ದವು, ನೇಮಕಾತಿ ನಿಯಮಗಳ ಉಲ್ಲಂಘನೆಯಾಗಿದ್ದುವು, ಎಂದೆಲ್ಲಾ ಪತ್ರಿಕೆ ಗಳಲ್ಲಿ ವರದಿಗಳು ಪ್ರಕಟವಾಗಿದ್ದುವು. ಈಗ ಅದು ಮರೆತು ಹೋಗಿದೆ ! ರಾಜಭವನವನ್ನು ಪ್ರಶ್ನಿಸುವುದುಂಟೆ, ಎಂದು ಎಲ್ಲಾ ಗಪ್‌ಚಿಪ್ ಆಗಿದ್ದಿರಬೇಕು. ಆದರೆ ಈಚೆಗೆ 'ಹೊಸತು' ಗಮನಕ್ಕೆ ಬಂದಿರುವ ಒಂದು ವಿದ್ಯಮಾನ ಆತಂಕಕಾರಿ ಯಾಗಿದೆ. ಅದು ತುಮಕೂರು ವಿಶ್ವವಿದ್ಯಾಲಯದ ಹಾಲಿ ಉಪಕುಲಪತಿಗಳ ವೇತನಕ್ಕೆ ಸಂಬಂಧಿಸಿದ್ದು. ದೇಶದಲ್ಲೆಲ್ಲಾ ಉಪಕುಲಪತಿಗಳ ವೇತನವು ಎಪ್ಪತ್ತೆದು-ಎಂಭತ್ತು ಸಾವಿರ ಎಂದು ನಿಯಮವಿದೆ. ರಾಜಭವನದ ಆಣತಿಯಂತೆ ತುಮಕೂರು ವಿಶ್ವವಿದ್ಯಾನಿಲಯದ ಉಪಕುಲಪತಿ ಡಾ|| ಶರ್ಮ ಅವರ ವೇತನ ಮಾತ್ರ ಎರಡು ಲಕ್ಷ ಇಪ್ಪತ್ತಮೂರು ಸಾವಿರ. ಅದು ಹೇಗೆಂಬ ಕುತೂಹಲ ಹಲವರದು. ಮಾನ್ಯ ಡಾ|| ಶರ್ಮರು ೩.೫.೨೦೦೯ರಂದು ಉಪಕುಲಪತಿಯಾಗಿ ಅಧಿಕಾರ ವಹಿಸಿಕೊಂಡರು. ಆಗ ಅವರ ವೇತನವು ಬೇರಾವುದೇ ಉಪಕುಲಪತಿಯ ವೇತನಕ್ಕೆ ಸಮನಾಗಿತ್ತು. ಆದರೆ ಐದು ತಿಂಗಳ ನಂತರ ೭.೧೦.೨೦೦೯ರಂದು ರಾಜಭವನವು ಅವರ ವೇತನವನ್ನು ಪರಿಷ್ಕರಿಸಿತು. ಅದು ಹೇಗೆ ? ಮಾನ್ಯ ಡಾ|| ಶರ್ಮರು ಬೆಂಗಳೂರಿನ ಆರ್. ವಿ. ಇಂಜಿನಿಯರಿಂಗ್ ಕಾಲೇಜಿನಲ್ಲಿ

ಪ್ರಾಧ್ಯಾಪಕರಾಗಿದ್ದು ಅಲ್ಲಿಂದ ಉಪಕುಲಪತಿಗಳಾಗಿ ತೆರಳಿದರು. ಸದರಿ ಕಾಲೇಜಿನವರು ೯.೬.೨೦೦೮ರಂದು ಒಂದು ಪತ್ರದಲ್ಲಿ ಡಾ|| ಶರ್ಮರಿಗೆ ಎಂ.ಟೆಕ್. ಇತ್ಯಾದಿ ವಿಭಾಗಗಳಲ್ಲಿ ನಿರ್ದೇಶನ ನೀಡಲು ಒಂದು ಲಕ್ಷ ನಲವತ್ತಮೂರು ಸಾವಿರ ರೂಪಾಯಿಗಳ ಮಾಸಿಕ ''ಯೋಜನಾ ಭತ್ಯೆ'' ನೀಡುವುದಾಗಿ ತಿಳಿಸಿದ್ದರು. ಆ ಪತ್ರವನ್ನು ಶ್ರೀಯುತರು ಕೆಲಸಕ್ಕೆ ಸೇರುವ ಮುನ್ನ ಚಾನ್ಸೆಲರ್‌ಗೆ ಕೊಟ್ಟಿರಲಿಲ್ಲ. ಆ ಕಾಲೇಜು ಬಿಟ್ಟುಬಂದಾಗ ಆ ಭತ್ಯೆಯೂ ಹೋಗಬೇಕು, ಏಕೆಂದರೆ ಶ್ರೀಯುತರು ಯಾವ ಯೋಜನೆಯನ್ನೂ ಅಲ್ಲಿ ನಿರ್ದೇಶಿಸುವುದಿಲ್ಲ. ಅಥವಾ, ಅಷ್ಟು ಹಣವನ್ನು ವೇತನಕ್ಕೆ ಸೇರಿಸಿಕೊಡಬೇಕೆಂದು ಉಪಕುಲಪತಿಯ ಕೆಲಸಕ್ಕೆ ಸೇರುವ ಮುನ್ನ ಶ್ರೀಯುತರು ಚೌಕಾಸಿ ಮಾಡಬೇಕಾಗಿತ್ತು. ಬಹುಶಃ ಆಗ ತುಮಕೂರು ವಿಶ್ವವಿದ್ಯಾನಿಲಯಕ್ಕೆ ಬೇರೊಬ್ಬರನ್ನು ಉಪಕುಲಪತಿಯನ್ನಾಗಿ ನೇಮಿಸಿಬಿಡುತ್ತಿದ್ದರೆಂದು ತೋರುತ್ತದೆ. ಆದ್ದರಿಂದ ಆ ಪ್ರಶ್ನೆಯನ್ನೆತ್ತಲಿಲ್ಲ. ಕೆಲಸಕ್ಕೆ ಸೇರಿದ ನಂತರ ೯.೬.೨೦೦೮ರ ಪತ್ರವನ್ನು ಕೊಟ್ಟು ತಮಗೆ ಹಿಂದಿನ 'ಯೋಜನಾ ಭತ್ಯೆ'ಯನ್ನು ಕೊಡಬೇಕೆಂದು ಅಹವಾಲು ಸಲ್ಲಿಸಿದ ಡಾ|| ಶರ್ಮರಿಗೆ ಕೆಲಸಕ್ಕೆ ಸೇರಿದ ೫ ತಿಂಗಳ ನಂತರ ಒಂದು ಲಕ್ಷ ನಲವತ್ತಮೂರು ಸಾವಿರ ರೂಪಾಯಿಗಳ ಭತ್ಯೆಯನ್ನು ಅಧಿಕವಾಗಿ ಮಂಜೂರು ಮಾಡಲಾಯಿತು. ಇಲ್ಲಿ ಯಾವ ಯೋಜನೆಯನ್ನು ನಿರ್ದೇಶಿಸಲು ಈ ಭತ್ಯೆ ? ಆದರೂ ರಾಜಭವನವು ಅದನ್ನು ಉಪಕುಲಪತಿಗಳಿಗೆ ನೀಡಿದೆ. (ಬೇರೆ ಉಪಕುಲಪತಿಗಳು ಬೇಕಾದರೆ ಈಗ ತಮ್ಮತಮ್ಮ ಹೊಸ ಅಹವಾಲುಗಳನ್ನು ಸಲ್ಲಿಸಿ ಕೃತಾರ್ಥರಾಗ ಬಹುದು). ಅಷ್ಟೇ ಅಲ್ಲ, ರಾಜಭವನ ಇವರಿಗೆ ಹೇಳಿತು, ''ನಿಮ್ಮ ಸ್ಥಾನವನ್ನು ಆರ್. ವಿ. ಇಂಜಿನಿಯರಿಂಗ್ ಕಾಲೇಜಿನಲ್ಲಿ ಹಾಗೆಯೇ ಉಳಿಸಿಕೊಂಡಿರಿ,'' ಎಂದು. ಅದು ಕಾಲೇಜಿಗೂ ನೌಕರನಿಗೂ ಸಂಬಂಧಿಸಿದ ವಿಷಯ. ಇದರಲ್ಲಿ ರಾಜಭವನದ್ದೇನು ಉಸಾಬರಿ !

ಮುಖ್ಯ ವಿಷಯವೇನೆಂದರೆ, ರಾಜಭವನವೂ ವಿಸ್ಮಯಗಳ ಆಗರವಾಗಿದೆಯೆಂಬುದು. ಹಾಗಿದ್ದರೆ ಉಪ್ಪು ಸಿಗುವುದೆಲ್ಲಿ? ''ಬಂಗಾಳಕೊಲ್ಲಿಗೆ ಹೋಗಿ ಬಿದ್ದುಕೊಳ್ಳಿ, ಅಲ್ಲಿ ಉಪ್ಪಿದೆ; ಇಲ್ಲೆಲ್ಲಾ ಉಪ್ಪು ಸಿಗುವುದಿಲ್ಲ'' ಎಂಬ ಉತ್ತರ ಪಡೆದು ನಿಟ್ಟುಸಿರಿಡೋಣವೇನು ? ಅಥವಾ ಲೋಕಾಯುಕ್ತ ಮಾನ್ಯ ಶ್ರೀ ಸಂತೋಷ ಹೆಗ್ಡೆಯವರ ಕೆಲಸದ ವ್ಯಾಪ್ತಿ ರಾಜಭವನವನ್ನೂ ಒಳಗೊಳ್ಳಬೇಕೆ ?

[signature]

---

*ಮಾರ್ಕ್ಸ್‌ವಾದ ಮತ್ತು ಸಂಸ್ಕೃತಿ (೫ನೇ ಪುಟದಿಂದ)*

ಇತಿಹಾಸಪೂರ್ವ ಕಾಲಮಾನವನ್ನು ಪರಿಕಲ್ಪಿಸಿಕೊಳ್ಳುವಾಗ ಇಂತಹ ಹಲವಾರು ಸಮಸ್ಯೆಗಳು ಉದ್ಭವವಾಗುತ್ತವೆ. ಪ್ರಾಚ್ಯವಸ್ತು ಸಂಶೋಧನೆಯ ಸಕ್ರಿಯವಾಗಿ ಜರುಗುತ್ತಿದ್ದ, ಎಂದರೆ ಇತಿಹಾಸಪೂರ್ವ ಕಾಲಮಾನದಲ್ಲಿ 'ಸಂಸ್ಕೃತಿ'ಯನ್ನು ಸುಲಭವಾಗಿ ಗ್ರಹಿಸಬಲ್ಲ, ತರ್ಕಬದ್ಧವಾದ ವಿಧಾನದಲ್ಲಿ ಬಳಸುವುದುಂಟು. ಪುರಾತನ ಅವಶೇಷ, ಶಾಸನ ಮೊದಲಾದುವುಗಳ ಅಧ್ಯಯನ ಶಾಸ್ತ್ರದಲ್ಲಿ ಸಂಸ್ಕೃತಿ ಎಂಬುದು ಅಂದಂದಿನ ಸಮಾಜದಲ್ಲಿದ್ದ ಜೀವನಶೈಲಿಯನ್ನು ಪ್ರತಿನಿಧಿಸುತ್ತದೆ. ಜೀವನಶೈಲಿಯು ಆಯಾ ಸಮಾಜವು ತನ್ನ ಲೌಕಿಕ ಅಗತ್ಯತೆಗಳನ್ನು ಪೂರೈಸಲು ಉತ್ಪಾದಿಸುತ್ತಿದ್ದ ಹಾಗೂ ಮರುಉತ್ಪಾದಿಸುತ್ತಿದ್ದ ವಿಧಾನವನ್ನು ಒಳಗೊಂಡಿರುತ್ತದೆ. ಜೊತೆಗೆ, ತನ್ನದೇ ಬದುಕು ಮತ್ತು ಸಂತಾನೋತ್ಪತ್ತಿಗಾಗಿ ಅಗತ್ಯವಿದ್ದ ವಸ್ತುಗಳನ್ನು ಸೃಷ್ಟಿಸಿಕೊಂಡ ಬಗೆಯನ್ನು ನಿರೂಪಿಸುತ್ತದೆ. ಹರಪ್ಪಾದ ಸಂಸ್ಕೃತಿಯು ಇದಕ್ಕೆ ಉದಾಹರಣೆ.

ಸಂಸ್ಕೃತಿ ಮತ್ತು ನಾಗರಿಕತೆಗಳನ್ನು ಎದುರುಬದುರಿಗಿಟ್ಟು ಎರಡೂ ಪರಸ್ಪರ ವಿರೋಧಿಗಳೆಂಬ ವಾದವನ್ನು ಮುಂದಿಡುವುದು (ಈಗಲೂ ಹಾಗೆ ಮಾಡುವುದಿದೆ) ಹಲವು ಸಮಸ್ಯೆಗಳಿಗೆ ಎಡೆಮಾಡಿಕೊಡುವುದು ಸಹಜವೆ. ಆಧ್ಯಾತ್ಮಿಕ ಭಾವನಾವಾದದ ಅಂಶವನ್ನು ಪ್ರತಿಪಾದಿಸುತ್ತಲೇ ಬುದ್ಧಿ ಮತ್ತು ಭೌತವಸ್ತು ಎರಡನ್ನೂ ಪ್ರತ್ಯೇಕ ಭಾಗಗಳನ್ನಾಗಿಸುವ ವರ್ಗೀಕರಣವನ್ನು ಎತ್ತಿಹಿಡಿಯುವಲ್ಲಿ ನಾಗರಿಕತೆ ಮತ್ತು ಸಂಸ್ಕೃತಿಗಳನ್ನು ಪರಸ್ಪರ ವಿರೋಧಿಗಳು ಎಂದು ಸಾಬೀತುಮಾಡುವ ಪ್ರಯತ್ನವಿದೆ. ಈ ಪ್ರತಿಪಾದನೆಯ ಪ್ರಕಾರ ಮಾನವನ ಬುದ್ಧಿಮತ್ತೆಯಿಂದ ಹೊರಹೊಮ್ಮುವ, ಅದರಲ್ಲೂ ಯಾವನೇ ಒಬ್ಬ ವ್ಯಕ್ತಿಯ ಬೌದ್ಧಿಕ ಕ್ರಿಯೆಯಿಂದ ಉಂಟಾಗುವ ಎಲ್ಲ ಪರಿಕಲ್ಪನೆಗಳೂ ಸಂಸ್ಕೃತಿ ಎನಿಸಿಕೊಳ್ಳುತ್ತವೆ ಹಾಗೂ ಮಾನವ ತನ್ನ ಉಳಿವಿಗೆ, ನೆಮ್ಮದಿಗೆ ಮತ್ತು ಭೋಗಲಾಲಸೆಗೆ ಸೃಷ್ಟಿಸುವ ಎಲ್ಲವನ್ನೂ ನಾಗರಿಕತೆ ಎಂದು ವರ್ಗೀಕರಿಸಲಾಗುತ್ತದೆ. ಇಂತಹ ವರ್ಗೀಕರಿಸುವ ವಿಧಾನವು ಸೈದ್ಧಾಂತಿಕವಾಗಿ ಸರಿಯಾದುದಲ್ಲ, ಮತ್ತು ಕಾರ್ಯತಃ ಸಾಧುವಾದುದಲ್ಲ. ಏಕೆಂದರೆ ಪ್ರತಿಯೊಬ್ಬ ವ್ಯಕ್ತಿಯ ಕ್ರಿಯಾಶೀಲತೆಯೂ ಸೇರಿದಂತೆ ಮನುಕುಲದ ಎಲ್ಲ ಚಟುವಟಿಕೆಗಳೂ ಮಾನವನ ಬೌದ್ಧಿಕ ಕ್ರಿಯಾಶೀಲತೆಯನ್ನು ಪೂರ್ವಭಾವಿಯಾಗಿ ನಿರೂಪಿಸಿರುತ್ತದೆ ಹಾಗೂ ನಿರ್ಧರಿಸುತ್ತದೆ. ಮಾರ್ಕ್ಸ್ ಹೇಳಿರುವಂತೆ ಜೇನುನೊಣ ಒಂದು ಅತ್ಯುತ್ತಮ ಶಿಲ್ಪಿಯಾಗಿರಬಹುದು. ಆದರೆ ಉಕ್ಕು, ಇಟ್ಟಿಗೆ ಮತ್ತು ಗಾರೆಯಿಂದ ನಿರ್ದಿಷ್ಟ ರೂಪ ಪಡೆಯುವುದಕ್ಕೆ ಸಾಕಷ್ಟು ಮುಂಚೆಯೇ ಕಟ್ಟಡವೊಂದು ಶಿಲ್ಪಿ ಅಥವಾ ವಿನ್ಯಾಸಕಾರನ ಮನಸ್ಸಿನಲ್ಲಿ ರೂಪುಗೊಂಡಿರುತ್ತದೆ. ಒಬ್ಬ ಕವಿಯೋ, ಕಲಾವಿದನೋ, ಶಿಲ್ಪಿಯೋ ಅಥವಾ ಒಬ್ಬ ಗಾಯಕನೋ ತನ್ನ ಸೃಜನಾತ್ಮಕ ಬೌದ್ಧಿಕ ಚಟುವಟಿಕೆಯನ್ನು ಪ್ರದರ್ಶಿಸುತ್ತಾನೆ, ನಿಜ. ಅಂತೆಯೇ, ಹೊಸಯಂತ್ರವನ್ನು ಕಂಡುಹಿಡಿಯುವ ಒಬ್ಬ ಎಂಜಿನಿಯರ್ ಅಥವಾ ಒಬ್ಬ ವಿಜ್ಞಾನಿ ಹೊಸ ಪ್ರಕೃತಿ ನಿಯಮವೊಂದನ್ನು ಅನ್ವೇಷಿಸುವ ಕ್ರಿಯೆಯಲ್ಲಿ ತೊಡಗಿರುತ್ತಾನೆ. ಇವರೆಲ್ಲರ ಚಟುವಟಿಕೆಗಳು ಭೌತಿಕ ಹಾಗೂ ಬೌದ್ಧಿಕ ಆಯಾಮಗಳನ್ನು ಹೊಂದಿರುತ್ತವೆ. ಎಂದರೆ ಇಂತಹ ಎಲ್ಲ ಚಟುವಟಿಕೆಗಳು ವಸ್ತುನಿಷ್ಠ, ಭೌತಿಕ ವಾಸ್ತವಾಂಶವನ್ನು ಒಳಗೊಂಡಿರುತ್ತವೆ. ಒಟ್ಟಾರೆಯಾಗಿ ನಾಗರಿಕತೆಯು ಸಂಸ್ಕೃತಿಯ ಉತ್ಪನ್ನವಾಗಿರುವಂತೆ ಸಂಸ್ಕೃತಿಯು ನಾಗರಿಕತೆಯ ಉತ್ಪನ್ನವೂ ಹೌದು. ಆದರೂ ಎರಡಕ್ಕೂ ಅವುಗಳದೇ ಆದ ಪ್ರತ್ಯೇಕ ಗುಣಲಕ್ಷಣಗಳಿವೆ. ಇಂತಹ ಯಾವುದೇ ವೈಜ್ಞಾನಿಕ ಪ್ರತಿಪಾದನೆಗಳನ್ನು ಒಪ್ಪದ ಜನ ಪ್ರತಿಗಾಮಿತನಕ್ಕೆ ಮೊರೆಹೋಗುತ್ತಾರೆ; ಭಾರತೀಯ ಸಂಸ್ಕೃತಿ ಎಂದರೆ ಹಿಂದೂ ಸಂಸ್ಕೃತಿ ಎಂದು ಸಮೀಕರಿಸಿ ಬೊಬ್ಬೆಯಿಡುವ ಮತ ಧಾರ್ಮಿಕ ಜಡ್ಡುತನಕ್ಕೆ ಅಂಟಿಕೊಂಡಿರುವ ನಮ್ಮದೇ ದೇಶದ ಆರೆಸ್ಸೆಸ್, ಭಜರಂಗದಳ, ಶ್ರೀರಾಮ ಸೇನೆಯಂತಹ ಸಂಘಟನೆಗಳ ಕಾರ್ಯಕರ್ತರಂತೆ, ಅವರ ಸಿದ್ಧಾಂತದಂತೆ.

ಸಿದ್ಧಾಂತವು ಸಂಸ್ಕೃತಿಯನ್ನು ಕೇವಲ ಮಾನವನ ಮಾನಸಿಕ ಕ್ರಿಯೆಯ ಉತ್ಪಾದನೆಯೆಂದು ಸೀಮಿತಗೊಳಿಸುವುದು ಎಲ್ಲ ಬಗೆಯ ಭಾವನಾವಾದ, ಮತಧರ್ಮ, ತರ್ಕರಹಿತ ನಾಸ್ತಿಕತೆಗಳಿಗೆ ಎಡೆಮಾಡಿಕೊಡುತ್ತದೆ. ಇದರಿಂದಾಗಿ ಸಂಸ್ಕೃತಿಯು ಬರಿಯ ಕಲ್ಪನೆಗಳು, ಊಹಾಪೋಹಗಳು, ಆಧಾರರಹಿತ ನಂಬುಗೆಗಳು, ಮೌಲ್ಯಗಳು ಮತ್ತು ಒಣ ಸಂಕೇತಗಳಿಗೆ ಸೀಮಿತಗೊಂಡುಬಿಡುತ್ತದೆ. ಇವೆಲ್ಲವೂ ಐತಿಹಾಸಿಕತೆ ಮತ್ತು ಸಂಸ್ಕೃತಿಯ ಭೌತಿಕ ಉಗಮವನ್ನೇ ಮಬ್ಬುಗೊಳಿಸುತ್ತವೆ. ಅಂತೆಯೇ ನಾಗರಿಕತೆಯು ತನ್ನ ಐತಿಹಾಸಿಕತೆ ಮತ್ತು ಸಾಂಸ್ಕೃತಿಕ ಸತ್ವಗಳಿಂದ ಬೇರ್ಪಟ್ಟು ಜನಾಂಗೀಯ - ರಾಚನಿಕ ರೂಪ ಪಡೆಯುವುದು ಅನಿವಾರ್ಯವಾಗುತ್ತದೆ.

ಮಾರ್ಕ್ಸ್‌ವಾದವು ಭೌತಿಕ ಉತ್ಪನ್ನಗಳು ಮತ್ತು ಬೌದ್ಧಿಕ ಉತ್ಪನ್ನಗಳ ನಡುವಿನ ಭೇದವು ನಿರಪೇಕ್ಷ, ಪಾರಮ್ಯ ಎಂದು ಪರಿಗಣಿಸುವುದಿಲ್ಲ. ಅದೇ ವೇಳೆ ಅಂತಹ ಭೇದವನ್ನು ಮಬ್ಬುಗೊಳಿಸುವುದಿಲ್ಲ. ಬದಲು, ಅದನ್ನು ಎಲ್ಲವನ್ನು ಒಳಗೊಳ್ಳುವ ಹಾಗೂ ಸಮಗ್ರವಾದ ಪರಿಕಲ್ಪನೆ ಎಂದು ಪರಿಗಣಿಸುತ್ತದೆ. ಮತ್ತು ಬೌದ್ಧಿಕ ತಳಹದಿ ಮತ್ತು ಮಾನಸಿಕ ಹಾಗೂ ಬೌದ್ಧಿಕ ಸಾಂಸ್ಕೃತಿಕ ಮೂಲಗಳಿಗೆ ಒತ್ತು ನೀಡುತ್ತದೆ. ಅಲ್ಲದೆ, ಬೌದ್ಧಿಕ ಸಂಸ್ಕೃತಿಯು ಹೆಚ್ಚುಕಡಿಮೆ ಭೌತಿಕ ಸಂಸ್ಕೃತಿಯ ಪ್ರಭಾವಗಳಿಂದ ಪ್ರತ್ಯೇಕವಾಗಿದ್ದು, ತನ್ನದೇ ಆದ ಅಸ್ತಿತ್ವವನ್ನು ಹೊಂದಿರುತ್ತದೆ. ಎಂದರೆ ಮಾರ್ಕ್ಸ್‌ವಾದವು ಭೌತಿಕ ಮತ್ತು ಬೌದ್ಧಿಕ ಸಂಸ್ಕೃತಿಗಳ ನಡುವಣ ಕ್ರಿಯಾಶೀಲ ಬೆಳವಣಿಗೆ ಹಾಗೂ ಅವುಗಳಿಗೆ ಇರುವ ಗತಿತಾರ್ಕಿಕ ಸಂಬಂಧಗಳನ್ನು ತೆರೆದಿಡುತ್ತದೆ.

ಈ ಕಾರಣಕ್ಕಾಗಿಯೇ ಮಾರ್ಕ್ಸ್‌ವಾದವು ಸಂಸ್ಕೃತಿ ಯನ್ನು ಭೌತಿಕ ಮತ್ತು ಬೌದ್ಧಿಕ ಉತ್ಪನ್ನಗಳು ಸಮ್ಮಿಳನಗೊಂಡ ಒಂದು ಸಮಗ್ರ ಸ್ವರೂಪ, ಮಾನವ ಇತಿಹಾಸದ ಮತ್ತು ಅನೂಚಾನವಾಗಿ ನಡೆದುಕೊಂಡು ಬಂದಿರುವ, ಸಾಮಾಜಿಕ ಮತ್ತು ವರ್ಗಗುಣವನ್ನು ಹೊಂದಿರುವ ಐತಿಹಾಸಿಕ, ಸಾಮಾಜಿಕ ಹಾಗೂ ಆರ್ಥಿಕ ರಚನೆಯೇ ಆಗಿದೆ ಎಂದು ಪರಿಗಣಿಸುತ್ತದೆ.

ಈಗ ಕೆಲವು ವಿವರಗಳನ್ನು ಚರ್ಚಿಸೋಣ. ವ್ಯವಸಾಯವೂ ಸಂಸ್ಕೃತಿಯ ಒಂದು ಭಾಗವೇ ಆಗಿದೆ. ಅದರಲ್ಲಿ ಕೃಷಿ, ರೇಷ್ಮೆಹುಳುಗಳ ಸಾಕಣೆ, ದ್ರಾಕ್ಷಿ ಬೇಸಾಯ ಇವೂ ಅದೇ ಬಗೆಯವು. ಮಾನವರ ಭೌತಿಕ ಮತ್ತು ದೈಹಿಕ ಅಗತ್ಯತೆಗಳನ್ನು ಪೂರೈಸಲು ಸಾಮಾಜಿಕ ಕ್ರಿಯೆ ಅಥವಾ ಸಾಮಾಜಿಕ ದುಡಿಮೆಯನ್ನು ವ್ಯವಸಾಯದಲ್ಲಿ ಬಳಸಿಕೊಳ್ಳಲಾಗುತ್ತದೆ. ಮಾನವನ ಅಗತ್ಯತೆಗಳನ್ನು ಪೂರೈಸಲು ವಸ್ತುಗಳನ್ನು ಉತ್ಪಾದಿಸುವುದನ್ನು

ಭೌತಿಕ ಸಂಸ್ಕೃತಿ ಎಂದು ಗುರುತಿಸಲಾಗಿದೆ. ಒಮ್ಮೆ ಬಳಕೆಯಾದ ನಂತರ ಇದೇ ವಸ್ತುಗಳನ್ನು ಮತ್ತೊಮ್ಮೆ ಉತ್ಪಾದಿಸಬೇಕಾಗುತ್ತದೆ. ಆದ್ದರಿಂದ ಭೌತಿಕ ಸಂಸ್ಕೃತಿ ಎಂಬುದು ಸಮಾಜದ ಭೌತಿಕ ಅಗತ್ಯತೆಗಳನ್ನು ಪೂರೈಸಲು ಕೈಗೊಳ್ಳಲೇಬೇಕಾದ ಉತ್ಪಾದನೆ ಮತ್ತು ಮರು ಉತ್ಪಾದನೆಯಂತಹ ಕ್ರಿಯೆಗಳನ್ನು ಒಳಗೊಂಡಿರುತ್ತದೆ.

ಉತ್ಪಾದನಾ ಸಾಧನಗಳು, ಬಳಕೆಯ ವಸ್ತುಗಳು, ಉತ್ಪಾದನಾ ಕೌಶಲ ಹಾಗೂ ನಿರ್ವಹಣೆ, ತಾಂತ್ರಿಕತೆ ಹಾಗೂ ಇವೆಲ್ಲದರ ಕುರಿತ ಪರಿಜ್ಞಾನ ಭೌತಿಕ ಸಂಸ್ಕೃತಿಯ ಭಾಗವಾಗಿರುತ್ತದೆ. ಅಂತೆಯೇ ಭೌತಿಕ ಸಂಸ್ಕೃತಿಯು ಪ್ರಕೃತಿ ಮತ್ತು ಮಾನವನ ನಡುವೆ ಸಂಬಂಧಗಳನ್ನೇರ್ಪಡಿಸುತ್ತದೆ. ಇವುಗಳನ್ನು ಉತ್ಪಾದನಾ ಸಂಬಂಧಗಳು ಎಂದು ಗುರುತಿಸುತ್ತೇವೆ. ಇವು ಕ್ರಮೇಣ ಇತರ ಸಂಬಂಧಗಳಿಗೆ ಮತ್ತು ಸಂಸ್ಥೆಗಳಿಗೆ ಎಡೆಮಾಡಿಕೊಡುತ್ತವೆ. ಅಲ್ಲದೆ, ಭೌತಿಕೇತರ ಸಂಸ್ಕೃತಿಯು (ಬೌದ್ಧಿಕ ಎನ್ನಬಹುದಾದ) ಆಧ್ಯಾತ್ಮಿಕ ಸಂಸ್ಕೃತಿಯು ರೂಪುಗೊಳ್ಳಲು ಕಾರಣವಾಗುತ್ತದೆ.

ಬೌದ್ಧಿಕ ಅಥವಾ ಆಧ್ಯಾತ್ಮಿಕ ಎರಡೂ ಸಮಾನಾರ್ಥವಾದ ಪದಗಳಷ್ಟೆ. ಬೌದ್ಧಿಕ ಸಂಸ್ಕೃತಿಯು ಮಾನವರಿಗೆ ತುರ್ತು ಅವಶ್ಯವಿರುವ ಪರಸ್ಪರ ಸಂವಹನ ಕ್ರಿಯೆಗೆ ನೆರವಾಗುತ್ತದೆ. ಪರಿಣಾಮವಾಗಿ ಈ ದಿಶೆಯಲ್ಲಿ ಅವರ ಉತ್ಪಾದನಾ ಕೌಶಲವೇ ಅಲ್ಲದೆ ತಮ್ಮ ಸುತ್ತಮುತ್ತಲಿನ ವಸ್ತುಗಳ ಬಗ್ಗೆ ತಮ್ಮದೇ ಆದ ಅಭಿಪ್ರಾಯಗಳನ್ನು ಬೆಳೆಸಿಕೊಳ್ಳಲು, ತಮ್ಮ ಬದುಕನ್ನು ಇನ್ನೂ ಹೆಚ್ಚು ಆಳವಾಗಿ ಅರ್ಥಮಾಡಿಕೊಂಡು ಅಗತ್ಯಕ್ಕೆ ತಕ್ಕಂತೆ ಮಾರ್ಪಾಡು ಮಾಡಿಕೊಳ್ಳಲು ಮುಂದಾಗುತ್ತಾರೆ. ಮಾತು ಅಥವಾ ಭಾಷೆಯ ಹುಟ್ಟನ್ನು ಇಲ್ಲಿ ಕಾಣಬಹುದು. ಮಾನವ ಸಮಾಜದ ಕಲೆ, ಸಾಹಿತ್ಯ ಮತ್ತು ಸಂಸ್ಕೃತಿಗಳ ಮೊತ್ತಮೊದಲ, ಅತಿ ಪ್ರಾಚೀನ ಸ್ವರೂಪಗಳು ಈ ಹಂತದಲ್ಲಿ ರೂಪುಗೊಂಡವು ಎಂಬುದು ಗಮನಾರ್ಹ.

ಈ ಸಂವಹನ ಕ್ರಿಯೆಯ ಸ್ವರೂಪ ಮತ್ತು ವಸ್ತುಗಳೂ ಕೂಡ ಚಿಂತನಾಶೀಲತೆಯಿಂದ ಮೂಡಿಬಂದ ಫಲಿತಾಂಶವೇ ಆಗಿವೆ. ಅದು ಮೆದುಳಿನಿಂದ ಸಂಯೋಜಿಸಲ್ಪಟ್ಟ ಉತ್ಪನ್ನವೂ ಹೌದು. ಇಂತಹ ಎಲ್ಲ ಉತ್ಪನ್ನಗಳೂ ಸಮಾಜದ ಬೌದ್ಧಿಕ ಮತ್ತು ಆಧ್ಯಾತ್ಮಿಕ ಅಗತ್ಯತೆಗಳಿಗೆ ಸ್ಪಂದಿಸುವ ಸಾಧನಗಳಾಗುತ್ತವೆ.

ಅದೇನೇ ಇರಲಿ, ಭೌತಿಕ ಸಂಸ್ಕೃತಿ, ಬೌದ್ಧಿಕ ಸಂಸ್ಕೃತಿಗಳ ನಡುವೆ ಗುರುತಿಸ ಬಹುದಾದ ಒಂದು ವ್ಯತ್ಯಾಸವಿದೆ. ಭೌತಿಕ ಪೋಷಣೆಗಾಗಿ ವಸ್ತುಗಳನ್ನು ನಿರಂತರವಾಗಿ ಉತ್ಪಾದಿಸುತ್ತಲೇ ಇರಬೇಕಾಗುತ್ತದೆ. ಆದರೆ ಬೌದ್ಧಿಕ ಸಂಸ್ಕೃತಿಯಿಂದ ಸೃಷ್ಟಿಯಾದ ಚಿಂತನಗಳಾಗಲಿ, ಕಲಾಕೃತಿಗಳಾಗಲಿ ಸಾಮಾಜಿಕ - ಜನಜೀವನದ ಭಾಗಗಳಾಗಿ ಬಿಡುತ್ತವೆ; ವಿವಿಧ ಬಗೆಯಲ್ಲಿ ವಿಕಾಸಗೊಳ್ಳುತ್ತವೆ; ಜನತೆ ಅದರಲ್ಲಿ ಆಸಕ್ತರಾಗಿ ಪೋಷಿಸುವವರೆಗೂ ಹೊಸಹೊಸ ಆಯಾಮಗಳನ್ನು ಪಡೆಯುತ್ತಲೇ ಇರುತ್ತವೆ. ಇದೇ ಮಾತು ವೈಜ್ಞಾನಿಕ ಸಿದ್ಧಾಂತಗಳಿಗೂ ಅನ್ವಯಿಸುತ್ತದೆ. ಅವು ಸಹ ಸಾಮಾಜಿಕ ಆಗುಹೋಗುಗಳಲ್ಲಿ ದೀರ್ಘಕಾಲದವರೆಗೆ ಚಾಲ್ತಿಯಲ್ಲಿರುತ್ತವೆ. ಆದರೆ ವಿಜ್ಞಾನದಲ್ಲಿ ಮಾತ್ರ ಯಾವುದೇ ಸಿದ್ಧಾಂತವು ಅದಕ್ಕೂ ವಿಸ್ತಾರವಾದ, ಮಹತ್ವದ ಸಿದ್ಧಾಂತ ದೊಂದಿಗೆ ಸಮ್ಮಿಳನಗೊಂಡು, ತನ್ನ ಉಪಯುಕ್ತತೆಯನ್ನು ಕಳೆದುಕೊಂಡು ಒಂದು ಐತಿಹಾಸಿಕ ದಾಖಲೆಯಾಗಿ ಮಾತ್ರ ಉಳಿದುಬಿಡುತ್ತದೆ.

ಆಧ್ಯಾತ್ಮಿಕ ಸಂಸ್ಕೃತಿ ಸಮಾಜದಲ್ಲಿ ಚಾಲ್ತಿಯಲ್ಲಿರುವ ಧೋರಣೆಗಳು, ನಡತೆ ಮತ್ತಿತರ ಮಾನವೀಯ ಸಂಬಂಧಗಳನ್ನು ಮತ್ತು ಮಾನವ ಹಾಗೂ ಪ್ರಕೃತಿ ಸಂಬಂಧಿತ ಮೌಲ್ಯಗಳನ್ನು ಮುಖಾಮುಖಿಯಾಗಿಸುತ್ತದೆ. ಒಂದರ್ಥದಲ್ಲಿ ಯಾವುದೇ ಸಮಾಜದ ಆಧ್ಯಾತ್ಮಿಕ ಸಂಸ್ಕೃತಿಯು ಮಾನಸಿಕ, ಇಲ್ಲವೇ ಭೌತಿಕ ಸಂಸ್ಕೃತಿಯ ಪ್ರತಿಫಲನವೇ ಆಗಿದೆ.

ಸಾಮಾಜಿಕ ವಿಜ್ಞಾನ ಶಾಖೆಗಳು, ಅಧ್ಯಾತ್ಮ, ಮತ ಧರ್ಮ, ಸಾಹಿತ್ಯ ಮತ್ತು ಕಲೆ ಎಲ್ಲವನ್ನೂ ಆಧ್ಯಾತ್ಮಿಕ ಸಂಸ್ಕೃತಿ ಒಳಗೊಂಡಿರುತ್ತದೆ. ಅದು ಸಮಾಜದ ಮಾನಸಿಕ, ಬೌದ್ಧಿಕ ಮತ್ತು ಮನೋವೈಜ್ಞಾನಿಕ ಅಗತ್ಯತೆಗಳನ್ನು ಪೂರೈಸುತ್ತದೆ. ಜೊತೆಗೆ, ಹೆಚ್ಚು ಕಡಿಮೆ ಭೌತಿಕ ಸಂಸ್ಕೃತಿಯು ರೂಪುಗೊಳ್ಳುವ ದಿಶೆಯನ್ನು ನಿರ್ದೇಶಿಸುತ್ತದೆ; ಆ ಮೂಲಕ ಆಧ್ಯಾತ್ಮಿಕ ಸಂಸ್ಕೃತಿಯ ವ್ಯವಸ್ಥೆಯು ಸಾಗುವ ದಿಕ್ಕನ್ನು ನಿರ್ಧರಿಸುತ್ತದೆ. ಎಂದೇ ಭೌತಿಕ, ಆಧ್ಯಾತ್ಮಿಕ ಸಂಸ್ಕೃತಿಗಳು ಪರಸ್ಪರ ಸಂಬಂಧ ಹೊಂದಿರುತ್ತವೆ; ಒಂದರೊಡನೆ ಒಂದು ಪ್ರತಿಕ್ರಿಯಿಸುತ್ತಿರುತ್ತವೆ.

ಭಾಷೆ, ಅಥವಾ ಮಾತು, ಮಾನವನು ಸೃಷ್ಟಿಸಿಕೊಂಡ ಮೊಟ್ಟಮೊದಲ ಮೌಲ್ಯ ಎಂದರೆ ತಪ್ಪಾಗಲಾರದು. ಈ ಮೌಲ್ಯವು ಆಧ್ಯಾತ್ಮಿಕ ಸಂಸ್ಕೃತಿಗೆ ಮೂಲಭೂತ ವಾದುದು. ಭಾಷೆಯ ಇತಿಹಾಸವನ್ನೇ ತೆಗೆದುಕೊಳ್ಳೋಣ. ಭಾಷೆಯ ಇತಿಹಾಸ, ರಾಷ್ಟ್ರೀಯತೆಯ ಹಾಗೂ ಆಧ್ಯಾತ್ಮಿಕ ಸಂಸ್ಕೃತಿಗಳ ನಡುವೆ ಒಂದು ಬಗೆಯ ಸಾಮ್ಯವಿದೆ. ರಾಷ್ಟ್ರೀಯತೆಗಳು, ದೇಶಗಳಿಗಿಂತ ಆಧ್ಯಾತ್ಮಿಕ ಸಂಸ್ಕೃತಿ ಪ್ರಾಚೀನವಾದುದು. ಆದರೆ ಭಾಷೆಯ ಮೂಲಕವೇ ಅಲ್ಲದೆ, ರಾಷ್ಟ್ರ ಅಥವಾ ರಾಷ್ಟ್ರೀಯತೆಯಡಿ ಗುರುತಿಸಿ ಕೊಳ್ಳುವ ನಿರ್ದಿಷ್ಟ ಗುಣಲಕ್ಷಣಗಳೇ ಆಧ್ಯಾತ್ಮಿಕ ಸಂಸ್ಕೃತಿಗೆ ಮೂಲ ಪ್ರೇರಣೆ. ಆದ್ದರಿಂದ ರಾಷ್ಟ್ರೀಯ ಆಧ್ಯಾತ್ಮಿಕ ಸಂಸ್ಕೃತಿಯು ಯುಗಯುಗಾಂತರಗಳಿಂದ ನಡೆದು ಬರುತ್ತಿರುವ ರಾಷ್ಟ್ರೀಯ ಆಧ್ಯಾತ್ಮಿಕ ಸಂಸ್ಕೃತಿಯ ಒಂದು ನಿರ್ದಿಷ್ಟ ಸ್ವರೂಪವಷ್ಟೆ.

ಯಾವುದೇ ರಾಷ್ಟ್ರದ ಆಧ್ಯಾತ್ಮಿಕ ಸಂಸ್ಕೃತಿಯು ಎರಡು ಕಾರಣಗಳಿಂದಾಗಿ ಒಂದು ಸಮಗ್ರ ವ್ಯವಸ್ಥೆಯ ಸ್ವರೂಪದಲ್ಲಿ ಕಾಣಬರುತ್ತದೆ. ಮೊದಲನೆಯದಾಗಿ, ಅದು ಯಾವ ಕಾಲಕ್ಕೂ ಇತರ ದೇಶಗಳಿಗೂ ಅನ್ವಯಿಸಬಹುದಾಗಿದೆ. ಸಾರ್ವತ್ರಿಕ ಸಂಸ್ಕೃತಿಯ ಅಂಶವನ್ನು ಒಳಗೊಂಡಿರುತ್ತದೆ. ಎರಡನೆಯದಾಗಿ, ವರ್ಗಾಧಾರಿತ ಸಮಾಜಗಳಲ್ಲಿ ಚಾಲ್ತಿಯಲ್ಲಿರುವ ಸಂಸ್ಕೃತಿಯು ಆಡಳಿತ ವರ್ಗದ ಸಂಸ್ಕೃತಿಯೇ ಆಗಿರುತ್ತದೆ. ಇಂತಹ ಸಂಸ್ಕೃತಿಯು ತನ್ನದೇ ವರ್ಗದ ಹಿತಾಸಕ್ತಿಯನ್ನು ರಕ್ಷಿಸಿಕೊಳ್ಳುವ ದಿಶೆಯಲ್ಲಿ ಆಡಳಿತೇತರ ವರ್ಗಗಳ ಮತ್ತಿತರ ಸಮುದಾಯಗಳ ಸಂಸ್ಕೃತಿಯನ್ನು ಹತ್ತಿಕ್ಕಿ, ಇಡೀ ಸಮಾಜಕ್ಕೆ ತನ್ನದು ಮಾತ್ರವನ್ನೇ ಸಮಗ್ರ ಸಂಸ್ಕೃತಿ ಎಂಬ ಭ್ರಾಂತಿಯನ್ನು ಹುಟ್ಟಿಸುತ್ತದೆ.

ಆಗಲೇ ಪ್ರಸ್ತಾಪಿಸಿದ ಹಾಗೆ ಮಾರ್ಕ್ಸ್‌ವಾದವು ಸಂಸ್ಕೃತಿಯು ಯಾವತ್ತಿಗೂ ಸಮಗ್ರ ಸ್ವರೂಪವನ್ನು ಹೊಂದಿರುತ್ತದೆ ಎಂದು ಭಾವಿಸುತ್ತದೆ. ಆದರೆ ಅಖಂಡತೆ ಅಥವಾ ಸಮಗ್ರತೆಯು ವರ್ಗಾಧಾರಿತ ಸಮಾಜಗಳಲ್ಲಿ ಛಿದ್ರಗೊಳ್ಳುತ್ತದೆ. ಬೌದ್ಧಿಕ ಶ್ರಮವನ್ನು ದೈಹಿಕ ಶ್ರಮದಿಂದ ಬೇರ್ಪಡಿಸುವುದು, ಇದರ ಫಲವಾಗಿ ವಸ್ತುಗಳ ಉತ್ಪಾದನಾ ಕ್ರಿಯೆ ಮತ್ತು ಬೌದ್ಧಿಕ ಉತ್ಪಾದನೆ ಪ್ರತ್ಯೇಕಗೊಳ್ಳುವುದು, ನಗರ-ಗ್ರಾಮೀಣ ಪ್ರದೇಶಗಳ ನಡುವಣ ಅಂತರ ಹೆಚ್ಚುವುದು, ಬೌದ್ಧಿಕ ಸಾಂಸ್ಕೃತಿಕ ಕ್ಷೇತ್ರದ ವಲಯದಲ್ಲಿ ನಿರತರಾಗಿರುವವರ ಸಂಖ್ಯೆಯು ಕ್ರಮೇಣ ಕಡಮೆಯಾಗುತ್ತ ಹೋಗುವುದು – ಇವೆಲ್ಲವೂ ಸಂಸ್ಕೃತಿಯ ಸಮಗ್ರತೆಗೆ ಧಕ್ಕೆಯುಂಟುಮಾಡುವಂತಹ ನೇತ್ಯಾತ್ಮಕ ಅಂಶಗಳೇ ಆಗಿವೆ. ಒಮ್ಮೊಮ್ಮೆ ಮೇಲ್ನೋಟಕ್ಕೆ ಸಮಗ್ರ ರೂಪ ಹೊಂದಿದೆ ಎಂದು ಕಂಡುಬಂದರೂ ವರ್ಗಾಧಾರಿತ ಸಮಾಜದಲ್ಲಿ ಸಂಸ್ಕೃತಿಯು ಒಡೆದು ಇಬ್ಭಾಗವಾಗಿ ಭೌತಿಕ ಮತ್ತು ಆಧ್ಯಾತ್ಮಿಕ ಸಂಸ್ಕೃತಿಗಳೆಂಬ ಸ್ವರೂಪ ಪಡೆದು ತನ್ನದೇ ಆದ ವರ್ಗಲಕ್ಷಣಗಳನ್ನು ಹೊಂದಿರುತ್ತದೆ.

ಭೌತಿಕ ಸಂಸ್ಕೃತಿಯ ಉತ್ಪಾದಕರು ಏಕಕಾಲದಲ್ಲಿ ಆಧ್ಯಾತ್ಮಿಕ ಸಂಸ್ಕೃತಿಯ ಉತ್ಪಾದಕರೂ ಆಗಿರುತ್ತಾರೆ. ಇವರು ಎಲ್ಲ ಕಾಲಕ್ಕೂ ಅನ್ವಯವಾಗುವ ದುಡಿವ ಜನರು. ಉತ್ಪಾದನಾಧಾರಿತ ಸಾಮಾಜಿಕ ಚಳುವಳಿಗಳಲ್ಲಿ ತೊಡಗಿಕೊಳ್ಳುತ್ತ ಇಡೀ ಸಮಾಜಕ್ಕೆ ಅಥವಾ ದೇಶಕ್ಕೆ ಸೇವೆ ಸಲ್ಲಿಸುವ ಈ ಶ್ರಮಿಕರು ಸಾಮಾಜಿಕ, ಪ್ರಜಾಪ್ರಭುತ್ವವಾದಿ ಮತ್ತು ಮಾನವೀಯ ಸಂಸ್ಕೃತಿಯ ಸೃಷ್ಟಿ ಕಾರ್ಯದಲ್ಲಿ ಮಹತ್ವದ ಪಾತ್ರ ವಹಿಸುತ್ತಾರೆ. ಆದರೆ ಪರಸ್ಪರ ವಿರೋಧಿಸುವ ವರ್ಗಗಳು, ಸಾಮಾಜಿಕ ಗುಂಪುಗಳು ಇರುವ ಸಮಾಜದಲ್ಲಿ ಪ್ರಜಾಪ್ರಭುತ್ವವಾದಿ, ಮಾನವೀಯ ಆಧ್ಯಾತ್ಮಿಕ ಸಂಸ್ಕೃತಿಯ ಅಂಶಗಳು ಮುಂದೊಮ್ಮೆ ಒಂದು ಸಮಗ್ರ ಸ್ವರೂಪವನ್ನು ಪಡೆಯುವ ಸಾಮರ್ಥ್ಯವಿದೆ ಎಂದಷ್ಟೇ ಹೇಳಬಹುದು.

ಯಾವತ್ತಿಗೂ ಅತಿ ಹೆಚ್ಚಿನ ಪ್ರಭಾವವುಳ್ಳ, ಮೇಲ್ ಸ್ತರದ ವರ್ಗಗಳು, ಎಂದರೆ ಭೌತಿಕ ಸಂಸ್ಕೃತಿಯ ಸಾಧನಗಳ ಒಡೆತನ ಹೊಂದಿದ್ದು, ಅವುಗಳನ್ನು ಉಪಯೋಗಿಸುತ್ತದೆಯೋ ಅಂತಹ ಉಚ್ಚವರ್ಗವು ತನ್ನ ವರ್ಗಹಿತಾಸಕ್ತಿಗಾಗಿ ಇಡೀ ದೇಶದ ಸಂಸ್ಕೃತಿಯನ್ನು ನಿರ್ದೇಶಿಸುತ್ತದೆ. ಎಂದರೆ, ವರ್ಗದ ಆಧಾರದ ಮೇಲೆ ವಿಂಗಡನೆಗೊಂಡಿರುವ ತನ್ನದೇ ಆದ ಪ್ರತ್ಯೇಕ ಆಧ್ಯಾತ್ಮಿಕ ಸಂಸ್ಕೃತಿಯನ್ನು ಹೊಂದಿರುವುದಿಲ್ಲ. ಬದಲು, ಉತ್ಪಾದನಾ ಸಾಧನಗಳ ಒಡೆತನ ಹೊಂದಿರುವ ವರ್ಗ, ಪ್ರಜಾಪ್ರಭುತ್ವವಾದಿ ಮತ್ತು ಮಾನವೀಯ ಹಾಗೂ ಸಾರ್ವತ್ರಿಕ ಮೌಲ್ಯಗಳಿಗೆ ಬದ್ಧವಾಗಿರುವ ಶ್ರಮಿಕ ವರ್ಗ, ಈ ಎರಡು ವರ್ಗಗಳಿಗೆ ಸರಿಹೊಂದಿರುವ ಎರಡು ಬಗೆಯ ಆಧ್ಯಾತ್ಮಿಕ ಸಂಸ್ಕೃತಿಯನ್ನು ಪೋಷಿಸುತ್ತದೆ. ಲೆನಿನ್ ಹೇಳಿರುವಂತೆ, ಪ್ರಾರಂಭಿಕ ಸ್ವರೂಪದಲ್ಲಿದ್ದರೂ ಸರಿಯೆ, ಪ್ರಜಾಪ್ರಭುತ್ವವಾದಿ ಮತ್ತು ಸಮಾಜವಾದಿ ಸಂಸ್ಕೃತಿಯ ಅಂಶಗಳು ಎಲ್ಲ ರಾಷ್ಟ್ರೀಯ ಸಂಸ್ಕೃತಿಗಳಲ್ಲಿಯೂ ಇವೆ; ಏಕೆಂದರೆ ಪ್ರತಿಯೊಂದು ರಾಷ್ಟ್ರದಲ್ಲೂ ದುಡಿವ, ಶೋಷಣೆಗೆ ಗುರಿಯಾದ ಅಸಂಖ್ಯಾತ ಜನರಿದ್ದಾರೆ; ಮತ್ತು ಅವರ ಜೀವನದ ಸ್ಥಿತಿಗತಿಗಳು ಅನಿವಾರ್ಯವಾಗಿ ಪ್ರಜಾಪ್ರಭುತ್ವವಾದಿ ಮತ್ತು ಸಮಾಜವಾದಿ ಸಿದ್ಧಾಂತಗಳಿಗೆ ಎಡೆಮಾಡಿಕೊಡುತ್ತವೆ. ಆದರೆ ಪ್ರತಿಯೊಂದು ರಾಷ್ಟ್ರವೂ ಕೆಳವರ್ಗದವರ ಮೇಲೆ ಯಜಮಾನಿಕೆ

ನಡೆಸುವಂತಹ ಬಂಡವಾಳಶಾಹಿ ಸಂಸ್ಕೃತಿಯನ್ನು ಹೊಂದಿರುತ್ತದೆ. ಅವುಗಳಲ್ಲಿ ಅನೇಕವು ಪ್ರತಿಗಾಮಿ ಮತ್ತು ಪುರೋಹಿತಶಾಹಿ ಲಕ್ಷಣಗಳನ್ನೂ ಹೊಂದಿರುತ್ತವೆ. ಸಾರ್ವತ್ರಿಕ, ಪ್ರಜಾಪ್ರಭುತ್ವವಾದಿ ಮತ್ತು ಮಾನವೀಯ ವಿಚಾರಗಳನ್ನು ಕೆಲವು ನಿರ್ದಿಷ್ಟ ಪ್ರಜಾಪ್ರಭುತ್ವ ವಿರೋಧಿ ಪಕ್ಷಪಾತದಿಂದ ಬೇರ್ಪಡಿಸಿ ಆಧ್ಯಾತ್ಮಿಕ ಸಂಸ್ಕೃತಿಯನ್ನು ಮೌಲ್ಯಮಾಪನ ಮಾಡುವುದು ಸೂಕ್ತ ವಿಧಾನವಾಗುತ್ತದೆ.

ತಲೆತಲಾಂತರದಿಂದ ಬಂದಿರುವ ಸಾಂಸ್ಕೃತಿಕ ಮೌಲ್ಯಗಳು ಆಯಾ ಕಾಲಮಾನದ ಸಾರ್ವತ್ರಿಕ, ಪ್ರಜಾಪ್ರಭುತ್ವವಾದಿ ಮತ್ತು ಮಾನವೀಯ ಅಂಶಗಳನ್ನು ಒಳಗೊಂಡಿರುತ್ತವೆ. ಹಾಗೆಂದಮಾತ್ರಕ್ಕೆ ಹಿಂದಿನ ಸಾಮಾಜಿಕ-ಆರ್ಥಿಕ ವ್ಯವಸ್ಥೆಗಳಲ್ಲಿ ಪ್ರಚಲಿತವಾಗಿದ್ದ ಎಲ್ಲವನ್ನು ವಿಮರ್ಶೆಗೆ ಒಡ್ಡದೆ ಪ್ರಶ್ನಾತೀತವಾಗಿ ಒಪ್ಪಿಕೊಳ್ಳಬೇಕೆಂದೇನಿಲ್ಲ. ಎರಡನೆಯದಾಗಿ, ಅದೇ ವೇಳೆ, ಇಂದಿನ ಆಧ್ಯಾತ್ಮಿಕ ಸಂಸ್ಕೃತಿಯು ತಾನೇತಾನಾಗಿ ಯಾರ, ಯಾವುದರ ಹಂಗೂ ಇಲ್ಲದೆ ಅಭಿವೃದ್ಧಿ ಹೊಂದಲು ಸಾಧ್ಯವಿಲ್ಲ. ಮೂರನೆಯದಾಗಿ, ರಾಷ್ಟ್ರೀಯ ಸಾಂಸ್ಕೃತಿಕ ಪರಂಪರೆಯು ಇತರ ರಾಷ್ಟ್ರೀಯ ಸಂಸ್ಕೃತಿಗಳಲ್ಲಿನ ಎಲ್ಲ ಸಾರ್ವತ್ರಿಕ, ಪ್ರಜಾಪ್ರಭುತ್ವವಾದಿ ಮತ್ತು ಮಾನವೀಯ ಅಂಶಗಳಿಂದ ಹೊರತಾಗಿ ತನ್ನದೇ ಅಸ್ತಿತ್ವವನ್ನು ಸ್ಥಾಪಿಸಿಕೊಳ್ಳಲು ಸಾಧ್ಯವಾಗುವುದಿಲ್ಲ. ಏಕೆಂದರೆ ಯಾವುದೇ ಒಂದು ಸಂಸ್ಕೃತಿಯು ತನ್ನ ಜಾಯಮಾನಕ್ಕನುಗುಣವಾಗಿ ಇತರ ರಾಷ್ಟ್ರಗಳ ಸಂಸ್ಕೃತಿಯ ಉದಾತ್ತ ಮಾನವೀಯ ಅಂಶಗಳಿಂದಲೂ ಸ್ಫೂರ್ತಿ ಪಡೆದು ಮುನ್ನಡೆಯಬೇಕು. ಪ್ರತಿಯೊಂದು ರಾಷ್ಟ್ರದ ಸಾಂಸ್ಕೃತಿಕ ಪರಂಪರೆಗೆ ತನ್ನದೇ ಆದ ಅನನ್ಯತೆ ಇರುತ್ತದೆ. ಆ ಅನನ್ಯತೆಯನ್ನು ಉಳಿಸಿಕೊಂಡು ಬರುವುದು ಆಯಾ ರಾಷ್ಟ್ರಗಳ ಕರ್ತವ್ಯವಾಗಿದೆ. ಅದೇ ಸಂದರ್ಭದಲ್ಲಿ ಅಂತಹ ಅನನ್ಯತೆಯನ್ನು ಇತಿಮಿತಿ ಇಲ್ಲದೆ ಉತ್ಪ್ರೇಕ್ಷೆಗೆ ಈಡುಮಾಡುವುದು, ಇಲ್ಲಸಲ್ಲದ ರೀತಿಯಲ್ಲಿ ವೈಭವೀಕರಿಸುವುದು ರಾಷ್ಟ್ರೀಯ ಅಂಧಾಭಿಮಾನಕ್ಕೆ ಕೊಂಡೊಯ್ಯುವುದರಿಂದಾಗಿ ಸಮಾಜ ಧ್ರುವೀಕರಣಗೊಳ್ಳುತ್ತದೆ, ಸಾಮಾಜಿಕ ಪಲ್ಲಟಗಳಿಗೆ ಎಡೆಮಾಡಿಕೊಡುತ್ತದೆ. ಈ ಮಾತಿಗೆ ಉದಾಹರಣೆ ಎಂದರೆ ನಮ್ಮ ರಾಷ್ಟ್ರದ ಏಕತೆ, ಸಮಗ್ರತೆಯನ್ನು ಹಾಳುಗೆಡುವುತ್ತಿರುವ ಆರೆಸ್ಸೆಸ್, ಬಿಜೆಪಿ, ಭಜರಂಗದಳ, ಶ್ರೀರಾಮಸೇನೆ, ಜಮಾತ್-ಉಲ್ ಇಸ್ಲಾಮಿ ಮೊದಲಾದುವು. ಐತಿಹಾಸಿಕವಾಗಿ ಬೆಳೆದುಬಂದಿರುವ ರಾಷ್ಟ್ರೀಯ, ಪ್ರಜಾಪ್ರಭುತ್ವವಾದಿ ಮತ್ತು ಮಾನವೀಯ ಸಂಸ್ಕೃತಿಗಳು ಜಾಗತಿಕ ಸಂಸ್ಕೃತಿಯ ಅವಿಭಾಜ್ಯ ಅಂಗಗಳಾಗಿವೆ. ಇದರರ್ಥ ಜಾಗತಿಕ ಪ್ರಜಾಪ್ರಭುತ್ವವಾದಿ ಸಂಸ್ಕೃತಿಯು ಕೇವಲ ಇತರ ರಾಷ್ಟ್ರೀಯ ಸಂಸ್ಕೃತಿಗಳನ್ನು ಒಳಗೊಂಡ ಒಂದು ಪ್ರತ್ಯೇಕ ಘಟಕವೆಂದಲ್ಲ. ಜಾಗತಿಕ ಪ್ರಜಾಪ್ರಭುತ್ವವಾದ ಸದಾ ವಿಕಸನಗೊಳ್ಳುತ್ತಿದೆ; ಅಲ್ಲದೆ, ಒಂದು ಸಾವಯವ, ಆಂಗಿಕ, ಎಲ್ಲ ಸಂಸ್ಕೃತಿಗಳನ್ನು ಒಳಗೊಂಡ ಸಮಗ್ರ ವ್ಯವಸ್ಥೆಯಾಗಿ ಸಾರ್ವತ್ರಿಕವಾಗಿ ಎಲ್ಲೆಡೆ ರೂಪುಗೊಳ್ಳುತ್ತಿದೆ.

ಸಂಸ್ಕೃತಿಗೆ ಮೂಲಾಧಾರವೆಂದರೆ ಶಿಕ್ಷಣ. ಭಾರತದಲ್ಲಿ ಶೇಕಡ ೫೦ರಷ್ಟು ಜನರು ಅನಕ್ಷರಸ್ಥರು. ಶೇಕಡ ೫೦ರಷ್ಟು ಜನರು ಬಡತನದ ರೇಖೆಗಿಂತ ಕೆಳಗಿದ್ದಾರೆ. ಲಕ್ಷಾಂತರ ಜನರು ನಿರುದ್ಯೋಗಿಗಳಾಗಿದ್ದಾರೆ. ಹಿಂದಿನ ತಲೆಮಾರುಗಳ ಕೀಳುಮಟ್ಟದ, ಅಂಧಶ್ರದ್ಧೆಯ ಮತ್ತು ಶಿಥಿಲಗೊಂಡ ಸಾಂಸ್ಕೃತಿಕ ಮೌಲ್ಯಗಳಿಗೆ ಬಲಿಪಶುಗಳಾಗುತ್ತಾರೆ. ಎಂದಮಾತ್ರಕ್ಕೆ ಇತ್ತೀಚಿನ ದಿನಗಳಲ್ಲಿ ನಮ್ಮ ಸಂಸ್ಕೃತಿಯು ಶ್ರೀಮಂತಗೊಂಡಿಲ್ಲ ಎಂದು ಅರ್ಥೈಸಲಾಗದು. ಶತಶತಮಾನಗಳಿಂದಲೂ ಭಾರತವು ಒಂದು ಬಗೆಯ ಸಮ್ಮಿಶ್ರ ಅಥವಾ ಸಂಯುಕ್ತ ಸಂಸ್ಕೃತಿಯನ್ನು ಮೈಗೂಡಿಸಿಕೊಳ್ಳುತ್ತಲೇ ಬಂದಿದೆ. ಅಂತಹ ಸಂಸ್ಕೃತಿಯು ಸಂಯುಕ್ತ ಎನ್ನಲು ಕಾರಣ ನಮ್ಮದು ಸಾವಿರಾರು ಭಾಷೆಗಳುಳ್ಳ ಬಹು ವಿವಿಧ ಜನಾಂಗೀಯ ಮೂಲಗಳಿಂದ ರೂಪುಗೊಂಡಿರುವ ರಾಷ್ಟ್ರ. ನಮ್ಮ ತತ್ವಶಾಸ್ತ್ರ ದರ್ಶನ ಹಲವಾರು ಶಾಖೆಗಳು ಕೆಲವು ನಂಬಿಕೆಗಳು ಭಾವನಾವಾದಿ ಮತ್ತು ಆಧ್ಯಾತ್ಮಿಕ ಅಂಶಗಳಿಂದ ಕೂಡಿದ್ದರೂ ಸಹ ಮಾನವನ ಸರ್ವತೋಮುಖ ಏಳಿಗೆಯ ಬಗ್ಗೆ ಅತ್ಯಂತ ಕಾಳಜಿ ಇರುವ ಮಾತುಗಳಿಂದ ಕೂಡಿವೆ. ಪ್ರಜಾಪ್ರಭುತ್ವ, ಮತನಿರಪೇಕ್ಷತೆ, ಅಲಿಪ್ತ ಚಳವಳಿ, ಸಾರ್ವಭೌಮ ಹಾಗೂ ಸ್ವತಂತ್ರ ಹಕ್ಕುಗಳು, ವೈಜ್ಞಾನಿಕ ಸಂಶೋಧನೆ, ಪ್ರಾದೇಶಿಕ ಭಾಷೆಗಳ ಬೆಳವಣಿಗೆ, ಯೋಜನಾಬದ್ಧ ಬೆಳವಣಿಗೆ, ಹಿಂದು-ಮುಸ್ಲಿಮ್ ಏಕತೆ, ದಲಿತರ ಬಗ್ಗೆ ವಿಶೇಷ ಕಾಳಜಿ ಇವೇ ಮೊದಲಾದುವು ನಮ್ಮ ರಾಷ್ಟ್ರೀಯ ವಿಮೋಚನಾ ಹೋರಾಟದ ಕೊಡುಗೆಗಳಾಗಿವೆ. ಈ ಎಲ್ಲ ಕೊಡುಗೆಗಳಲ್ಲೂ ಕಮ್ಯುನಿಸ್ಟ್ ಚಳವಳಿಯು ಮಹತ್ವದ ಪಾತ್ರ ವಹಿಸಿದೆ.

ರಾಷ್ಟ್ರೀಯ ಪ್ರಜಾಪ್ರಭುತ್ವವಾಗಿ ಬೆಳವಣಿಗೆಗೆ ಕೆಲವು ಅಡ್ಡಿ-ಆತಂಕಗಳೂ ಇವೆ. ಭಾರತೀಯ ಸಮಾಜ ವರ್ಗಾಧಾರಿತವಾದುದು. ಆಡಳಿತ ನಡೆಸುತ್ತಿರುವ ಬಂಡವಾಳಶಾಹಿ ವರ್ಗದವರು ನೈಜ ಪ್ರಜಾಪ್ರಭುತ್ವವಾದಿ ಮೌಲ್ಯಗಳಲ್ಲಿ ನಂಬಿಕೆ ಇಟ್ಟವರಲ್ಲ, ಜಗತ್ತಿನ ಹಾಗೂ ಭಾರತದ ಅತ್ಯುತ್ತಮ ಸಂಸ್ಕೃತಿಯನ್ನು ಶ್ರಮಿಕ ವರ್ಗಕ್ಕೆ ಪರಿಚಯಿಸುವ ಇರಾದೆ ಉಳ್ಳವರಲ್ಲ, ಬದಲು ಸಂಕುಚಿತ ಮನೋಭಾವದ, ಜಡ್ಡುಗಟ್ಟಿದ, ಕೋಮುವಾದಿ, ಜಾತಿವಾದಿ ನೀತಿಗಳನ್ನನುಸರಿಸಿ ಬಂಡವಾಳಶಾಹಿ ವ್ಯವಸ್ಥೆಯನ್ನು ಗಟ್ಟಿಗೊಳಿಸುವ ದಿಶೆಯಲ್ಲಿ ಮುಗ್ಧಜನತೆಯನ್ನು ಸಾಧನಗಳನ್ನಾಗಿ ಬಳಸಿಕೊಳ್ಳುತ್ತಾರೆ.

ಇತ್ತೀಚಿನ ಎರಡು ದಶಕಗಳಲ್ಲಿ ಜಾರಿಗೆ ತರಲಾಗಿರುವ ಜಾಗತೀಕರಣ, ಉದಾರೀಕರಣ ಮತ್ತು ಖಾಸಗೀಕರಣ ನೀತಿಗಳು, ರಾಜಕೀಯ, ನಮ್ಮ ಸಾಮಾಜಿಕ ಮತ್ತು ಆರ್ಥಿಕ ವ್ಯವಸ್ಥೆಯನ್ನು ಬುಡಮೇಲು ಮಾಡಿವೆ. ಕೆಳಸ್ತರದಲ್ಲಿದ್ದ ಜನರಿಗೆ ಅಗತ್ಯವಿದ್ದ ಆರ್ಥಿಕ ಮತ್ತು ಸಾಂಸ್ಕೃತಿಕ ಆದ್ಯತೆಗಳಲ್ಲಿ ಏರುಪೇರುಗಳಾಗಿವೆ, ಆಗಿದೆ ಎನ್ನಲಾಗುವ ತಥಾಕಥಿತ ಬೆಳವಣಿಗೆಯ ಬಹುಪಾಲು ಮೇಲ್ವರ್ಗಗಳ ಪಾಲಾಗಿದೆ. ರಾಷ್ಟ್ರೀಯ ಪ್ರಜಾಪ್ರಭುತ್ವವಾದಿ ಸಂಸ್ಕೃತಿ ಎಂಬುದು ತನ್ನ ಅರ್ಥವನ್ನೇ ಕಳೆದುಕೊಳ್ಳುತ್ತಿದೆ. ಪಾಶ್ಚಾತ್ಯ ಸಂಸ್ಕೃತಿಯ ಅಟ್ಟಹಾಸದಿಂದಾಗಿ ಸಹಸ್ರಾರು ವರ್ಷಗಳಿಂದಲೂ ನಮ್ಮ ಒಟ್ಟಾರೆಯ ಸಂಸ್ಕೃತಿಯ ಅವಿಭಾಜ್ಯ ಅಂಗವಾಗಿರುವ ಜನಪದೀಯ ಪ್ರಕಾರಗಳು ಮೂಲೆಗುಂಪಾಗುತ್ತಿವೆ.

ನವವಸಾಹತುವಾದವು ಸದಾ 'ಸಾಮೂಹಿಕ, ಅಗ್ಗದ ಸಂಸ್ಕೃತಿಯನ್ನು' ಇತರ ಅಭಿವೃದ್ಧಿಶೀಲ, ಹಿಂದುಳಿದ ದೇಶಗಳಿಗೆ ರವಾನಿಸುವ ತರಾತುರಿಯಲ್ಲಿರುತ್ತದೆ. ಸಾಮೂಹಿಕ ಸಂಸ್ಕೃತಿ ಎಂಬುದು ಏನಿದ್ದರೂ ತೀರ ಕೆಳಮಟ್ಟದ, ಕೆಳವರ್ಗದವರ ಕೀಳುಮಟ್ಟದ ಅಗತ್ಯತೆಗಳನ್ನು ಪೂರೈಸುತ್ತಲೇ ಅವರನ್ನು ಅಲ್ಲಿಗೇ ಮಿತಿಗೊಳಿಸಿಬಿಡುತ್ತದೆ; ನಿರ್ಣಾಯಕವಾದ ಸಾಮಾಜಿಕ-ಆರ್ಥಿಕ- ಸಾಂಸ್ಕೃತಿಕ ವಿಚಾರಗಳಿಂದ, ಸಮಸ್ಯೆಗಳಿಂದ ದೂರ ಇಡುತ್ತದೆ. ಅವು ಸೃಷ್ಟಿಸುವ ಭ್ರಮೆಗಳಿಗೆ ಮಧ್ಯಮ ವರ್ಗದವರೂ ಬಲಿಪಶುಗಳಾಗುತ್ತಿರುವುದು ಸಾಮಾನ್ಯವಾಗಿಬಿಟ್ಟಿದೆ. ಈ ಮೂಲಕ ಸ್ಥಳೀಯ ಬಂಡವಾಳಶಾಹಿ ವರ್ಗದ ನೆರವಿನೊಂದಿಗೆ ಸಾಮ್ರಾಜ್ಯಶಾಹಿ ಮತ್ತು ನವವಸಾಹತುಶಾಹಿ ವಕ್ತಾರರು ರಾಷ್ಟ್ರೀಯ ಸಂಸ್ಕೃತಿಯನ್ನು ಛಿದ್ರಗೊಳಿಸುತ್ತಾರೆ. ಅದರಲ್ಲೂ ಇಂದಿನ ವೈಜ್ಞಾನಿಕ ಮತ್ತು ತಂತ್ರಜ್ಞಾನಗಳ ಕ್ರಾಂತಿಯ ಮೂಲಕ ನಮ್ಮ ಬಂಡವಾಳಶಾಹಿ ಪರಿಮಾಧ್ಯಮಗಳೂ ದೇಶಿ ಅಥವಾ ಜನಪದ ಸಂಸ್ಕೃತಿಗಳನ್ನು ಹೇಳಹೆಸರಿಲ್ಲದಂತೆ ನಾಶಗೊಳಿಸುತ್ತಿವೆ.

ವಾಸ್ತವದಲ್ಲಿ ಜನಸಾಮಾನ್ಯರು, ದುಡಿವ ವರ್ಗದ ಜನರು ನಮ್ಮ ರಾಷ್ಟ್ರೀಯ, ಹಾಗೂ ಪ್ರಜಾಪ್ರಭುತ್ವವಾದಿ ಸಂಸ್ಕೃತಿಯ ವಾರಸುದಾರರು. ಅವರ ಕ್ರಿಯಾಶೀಲ ನೆರವಿನಿಂದಲೇ ನಮ್ಮ ಜನಪರವಾದ ಭವ್ಯ ಸಂಸ್ಕೃತಿಯನ್ನು ಉಳಿಸಿ ಬೆಳಸಲು ಸಾಧ್ಯ. ಈ ಮೂಲಕವೇ ಶೋಷಣಾರಹಿತ ಹೊಸ ಸಮಾಜವೊಂದನ್ನು, ಹೊಸ ಮಾನವನನ್ನು ಸೃಷ್ಟಿಸುವುದು ನಮ್ಮೆಲ್ಲರ ಜವಾಬ್ದಾರಿಯಾಗಿದೆ.

*(ಮಾರ್ಕ್ಸ್ ಜನ್ಮದಿನ : ೫-೫-೧೮೧೮)*

**ಎಸ್. ಸುರೇಂದ್ರ**
ನಂ. ೨೪, ಕೆನರಾ ಬ್ಯಾಂಕ್ ಕಾಲನಿ, ೧ನೇ ಅಡ್ಡರಸ್ತೆ
೩ನೇ ಬ್ಲಾಕ್ ಪೂರ್ವ, ಜಯನಗರ, ಬೆಂಗಳೂರು - ೫೬೦ ೦೧೧

ಏಪ್ರಿಲ್ ತಿಂಗಳ 'ಹೊಸತು' ಮಹಿಳಾ ಮೀಸಲಾತಿ ಕುರಿತ ಸಂಪಾದಕೀಯದ ಕೊನೆಗೆ.. ಗಜಗರ್ಭದಿಂದ ಆನೆಮರಿ ೧೨ ವರ್ಷಕ್ಕೆ ಹೊರ ಬಂದು ನಳನಳಿಸುತ್ತದೆ ಎನ್ನಲಾಗಿದೆ. ಇದು ಪುರಾಣದ ಐರಾವತದ (ನಮ್ಮ ಕ.ರಾ.ರ.ಸಾ. ಸಂಸ್ಥೆಯ ಐರಾವತಕ್ಕೆ ಮೂರು ಸೊಂಡಿಲು!) ವಿಷಯದಲ್ಲಿ ನಿಜವಿರಬಹುದು! ನಮ್ಮ ಏಷ್ಯಾ, ಆಫ್ರಿಕಾದಲ್ಲಿನ, ಅಸ್ತಿತ್ವಕ್ಕಾಗಿ ಮಾನವನೊಂದಿಗೆ ಗೋಡೆಗೆ ಬೆನ್ನುಕೊಟ್ಟು ಹೋರಾಡುತ್ತಿರುವ ಆನೆಗಳು ಎರಡೇ ವರ್ಷಕ್ಕೆ ಈಯುತ್ತವೆ!

ಕೇವಲ ಮಾಹಿತಿಗಾಗಿ ಬರೆದದ್ದು.

ಬೆಂಗಳೂರು **ಕೆ. ಎಸ್. ನವೀನ್**




### ಏಪ್ರಿಲ್ ಸಂಚಿಕೆ

ವಸುಮತಿ ಉಡುಪರ ಕಥೆ 'ಸಂಬಂಧಗಳು' ಓದಿದಾಗ ಯಾಕೋ ತುಂಬ ಸಂಕಟವಾಯಿತು. ಹಾಗೆಯೇ ಒಂದು ಮಾತು ಜ್ಞಾಪಕ ಬಂತು: ''ಕೊಟ್ಟವನು ಕೋಡಂಗಿ ಈಸ್ಕೊಂಡವನು ಈರಭದ್ರ.'' ಅಂದರೆ ಸಂಬಂಧಗಳ ಹೆಸರಲ್ಲಿ ಹಣದ ವ್ಯವಹಾರ ನಡೆದಾಗ ಸ್ವಾರ್ಥಿಗಳು ಹೇಗಾದರೂ ಆಗಲಿ ತಮಗೆ ಲಾಭವಾದರೆ ಸಾಕು ಎಂದು ಯೋಚಿಸಿದಾಗ ಈ ರೀತಿಯಾಗುತ್ತದೆ ಎಂದು ಅನ್ನಿಸುತ್ತಿದೆ. ಹಾಗೆಯೇ, ಶ್ರೀನಿವಾಸ ಜೋಕಟ್ಟೆಯವರ 'ಪಲಾಯನದ ದಾರಿಯಲ್ಲಿ ಕಾಶಿಯ ಪುರೋಹಿತರು' ಲೇಖನ ತುಂಬ ಚೆನ್ನಾಗಿದೆ. ಗಂಗಾನದಿಯ ಹೆಸರಲ್ಲಿ ವೈದಿಕ ಸಮುದಾಯ ಹೇಗೆ ಸುಲಿಗೆ ಮಾಡುತ್ತಿದೆ ಎಂದು ನೆನಿಸಿಕೊಂಡರೆ ಮೈ ಉರಿಯುತ್ತದೆ. ಲೇಖಕರಿಗೆ ವಂದನೆಗಳು. 'ಪವಿತ್ರ ಗಂಗಾ' ಹೇಗೆ ಕೊಳೆಯುತ್ತ ಸಾಗುತ್ತಿದ್ದಾಳೆ ಎಂದು ತುಂಬ ಚೆನ್ನಾಗಿ ತಿಳಿಸಿದ್ದಾರೆ. ಪಲಾಯನಕ್ಕೆ ಕಾರಣ ಸಂಪಾದನೆ. ಅದಕ್ಕೆ ಒಂದು ನಾಣ್ನುಡಿ ನೆನಪಾಗುತ್ತಿದೆ: ''ಎಲ್ಲರನ್ನೂ ಎಲ್ಲಾ ಕಾಲದಲ್ಲೂ ಮೋಸ ಮಾಡಲು ಸಾಧ್ಯವಿಲ್ಲ.'' ನಿಜವಲ್ಲವೆ ?

ಕೋಲಾರ **ವೆಂಕಟೇಶ್**

'ಮಾನವ ಜಾತಿ, ತಾನೊಂದೆ ವಲಂ' ಎಂದ ರಸಋಷಿ ಕುವೆಂಪು ಅವರ ಅಭಿಪ್ರಾಯವನ್ನೇ ಹೋಲುವ 'ಬಾವುಲ'ರ ಬಗ್ಗೆ ರಹಮತ್ ತರೀಕೆರೆ ಅವರ ಲೇಖನ ಕುತೂಹಲ ಹುಟ್ಟಿಸಿತು. ಓದಿಸಿಕೊಂಡು ಹೋಗುವಂತಹ ನಿರೂಪಣೆ ರಹಮತ್ ಅವರ ಬರಹದ ತಾಕತ್ತನ್ನು ತೋರಿಸುತ್ತದೆ. ಅಂತಹ ಸಮರ್ಥ ಬರಹ ! ಬಂಗಾಳದಲ್ಲೂ ಬೆಂಗಳೂರಿನ ಬಗ್ಗೆ ಕ್ರೇಜ್ ಇದೆಯೆಂದು ರಹಮತ್ ಅವರ ಲೇಖನದಿಂದ ತಿಳಿಯಿತು.

'ಹಾವನ್ನು ಹೊಡೆದು ಹದ್ದಿಗೆ ಹಾಕುವುದು' ಎಂದರೆ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸೇರಿದ ಜಾಗವನ್ನು ವಿಜಯನಗರ ಪುನಶ್ಚೇತನ ಟ್ರಸ್ಟ್‌ಗೆ ಕೊಡುವುದು ಇದ್ದಂತೆ. ನಾಚಿಕೆ ಇಲ್ಲದ ಸರ್ಕಾರ !!! ಸರ್ಕಾರದಿಂದ ನಾವು ಉಚಿತವಾದ ಸ್ವಭಾವವನ್ನು ನಿರೀಕ್ಷಿಸುತ್ತೇವೆ. ಆದರೆ ಸರ್ಕಾರವು ಖಚಿತವಾಗಿ ಜನತೆಯ ಆಲೋಚನೆಗೆ ವಿರುದ್ಧವಾದುದನ್ನೇ ಮಾಡುತ್ತದೆಂಬುದು ಈಗಾಗಲೇ ಶತಃಸಿದ್ಧವಾಗಿದೆ. ಕರ್ನಾಟಕವನ್ನು ದೋಚಿ ಖಾಲಿ ಮಾಡುವ ಶಕ್ತಿ ರಾಜಕಾರಣಿಗಳಿಗಿದೆ. ಅವರು 'ಇನ್ನೇನೂ' ಉಳಿಯದ ಹಾಗೆ ಕರ್ನಾಟಕವನ್ನು ಬರಡುಮಾಡುವುದು ಖಂಡಿತ !!

ಮೈಸೂರು **ಕೊ. ಸು. ನರಸಿಂಹಮೂರ್ತಿ**

### ಜ್ವರ ಬಿಟ್ಟಿದೆ, ಆದರೆ...

ಶಿವಮೊಗ್ಗ ನಗರಕ್ಕೆ ಇತ್ತೀಚೆಗೆ ಜ್ವರ ಬಂದಿತ್ತು. ಅಭಿವೃದ್ಧಿಗಾಗಿ ಮರಗಳನ್ನೆಲ್ಲ ನಿರ್ನಾಮ ಮಾಡುತ್ತಲೇ ಇರುವುದರಿಂದ ಏರುತ್ತಿರುವ ತಾಪಮಾನ, ಕ್ಷುಲ್ಲಕ ಕಾರಣಕ್ಕೆ ಅಂಗಡಿ ಮುಂಗಟ್ಟು, ಆಟೋ, ಜಟಕಾ ಗಾಡಿ, ತರಕಾರಿ-ಹಣ್ಣಿನ ಗಾಡಿಗಳಿಗೆ ಹತ್ತಿಸಿದ ಬೆಂಕಿಯ ಉರಿ ಬಿಸಿ, ಗೋಲಿಬಾರ್ ಕರ್ಫ್ಯೂಗಳ ಝಳ, ಪರಸ್ಪರ ಅಪನಂಬಿಕೆ ದ್ವೇಷ, ರೋಷಗಳ ಜ್ವಾಲೆಯಿಂದ ಶಿವಮೊಗ್ಗಕ್ಕೆ ಜ್ವರ ಬಂದಿತ್ತು. ಮನೆಯಿಂದ ಹೊರಬರಲಾರದೆ, ಬೋನಿನಲ್ಲಿ ಸಿಕ್ಕಿಕೊಂಡ ಇಲಿಗಳಂತೆ ಜನ ಚಡಪಡಿಸಿದರು. ಮಧ್ಯಮ ವರ್ಗದ ಜನಗಳಂತೂ ಹಾಲು, ಪೇಪರ್‌ಗಳಿಲ್ಲದೆ ಪರದಾಡಿದರು ಪಾಪ. ಹಾಲಿಗಾಗಿ ಊರೆಲ್ಲ ತಿರುಗಿ, ಗಂಟೆಗಟ್ಟಲೆ ಮೈಲುದ್ದದ ಕ್ಯೂ ನಿಂತು ಲೀಟರಿಗೆ ೪೦-೫೦ ರೂ.ಗಳನ್ನು ಕೊಟ್ಟು ಪೇಪರ್‌ಗೆ ೫-೧೦ ರೂ.ಗಳನ್ನು ಹೆಚ್ಚು ಕೊಟ್ಟು ಕೊಂಡು ಸದ್ಯ ಬದುಕಿದರು ! ಈ ಮಧ್ಯಮ ವರ್ಗದವರು ಹಾಲು, ಪೇಪರ್ ಇಲ್ಲದಿದ್ದರೆ ಸತ್ತೇಹೋಗುತ್ತೇವೇನೋ ಎಂಬ ಧಾವಂತದಿಂದ ಪರದಾಡುತ್ತಿದ್ದುದನ್ನೇ ದೃಶ್ಯ ಮಾಧ್ಯಮಗಳು ವರದಿ ಮಾಡುತ್ತಲೇ ಇದ್ದವು, ನಿತ್ಯಾನಂದನ ಸುದ್ದಿ ಸಿಗುವವರೆಗೆ ! (ಇಂತಹ ಸುದ್ದಿ ಸಿಕ್ಕಿಬಿಟ್ಟರೆ ಈ ಟೀವಿ ಚಾನೆಲ್‌ಗಳಿಗೂ ಪರಮಾನಂದ ?!) ದಿನ ದುಡಿದು



ತಿನ್ನುವವರು, ದುಡಿಯಲೂ ಇಲ್ಲದೆ, ತಿನ್ನಲೂ ಇಲ್ಲದೆ ಹೊಟ್ಟೆಗೆ ತಣ್ಣೀರು ಬಟ್ಟೆ ಹಾಕಿಕೊಂಡು ಮಲಗಿದ್ದು ಸುದ್ದಿಯಾಗಲಿಲ್ಲ. ದಿನಾ ಸಾಯುವವರಿಗೆ ಅಳುವವರಾರು ? ('ಮಧ್ಯಮ' ವರ್ಗದ ಜನರಿಂದಾಗಿಯೇ 'ಮಾಧ್ಯಮ' ಎಂಬ ಹೆಸರು ಬಂದಿದೆಯೇ ? ಭಾಷಾ ಪಂಡಿತರು ಹೇಳಬೇಕು. ಇರಲಿ ಇದು ಬೇರೆ ವಿಷಯವಾಯಿತು.)

ಸದ್ಯಕ್ಕೆ ಈಗ ಶಿವಮೊಗ್ಗಕ್ಕೆ ಜ್ವರ ಬಿಟ್ಟಿದೆ. ಆದರೆ ಇನ್ನೂ ಸುಸ್ತು/ಬಳಲಿಕೆ ಇದೆ. ಜ್ವರ ರೋಗವಲ್ಲ, ಒಳಗಿನ ಯಾವುದಾದರೂ ರೋಗದ ಹೊರಲಕ್ಷಣವೇ ಜ್ವರ ಎಂದು ಹೇಳುತ್ತಾರೆ. ಸಾಧಾರಣ ಶೀತ ಕೆಮ್ಮುಗಳಿಗೂ ಜ್ವರ ಬರುತ್ತದೆ. ಹಾಗೆಯೇ ಹೃದಯ, ಕಿಡ್ನಿ, ಶ್ವಾಸಕೋಶ, ಮಿದುಳು ಯಾವ ಅಂಗದ ಕಾಯಿಲೆಯೇ ಇರಲಿ ಕಡೆಗೆ ಏಡ್ಸ್ ಆಗಲಿ ಜ್ವರವಂತೂ ಬರುತ್ತದೆ. ಈ ಹಿಂದೆಯೂ ಶಿವಮೊಗ್ಗಕ್ಕೆ ಜ್ವರ ಬಂದಿತ್ತು. ಆದರೆ ಈ ಬಾರಿಯ ವ್ಯತ್ಯಾಸವೆಂದರೆ ವೈದ್ಯರದು !

ಜ್ವರವನ್ನು ಮೊದಲು ಉಪಶಮನಗೊಳಿಸಬೇಕು. ಜೊತೆಗೆ ಅದರ ಕಾರಣವಾದ ಕಾಯಿಲೆಯ ಮೂಲ ಕಂಡು ಹಿಡಿದು ಅದಕ್ಕೂ ಚಿಕಿತ್ಸೆ ನೀಡುವ ಜವಾಬ್ದಾರಿ ಅಧಿಕಾರ ಸ್ಥಾನದಲ್ಲಿರುವವರದು. ಆದರೆ ಈ ಬಾರಿ ಆಗಿದ್ದೇನು ? ಇದೊಂದು ಕುತಂತ್ರ-ಷಡ್ಯಂತ್ರ, ಷಡ್ಯಂತ್ರ-ಕುತಂತ್ರ ಅಂತ ರಾಜ್ಯದ ಅಧಿಕಾರದಲ್ಲಿರುವ ಬಿಜೆಪಿಯ ಅಧ್ಯಕ್ಷರು ಆತಂತ್ರ ಜಪ ಮಾಡಿದ್ದು ಬಿಟ್ಟರೆ ಬೇರೇನು ಮಾಡಿದರೋ ಗೊತ್ತಿಲ್ಲ. ನೊಂದವರಿಗೆ ಸಾಂತ್ವನ ಹೇಳುವ, ಸ್ಥಳಕ್ಕೆ ಭೇಟಿ ನೀಡಿ ಶಾಂತಿ ಸ್ಥಾಪನೆಯ ಪ್ರಯತ್ನಗಳನ್ನು ಮಾಡಿದ ವರದಿಗಳಾವುವೂ ಬರಲಿಲ್ಲ. ಈ ಪಕ್ಷದ ಇತರ ನಾಯಕಮಣಿಗಳೂ ಅಷ್ಟೇ, ಇದೊಂದು ಪೂರ್ವ ನಿಯೋಜಿತ ಸಂಚು ಎಂದು ಹೊತ್ತಿ ಉರಿಯುತ್ತಿದ್ದ ಅಗ್ನಿದೇವನಿಗೆ ಪವಿತ್ರವಾದ ತುಪ್ಪವನ್ನೇ ಎರೆಯುವ ಮಾತನಾಡಿದರು. ಇನ್ನು ವಿಧಾನಸಭೆಯಲ್ಲಿ ಗೃಹಮಂತ್ರಿಗಳಿಗೋ ಗೋಲೀಬಾರ್ ಆಗಿದ್ದೇ ಗೊತ್ತಿರಲಿಲ್ಲ. ಗೊತ್ತಾದ ಮೇಲೂ, ತನಿಖೆಗಿನಿಕೆ ಏನೂ ಅಗತ್ಯವಿಲ್ಲ ಎಂದು ತೀರ್ಮಾನ ಕೊಟ್ಟುಬಿಟ್ಟರು. ಸನ್ಮಾನ್ಯ ಮುಖ್ಯಮಂತ್ರಿಗಳು ಆ ವಿಚಾರ ಕೆದಕುವುದೇ ಬೇಡ ಎಂದುಬಿಟ್ಟರು. ಇದೊಂದು ಪೂರ್ವ ನಿಯೋಜಿತ ಸಂಚು ಎಂದೂ, ಷಡ್ಯಂತ್ರ-ಕುತಂತ್ರ ಎಂದು ಅವರ ಪಕ್ಷದವರೇ ಒತ್ತಿ ಒತ್ತಿ ಹೇಳಿದಾಗ್ಯೂ ತನಿಖೆ ಅಗತ್ಯವಿಲ್ಲ, ಕೆದಕುವುದು ಬೇಡ ಎಂದು ಮುಖ್ಯಮಂತ್ರಿಗಳು ಹೇಳಿದರೆ ಅರ್ಥವೇನು ? ಯಾರೂ (ವಿರೋಧ ಪಕ್ಷದವರೂ) ತಲೆಕೆಡಿಸಿಕೊಳ್ಳಲಿಲ್ಲ. ಜ್ವರ ಬಿಟ್ಟ ಮೇಲೆ ಬ್ಲಡ್ ಟೆಸ್ಟು, ಯೂರಿನ್ ಟೆಸ್ಟು, ಎಕ್ಸ್‌ರೇ ಎಲ್ಲ ಯಾಕೆ ?

ವಾಡಿಕೆಯಂತೆ ಶಾಂತಿಸಭೆಗಳು ನಡೆದವು. ಆದರೆ ಅದೂ ವಿಧಾನಸಭೆಯಂತೆ ಆರೋಪ ಪತ್ಯಾರೋಪ, ಗದ್ದಲಗಳಲ್ಲಿ ಕೊನೆಯಾಯಿತು. ಶಾಂತಿಸಭೆ ಉದ್ದೇಶವೇ ಮೂಲೆ ಸೇರಿತು. ಶಾಂತಿಸಭೆಯಲ್ಲಿ ಎಲ್ಲ ಧರ್ಮಗಳ/ ರಾಜಕೀಯ ಪಕ್ಷಗಳ ಮುಖಂಡರು/ನಾಯಕರು ಸೇರುವ ಉದ್ದೇಶವೇನು ? ಶಾಂತಿ ನೆಲೆಸಲು/ಕಾಪಾಡಲು ತಾವುಗಳು ತಮ್ಮ ವತಿಯಿಂದ ಏನೇನು ಪ್ರಯತ್ನಗಳನ್ನು ಮಾಡುತ್ತೇವೆ ಎಂದು ಹೇಳಬೇಕು ಎಂಬುದು ನನ್ನಂಥ ಅಲ್ಪಮತಿಗಳ ತಿಳುವಳಿಕೆ. ಆದರೆ ಇಲ್ಲಿ ಆದದ್ದೇನು ? ನೀವು ಹಾಗೆ ಮಾಡಿ, ನೀವು ಹೀಗೆ ಮಾಡಿ ಎಂದು ಪ್ರತಿಯೊಬ್ಬರೂ ಮತ್ತೊಬ್ಬರಿಗೆ ಉಪದೇಶ/ ನಿರ್ದೇಶನ ನೀಡಿದರು. ಆ ನಾಯಕರು ಉಪದೇಶ ಮಾಡಬೇಕಾಗಿದ್ದು, ನಿರ್ದೇಶನ ನೀಡಬೇಕಾಗಿದ್ದು ಅಲ್ಲಿ ಸೇರಿದ ಇತರ ನಾಯಕರಿಗಲ್ಲ. ಬದಲಾಗಿ ತಮ್ಮ ತಮ್ಮ ಗುಂಪು/ಪಕ್ಷ/ಧರ್ಮದ ಅನುಯಾಯಿಗಳಿಗೆ ಎನ್ನುವ ಮೂಲಭೂತ ತಿಳುವಳಿಕೆ ಕೂಡ ಶಾಂತಿಸಭೆಯ ಪ್ರತಿನಿಧಿಗಳಿಗೆ/ಮುಖಂಡರಿಗೆ ಇಲ್ಲವಾಯಿತೇ ? ಈಗ ಯಾವ ಪಕ್ಷ/ಜಾತಿ/ಧರ್ಮದ ನಾಯಕರು, ಗುರುಗಳು, ಮುಖಂಡರು, ನಾವು ಪ್ರತಿನಿಧಿಸುವ ಗುಂಪನ್ನು ನಿಯಂತ್ರಿಸಬಲ್ಲರು ? ಬೆಂಕಿ ಹಚ್ಚಿಸಬಲ್ಲರಷ್ಟೆ, ಯಾರೂ ಆರಿಸಲಾಗದ ಸ್ಥಿತಿ ಈ ಸಮಾಜದ್ದಾಗಿದೆ.

ಇನ್ನು ಎಂತೆಂಥದ್ದೋ ಸಾಹಸ ಮಾಡಿ ಎಷ್ಟಾದರೂ ಬೆಲೆ ತೆತ್ತು ಹಾಲು ತಂದು ಕುಡಿದು, ಪೇಪರ್ ಓದಿದ 'ವಿದ್ಯಾವಂತ' ಮಧ್ಯಮ ವರ್ಗದವರು ಮಾಡಿದ್ದೇನು ? ಹಾಗಂತೆ, ಹೀಗಂತೆ, ಅಲ್ಲಿ ಬೆಂಕಿ ಹಾಕಿದರಂತೆ, ಇಲ್ಲಿ ಚಾಕು ಹಾಕಿದರಂತೆ, ಇದೆಲ್ಲ ಗಲಭೆ ಅಲ್ಲವಂತೆ, ನಮ್ಮ ಮುಖ್ಯಮಂತ್ರಿಗಳನ್ನು ಇಳಿಸಲು ದೆಹಲಿಯ ಯಾರದೋ ಕೈವಾಡವಂತೆ, ಅಂತ ಗಾಳಿಸುದ್ದಿಗಳನ್ನು ನಂಬಿ, ಇನ್ನಷ್ಟು ಹರಡುತ್ತಿದ್ದರು. ಇಷ್ಟಾದರೆ ಪರವಾಗಿರಲಿಲ್ಲವೇನೋ. ಕುಡಿದದ್ದು ಹಾಲಾದರೂ, ಹಾಲಾಹಲ/ಆಲ್ಕೋಹಾಲ್ ಕುಡಿದವರಂತೆ ''ಆ ನನ್ನ ಮಕ್ಳಿಗೆ ಇನ್ನೂ ಸರಿಯಾಗಿ ಬುದ್ಧಿ

ಕಲಿಸಬೇಕು'' ಎನ್ನುವಂಥ ಮಾತುಗಳು ಏನನ್ನು ಸೂಚಿಸುತ್ತವೆ ? ಒಂದು ಹಂತದಲ್ಲಿ ಗುಜರಾತ್ ಮಾದರಿಯ ಪ್ರಯೋಗ ಶುರುವಾಯಿತೇನೋ ಎಂಬ ಆತಂಕ ಎದುರಾಗಿತ್ತು.

ಈಗ ಜ್ವರವೇನೋ ಉಪಶಮನವಾಗಿದೆ. ಅದಕ್ಕೆ ಕಾರಣವಾದ ಕಾಯಿಲೆ ಹಾಗೇ ಇದೆ (ಶಿವಮೊಗ್ಗದಲ್ಲಿ ಮಾತ್ರವಲ್ಲ ಎಲ್ಲ ಕಡೆಯಲ್ಲೂ). ರೋಗ ಇನ್ನೂ ಒಂದು ಹಂತ ಮೇಲಕ್ಕೇರಿದೆ. ಮತ್ತೆ ಯಾವಾಗ ಉಲ್ಬಣಿಸುತ್ತದೋ ಗೊತ್ತಿಲ್ಲ.

ಶಿವಮೊಗ್ಗ — ವಿ. ಶ್ರೀನಿವಾಸ

### ಒಂದು ವೈಜ್ಞಾನಿಕ ಅವಲೋಕನ

ಇತ್ತೀಚೆಗೆ ಕರ್ನಾಟಕ ಸರ್ಕಾರವು ಗೋಹತ್ಯೆ ನಿಷೇಧ ಕಾಯ್ದೆ-೨೦೧೦ ಅನ್ನು ಜಾರಿಗೆ ತರಲು ತೀರ್ಮಾನಿಸಿದೆ. ಇದು ಎಷ್ಟರಮಟ್ಟಿಗೆ ಪರಿಸರ ಸಮತೋಲನಕ್ಕೆ ಹತ್ತಿರವಾಗಿದೆ ಎಂಬುದನ್ನಷ್ಟೇ ಚರ್ಚಿಸೋಣ. ವೇದ, ಪುರಾಣ, ಧಾರ್ಮಿಕ, ಸಾಂಸ್ಕೃತಿಕ, ರಾಜಕೀಯ, ಭಾವನಾತ್ಮಕ ನೆಲೆಗಳಲ್ಲಿ ಚರ್ಚಿಸಿದರೆ ಉದ್ವೇಗ, ದ್ವೇಷ, ಅಸೂಯೆ, ಆಕ್ರೋಶಗಳೇ ಮೇಲಾಟವಾಗಿ, ವಿವೇಕ, ಸತ್ಯ ಎಲ್ಲೋ ಅಡಗಿಹೋಗಬಹುದು. ಆದ್ದರಿಂದ ವಿನಯ, ಸಂಯಮದ ಚೌಕಟ್ಟಿನಲ್ಲಿ ವೈಜ್ಞಾನಿಕ ಹಿನ್ನೆಲೆ ಇಟ್ಟುಕೊಂಡು, ಸಮಷ್ಟಿ ಪ್ರಜ್ಞೆಯಿಂದ, ಸತ್ಯವನ್ನರಿಯಲು ಪ್ರಯತ್ನಿಸೋಣ.

ನಮ್ಮ ದೇಶದ ಜನರ ಆಹಾರ ಪದ್ಧತಿ ಮಾಂಸಾಹಾರ ಮತ್ತು ಸಸ್ಯಾಹಾರವಾಗಿದೆ. ಅದರಲ್ಲೂ ಶೇಕಡ ೯೦ಕ್ಕಿಂತ ಮಿಗಿಲಾಗಿ ಮಾಂಸಾಹಾರಿಗಳೇ ಇದ್ದಾರೆ. ಇವರಲ್ಲಿ ಮೀನು, ಕೋಳಿ, ಕುರಿ, ಆಡು, ಹಂದಿ, ದನದ ಮಾಂಸ ತಿನ್ನುವವರೇ ಅಧಿಕ ಸಂಖ್ಯೆಯಲ್ಲಿದ್ದಾರೆ. ಇವರನ್ನು ಸಾಂಪ್ರದಾಯಿಕ ಮಾಂಸಾಹಾರಿಗಳೆನ್ನಬಹುದು. ಇವರಲ್ಲದೆ ಅತ್ಯಂತ ತಳ ಸಮುದಾಯಗಳು; ಮುಖ್ಯವಾಗಿ ಅಲೆಮಾರಿ ಜನಾಂಗಗಳು ತೋಡ (ಹೆಗ್ಗಣ), ಹಾವು, ಬೆಕ್ಕು, ಕೋತಿ, ಹಕ್ಕಿ-ಪಕ್ಷಿಗಳು, ಮಳೆಗಾಲದ ಚಿಟ್ಟೆಗಳು, ಆಮೆ, ಮೊಲ, ಮುಂಗುಸಿ, ಅಳಿಲು, ಒಂಟೆ – ಹೀಗೆ ವಿವಿಧ ಜಾತಿಯ ಪ್ರಾಣಿಗಳನ್ನು ಆಹಾರವಾಗಿ ಬಳಸುವ ಪದ್ಧತಿ ಇದೆ. ಈ ಆಹಾರ ಸರಪಳಿ ಒಂದಕ್ಕೊಂದು ಕೊಂಡಿಯಾಗಿ ಪರಿಸರ ಸಮತೋಲನದಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ. ಇದು ಪ್ರಾಥಮಿಕ ಶಿಕ್ಷಣದಿಂದಲೇ ತಿಳಿದುಬಂದಿರುವ ವಿಚಾರವಾಗಿದೆ.

ಹೀಗೊಂದು ಕ್ಷಣ ಆಹಾರ ಸರಪಳಿಯ ಒಂದು ಕೊಂಡಿ ಕಳಚಿದರೆ, ಅದರ ದೂರಗಾಮಿ ಪರಿಣಾಮ ಪರಿಸರದ ಅಸಮತೋಲನದಲ್ಲಿ ಕೊನೆಯಾಗಲಿದೆ. ಈಗ ಗೋಹತ್ಯೆ ನಿಷೇಧದಿಂದ ದನ ಮತ್ತು ಎಮ್ಮೆಗಳ ಮಾಂಸಕ್ಕೆ ತಡೆ ಬೀಳಲಿದೆ. ಈ ಮೂಲಕ ದನದ ಮಾಂಸಾಹಾರಿಗಳು ಅನಿವಾರ್ಯವಾಗಿ ಸಸ್ಯಾಹಾರಿಗಳು ಅಥವಾ ಇನ್ನಿತರ ಮಾಂಸಾಹಾರಿಗಳಾಗಿ ಕಡ್ಡಾಯವಾಗಿ ಬದಲಾಗಬೇಕಾಗುತ್ತದೆ. ಈಗ ಕೈಗೆಟುಕುವ ಬೆಲೆಯಲ್ಲಿ ಮತ್ತು ಬಡವರ ಆಹಾರವಾಗಿ ದನದ ಮಾಂಸ ಬಳಕೆಯಾಗುತ್ತಿದೆ. ಈ ಹಿನ್ನೆಲೆಯಲ್ಲಿ ಇನ್ನಿತರ ಮಾಂಸಗಳ ಮತ್ತು ಸಸ್ಯಾಹಾರದ ಮೇಲೆ ತೀವ್ರತರವಾದ ಬೇಡಿಕೆಯುಂಟಾಗಿ ಅಸಮತೋಲನ ಕಾಡಲು ಪ್ರಾರಂಭವಾಗುತ್ತದೆ. ಕಡಿಮೆ ಬೆಲೆಯಲ್ಲಿ ದೊರೆಯುತ್ತಿದ್ದ ಪೌಷ್ಟಿಕಾಂಶದ ಆಹಾರ ಇನ್ನಿಲ್ಲವಾಗಿ, ಅಪೌಷ್ಟಿಕತೆಯಿಂದ ನರಳಲಿರುವ ಹೊಸ ಸಮುದಾಯ ನಿರ್ಮಾಣವಾಗಿ ಸಮಾಜದ ಸ್ವಾಸ್ಥ್ಯ ಸ್ಥಿತಿ ಹದಗೆಡಬಹುದು.

ಈಗಾಗಲೇ ಜಾಗತೀಕರಣದ ಪ್ರಭಾವದಿಂದ ನಗರೀಕರಣ, ಕೈಗಾರಿಕೀಕರಣ ಮತ್ತು ವಿಶೇಷ ಆರ್ಥಿಕ ವಲಯಗಳಿಗಾಗಿ ಭೂಸ್ವಾಧೀನದಂತಹ ಪ್ರಕ್ರಿಯೆಗಳು ಹೆಚ್ಚಾಗುತ್ತಿವೆ. ಇದರಿಂದಾಗಿ ಕೃಷಿಭೂಮಿ ಕಡಿಮೆಯಾಗುತ್ತಿದೆ. ಇದರ ಪರಿಣಾಮವಾಗಿ ಕೃಷಿ-ಕಾರ್ಮಿಕರು ನಗರಮುಖಿಗಳಾಗಿ ಕೃಷಿಯನ್ನು ತ್ಯಜಿಸುತ್ತಿದ್ದಾರೆ. ಹೀಗೆ ರೈತರು, ಕೃಷಿ-ಕಾರ್ಮಿಕರು ಕೃಷಿ ಚಟುವಟಿಕೆಗಳನ್ನು ಕೈಬಿಡುವುದರಿಂದ ಆಹಾರೋತ್ಪಾದನೆ ಕುಂಠಿತವಾಗಿದೆ. ಹೀಗಾಗಿ ಆಹಾರದ ಕೊರತೆ ಕಾಡಲಿದೆ. ವಸ್ತುಸ್ಥಿತಿ ಹೀಗಿರುವಾಗ ಮತ್ತೆ ಮತ್ತೆ ಸಸ್ಯಾಹಾರಿ ಉತ್ಪನ್ನಗಳ ಮೇಲೆ ಒತ್ತಡ ಜಾಸ್ತಿಯಾದರೆ ಪರಿಸರದಲ್ಲಿ ಅಸಮತೋಲನವುಂಟಾಗಿ, ಅದರ ದೂರಗಾಮಿ ಪರಿಣಾಮವಾಗಿ ಈಗಾಗಲೇ ಏರುತ್ತಿರುವ ಭೂತಾಪಮಾನ ಮತ್ತಷ್ಟು ಜಾಸ್ತಿಯಾಗಲಿದೆ. ಭೂತಾಪಮಾನ ಜಾಸ್ತಿಯಾಗಲು ಭಾರತದ ಭತ್ತದ ಬೆಳೆ ಪ್ರಮುಖ ಕಾರಣ; ಈ ಮೂಲಕ ಭತ್ತದ ಗದ್ದೆಯಿಂದ ಮೀಥೇನ್ ಹೆಚ್ಚು ಬಿಡುಗಡೆಯಾಗಿ ಭೂಮಿಯ ಕಾವಿಗೆ ಕಾರಣವಾಗಿದೆ ಎಂಬ ವಾದವನ್ನು ಪ್ರಮುಖವಾಗಿ ವಿಶ್ವಸಂಸ್ಥೆ ಭಾರತದ ಮೇಲೆ ಆರೋಪ ಮಾಡುತ್ತಿದೆ. ಹೆಚ್ಚುತ್ತಿರುವ ಭೂತಾಪಮಾನವನ್ನು ನಿಯಂತ್ರಿಸುವ ಸಲುವಾಗಿ ಸಹಿ ಹಾಕಲು ಭಾರತಕ್ಕೆ ವಿಶ್ವಮಟ್ಟದಲ್ಲಿ ತೀವ್ರತರವಾದ ಒತ್ತಡವಿದೆ. ಪರಿಸ್ಥಿತಿ ಈ ಮಟ್ಟಿಗೆ ಬಿಗಡಾಯಿಸಿರುವಾಗ ನಾವು ದನದ ಮಾಂಸದ ನಿಷೇಧದಿಂದಾಗಿ ಸಸ್ಯಾಹಾರಕ್ಕಾಗಿ ತೀವ್ರ ಬೇಡಿಕೆಯುಂಟಾದಾಗ ಸ್ವಾಭಾವಿಕವಾಗಿ ಭತ್ತದ ಗದ್ದೆಗಳು ಹೆಚ್ಚಾಗಲಿವೆ. (ಅಲ್ಲಿಯವರೆಗೂ ಕೃಷಿಗಾಗಿ ಭೂಮಿ ಇನ್ನೂ ಉಳಿದಿದ್ದರೆ!) ಈ ಮೂಲಕ ಭೂತಾಪಮಾನ ಹೆಚ್ಚಾಗಲಿದೆ.

ಇನ್ನು ಗೋಹತ್ಯೆ ನಿಷೇಧದಿಂದ ಜಾನುವಾರುಗಳ ಸಂಖ್ಯೆ ಹೆಚ್ಚಾಗಲಿದೆ. ಅವುಗಳ ಮೇವಿನ ಆಹಾರಕ್ಕಾಗಿ ಮತ್ತೆ ಕೃಷಿಭೂಮಿ ಮೇಲೆ ಒತ್ತಡ ಹೆಚ್ಚಾಗುತ್ತದೆ. ಕೊನೆಗೆ ಅರಣ್ಯ ನಾಶಕ್ಕೆ ಇದು ದಾರಿ ಮಾಡಿಕೊಡುವ ಸಾಧ್ಯತೆ ನಿಚ್ಚಳವಾಗಿದೆ. ಅರಣ್ಯ ನಾಶದಿಂದಲೂ ಭೂತಾಪಮಾನ ಜಾಸ್ತಿಯಾಗಲಿದೆ. ಇದೇ ಮಾದರಿಯಲ್ಲಿ ಜಾನುವಾರುಗಳ ಸಂಖ್ಯೆ ಹೆಚ್ಚಾದಾಗ, ಅವುಗಳ ಸಗಣಿಯ ಪ್ರಮಾಣ ಜಾಸ್ತಿಯಾಗುತ್ತದೆ. ಸಗಣಿಯಿಂದಲೂ ಮೀಥೇನ್ ಬಿಡುಗಡೆಯಾಗಿ ಭೂತಾಪಮಾನ ಜಾಸ್ತಿಯಾಗಲಿದೆ ಎಂಬ ವಾದವೂ ಪ್ರಚಲಿತವಾಗಿದೆ. ಈ ಎಲ್ಲಾ ವಿಚಾರಗಳೂ ಊಹಾತ್ಮಕ ವಿಚಾರಗಳಾಗಿರದೆ ಇವುಗಳಿಗೆ ವೈಜ್ಞಾನಿಕ ಹಿನ್ನೆಲೆ ಇದೆ.

ಇದಿಷ್ಟು ಪರಿಸರ ಅಸಮತೋಲನಕ್ಕೆ ದಾರಿ ತೋರಿದರೆ, ವಾಸ್ತವಿಕ ನೆಲೆಗಟ್ಟಿನಲ್ಲಿ ಸತ್ಯವನ್ನು ನೋಡುವುದಾದರೆ, ಕರ್ನಾಟಕವು ರಾಷ್ಟ್ರದಲ್ಲೇ ಹಾಲು ಉತ್ಪಾದನೆಯಲ್ಲಿ ಮೊದಲೆರಡು ಸ್ಥಾನಕ್ಕೆ ಪೈಪೋಟಿ ನಡೆಸುತ್ತಿದೆ. ಈ ಮೂಲಕ ವ್ಯವಸಾಯ ಜಾನುವಾರುಗಳಿಗಿಂತ ಹಾಲು ಉತ್ಪಾದಿಸುವ ರಾಸುಗಳು ಹೆಚ್ಚಾಗಿವೆ. ಅದರಲ್ಲೂ ಮಿಶ್ರತಳಿ ರಾಸುಗಳಾದ ಹೋಲೆಸ್ಟಿಯನ್ ಫ್ರಿಸಿಯನ್ ಮತ್ತು ಜರ್ಸಿ ರಾಸುಗಳು ಹೆಚ್ಚಿನ ಸಂಖ್ಯೆಯಲ್ಲಿವೆ. ಇವತ್ತಿನ ಕೃಷಿ ಕ್ರಾಂತಿಯಲ್ಲಿ ಯಾಂತ್ರೀಕರಣ ಹೆಚ್ಚಾಗಿ ವ್ಯವಸಾಯ ರಾಸುಗಳ ಸಂಖ್ಯೆ ತೀರಾ ಕಡಿಮೆಯಾಗಿದೆ. ಹೆಚ್‌ಎಫ್ ಮತ್ತು ಜರ್ಸಿ ರಾಸುಗಳು ಅತಿ ಹೆಚ್ಚು ಹಾಲು ಕೊಡುವ ತಳಿಗಳಾಗಿದ್ದು ಇವುಗಳ ಸಂಖ್ಯೆ ಗಣನೀಯ ಪ್ರಮಾಣದಲ್ಲಿದೆ. ಇವು ಅತಿಹೆಚ್ಚು ಹಾಲು ಕೊಡುವುದರಿಂದ ಕೆಚ್ಚಲು ಬಾವು ಕಾಯಿಲೆ ಹೆಚ್ಚು ಬರುತ್ತದೆ. ಕೆಲವೊಮ್ಮೆ ತೀವ್ರತರವಾದ ಕೆಚ್ಚಲು ಬಾವು ಆದಾಗ ನಾಲ್ಕು ಮೊಲೆತೊಟ್ಟುಗಳು ನರಗಟ್ಟುವಿಕೆಗೆ ಒಳಗಾಗಿ ಶಾಶ್ವತವಾಗಿ ಹಾಲು ಉತ್ಪಾದನೆ ನಿಂತುಹೋಗುತ್ತದೆ. ಇವುಗಳು ಕೃಷಿ ಚಟುವಟಿಕೆಗಳಿಗೂ ಪ್ರಯೋಜನಕ್ಕೆ ಬರುವುದಿಲ್ಲ. ಅಂತಹ ರಾಸುಗಳನ್ನು ಏನು ಮಾಡುವುದು ? ಹಲವೊಮ್ಮೆ ಆಕಸ್ಮಿಕಗಳಿಂದ ಜಾರಿಬಿದ್ದಾಗ ಸರಿಪಡಿಸಲಾಗದ ಮೂಳೆ ಮುರಿತಗಳು, ಮೂಳೆ ಜರುಗುವಿಕೆಗಳಿಂದ ಎದ್ದು ನಿಲ್ಲಲಾರದ ಪರಿಸ್ಥಿತಿಗೆ ಒಳಪಡುತ್ತವೆ. ಅಂತಹ ರಾಸುಗಳನ್ನು ಏನು ಮಾಡುವುದು ? ಮತ್ತೆ ಹಾಲು ಕರೆಯುವ ರಾಸುಗಳಲ್ಲಿ ಗಂಡುಕರು ಹಾಕಿದರೆ ಏನು ಮಾಡುವುದು ? ಹಲವಾರು ಕಾಯಿಲೆಗಳಿಂದ ಶಾಶ್ವತ ಬಂಜೆತನಕ್ಕೆ ಒಳಗಾಗುವ ರಾಸುಗಳನ್ನು ಏನು ಮಾಡುವುದು ? ಈ ಎಲ್ಲ ಅನುಪಯುಕ್ತ ರಾಸುಗಳನ್ನು ರೈತರು ಸ್ವಾಭಾವಿಕವಾಗಿ ಆರ್ಥಿಕ ದೃಷ್ಟಿಯಿಂದ ಅವುಗಳನ್ನು ದನದ ಮಾಂಸ ಉತ್ಪಾದಕರಿಗೆ ಮಾರಾಟ ಮಾಡುತ್ತಾರೆ. ಇದು ಕಾಲಾನುಕಾಲದಿಂದಲೂ ಅನೂಚಾನವಾಗಿ ನಡೆದುಕೊಂಡು ಬಂದಿರುವ ಕೃಷಿ ಚಟುವಟಿಕೆಯಾಗಿದೆ. ಈ ವಾಸ್ತವಿಕ ನೆಲೆಗಟ್ಟಿನಿಂದ ಹೊರಬರುವುದು ಹೇಗೆ ?

ಈಗ ಮಾಂಸದ ದನಗಳ ವಧೆಯಿಂದ ಸಿಗುತ್ತಿರುವ ಉಪ ಉತ್ಪನ್ನಗಳಾದ ಕೊಬ್ಬು, ಮೂಳೆ, ರಕ್ತ, ಕೊಂಬು, ಚರ್ಮಗಳು ದೇಶದ ಬಹುದೊಡ್ಡ ಉದ್ಯಮವಾಗಿರುವ ಔಷಧ ಉತ್ಪನ್ನಗಳಿಗೆ ಮತ್ತು ಚರ್ಮೋದ್ಯಮಕ್ಕೆ ಮೂಲ ಸರಕಾಗಿವೆ. ಇಂತಹ ಸನ್ನಿವೇಶದಲ್ಲಿ ನಮ್ಮ ಔಷಧ ಉತ್ಪಾದನೆಯ ಪರಿಸ್ಥಿತಿ ಏನಾಗಬಹುದು ? ಚರ್ಮೋದ್ಯಮಗಳ ಸ್ಥಿತಿ ಏನಾಗಬಹುದು ? ದೇಶದ ಜನರ ಆರೋಗ್ಯದ ಪರಿಸ್ಥಿತಿ ಏನಾಗಬಹುದು ?

ಇವತ್ತಿನ ಸರ್ಕಾರದಲ್ಲಿ ಹೆಚ್ಚಿನ ಪರಿಸರವಾದಿಗಳು ಮತ್ತು ರೈತಕಾಳಜಿಯುಳ್ಳವರಾದ ಅನಂತ ಹೆಗಡೆ ಆಶೀಸರ, ವೈ. ಬಿ. ರಾಮಕೃಷ್ಣ, ಆನಂದ, ಶೋಭಾ ಕರಂದ್ಲಾಜೆ ಮುಂತಾದವರು ಜವಾಬ್ದಾರಿಯುತ ಸ್ಥಾನಗಳಲ್ಲಿದ್ದಾರೆ. ಇವರನ್ನು ಒಳಗೊಂಡಂತೆ ಪಶುವೈದ್ಯರು, ಪಶುವಿಜ್ಞಾನಿಗಳು, ಆಹಾರತಜ್ಞರು, ಸಾಮಾಜಿಕ ವಿಜ್ಞಾನಿಗಳು, ಕೃಷಿತಜ್ಞರು – ಇವರೆಲ್ಲರನ್ನೂ ಒಂದೆಡೆ ಸೇರಿಸಿ ವೈಜ್ಞಾನಿಕ ವಿಚಾರಮಂಥನ ನಡೆಸಿ, ಎಲ್ಲಾ ಸಾಧಕ ಬಾಧಕಗಳ ಬಗ್ಗೆ ಬೆಳಕು ಚೆಲ್ಲಿ ಆನಂತರ ಗೋಹತ್ಯೆ ನಿಷೇಧದ ಬಗ್ಗೆ ತೀರ್ಮಾನ ಕೈಗೊಳ್ಳುವುದು ಸಮಂಜಸವಾಗಿರುತ್ತದೆ.

ಊರು ತಿಳಿಸಿಲ್ಲ — ಪ್ರಗತಿನಂದ

ಏಪ್ರಿಲ್ ೨೦೧೦ರ 'ಹೊಸತು'ವಿನ ಸಂಚಿಕೆ ಕೈಸೇರಿತು. ದಿ|| ಮಹಾಬಲ ಹೆಗಡೆಯವರ ಬಗ್ಗೆ ಬರೆದ ನನ್ನ ಲೇಖನವನ್ನು ಪ್ರಕಟಪಡಿಸಿದ್ದೀರಿ. ಸಂತೋಷವಾಯಿತು. ಆದರೆ ಒಂದು ಪ್ರಮಾದ ನಡೆದಿದೆ. ಮಹಾಬಲ ಹೆಗಡೆಯವರ ಭಾವಚಿತ್ರದ ಬದಲು ಶಂಭು ಹೆಗಡೆಯವರ ಭಾವಚಿತ್ರವನ್ನು ಅಚ್ಚು ಮಾಡಲಾಗಿದೆ.

ಉಡುಪಿ — ಎ. ಜಿ. ಡಿ'ಸೋಜಾ


ಮಹಾಬಲ ಹೆಗಡೆ

# ಜ್ಯೋತಿ ಬಸು ಅವರ ಜೀವನಚರಿತ್ರೆ ಕುರಿತು

ಪ್ರೊ|| ಬರಗೂರು ರಾಮಚಂದ್ರಪ್ಪ

**ಜ್ಯೋತಿ** ಬಸು ಅವರ ಜೀವನಚರಿತ್ರೆಯನ್ನು ಮೂಲತಃ ಸುರಭಿ ಬ್ಯಾನರ್ಜಿ ಅವರು ಬರೆದಿದ್ದು 'ರಾಹು' ಅವರು ಕನ್ನಡಕ್ಕೆ ಅನುವಾದಿಸಿದ್ದಾರೆ. ಕಟ್ಟಕಡೆಯವರೆಗೆ ತಾವು ನಂಬಿದ ರಾಜಕೀಯ ಸಿದ್ಧಾಂತಕ್ಕೆ ಬದ್ಧವಾಗಿ ಬದುಕಿದ ಜ್ಯೋತಿ ಬಸು ಅವರ ಬದುಕಿನ 'ಅಕ್ಷರಹಾದಿ' ಯಲ್ಲಿ ಪಯಣಿಸುವುದು ಆಸಕ್ತಿದಾಯಕವಷ್ಟೇ ಅಲ್ಲ, ಆನಂದದಾಯಕವೂ ಹೌದು. ರಾಜಕೀಯವೆಂಬ ಪರಿಕಲ್ಪನೆಗೆ ಅಪಚಾರವಾಗುವಂತೆ ಬದುಕುತ್ತಿರುವವರ ದಂಡುದಾಂಡುಗಳ ನಡುವೆ ಸಿದ್ಧಾಂತ ಬದ್ಧತೆಯ ಜೊತೆಗೆ ಚಲನಶೀಲತೆಯಲ್ಲಿ ನಂಬಿಕೆಯಿದ್ದ ರಾಜಕೀಯ ಮುತ್ಸದ್ದಿಯ ಬದುಕನ್ನು ಅರಿಯುವುದು ನಿಜಕ್ಕೂ ಆನಂದದಾಯಕ.

ಜೀವನಚರಿತ್ರೆಯು ಸಂಬಂಧಪಟ್ಟ ವ್ಯಕ್ತಿಯ ಜೀವನ ಮತ್ತು ಆ ಕಾಲದ ಚರಿತ್ರೆ – ಎರಡನ್ನೂ ಒಳಗೊಂಡಿದ್ದರೆ ಉತ್ತಮವಾದ ಕೊಡುಗೆಯಾಗುತ್ತದೆ. ಕೇವಲ ವ್ಯಕ್ತಿ ಜೀವನದ ವಿವರಗಳ ನಿರೂಪಣೆಯಿದ್ದರೆ ಅಂತಹ ಕೃತಿಯಲ್ಲಿ ಆತ್ಮವೇ ಕಳೆದುಹೋಗಿರುತ್ತದೆ. ಹೊರ ಸಿಂಗಾರದ ವಯ್ಯಾರ ಹೆಚ್ಚಾಗುವ ಅಪಾಯವೂ ಇರುತ್ತದೆ. ಆದ್ದರಿಂದ ಜೀವನಚರಿತ್ರೆಕಾರರ ಕೆಲಸ ಸುಲಭವಾದದ್ದಲ್ಲ. ಸುಲಭವಾಗಿ ತೆಗೆದುಕೊಂಡವರು ಉತ್ತಮ ಜೀವನಚರಿತ್ರೆಯನ್ನು ಕಟ್ಟುವುದಿಲ್ಲ. ಬಯೋ ಡೇಟಾವನ್ನೇ ಬದುಕಾಗಿ ರೂಪಾಂತರಿಸಿದರೆ ಉತ್ತಮ ಜೀವನಚರಿತ್ರೆಯಾಗುವುದಿಲ್ಲ. ಯಾರ ಜೀವನಚರಿತ್ರೆಯನ್ನು ಬರೆಯಲಾಗುತ್ತಿದೆಯೋ ಅವರ ಕೌಟುಂಬಿಕ ಸನ್ನಿವೇಶದ ಜೊತೆಗೆ ಒಟ್ಟು ಸಾಮಾಜಿಕ ಸಂದರ್ಭವನ್ನು ಗ್ರಹಿಸಿ ಅರ್ಥೈಸಿಕೊಳ್ಳುವ ರಚನೆಗಳಲ್ಲಿ ಜೀವನವೂ ಇರುತ್ತದೆ. ಚರಿತ್ರೆಯೂ ಇರುತ್ತದೆ. ಇಂತಹ ಪ್ರಾಮಾಣಿಕ ಮತ್ತು ಪಕ್ವಗೊಂಡ ಪ್ರಯತ್ನವನ್ನು ಸುರಭಿ ಬ್ಯಾನರ್ಜಿಯವರು ಮಾಡಿದ್ದಾರೆ. 'ರಾಹು' ಅವರು ಅಷ್ಟೇ ಪ್ರಾಮಾಣಿಕತೆಯಿಂದ ಕನ್ನಡಕ್ಕೆ ತಂದಿದ್ದಾರೆ. ಇಲ್ಲಿ ನಾನು 'ಪ್ರಾಮಾಣಿಕತೆ'ಯೆಂಬ ಪದವನ್ನು ಪ್ರಶಂಸೆಯ ಒಂದು ವಿಶೇಷಣ ಮಾತ್ರವಾಗಿ ಬಳಸಿಲ್ಲ. ಜ್ಯೋತಿ ಬಸು ಅವರ ರಾಜಕೀಯ ಸಿದ್ಧಾಂತದ ಸಮೀಪಕ್ಕೆ, – ಸಾಧ್ಯವಾದರೆ ಒಳಗೆ – ಪ್ರೀತಿಯಿಂದ ಪ್ರವೇಶಿಸಿದವರಿಗೆ ಮಾತ್ರ ಪ್ರಾಮಾಣಿಕತೆಯೆನ್ನುವುದು ಅದರ ಅರ್ಥಪೂರ್ಣತೆಯೊಂದಿಗೆ ಅನ್ವಯಿಸುತ್ತದೆ. ವ್ಯಕ್ತಿ ಯಾರಾದರೇನು, ಅವರ ನಿಷ್ಠೆ ನಂಬಿಕೆಗಳು ಯಾವುದಾದರೇನು, ನಾನು ಸುಂದರವಾಗಿ ಜೀವನಚಿತ್ರ ಬಿಡಿಸಬಲ್ಲೆ ಎಂದು ಹೊರಡುವ, ಬರೆಯುವ, ಬರಹಗಾರರು ಕೇವಲ ವ್ಯಾವಹಾರಿಕವಾಗಿರುತ್ತಾರೆ. ವಿಶೇಷಣಗಳ ಜೊತೆ ಆಟವಾಡುತ್ತ ಜೀವನವನ್ನು ಚಿತ್ರಿಸುತ್ತಾರೆ; ಆದರೆ ಜೀವನವನ್ನು ಕಟ್ಟುವುದಿಲ್ಲ. ಕಟ್ಟುವ ಕೆಲಸ ಸುಲಭದ್ದಲ್ಲ. ಈಗ ಆಗಿಹೋದ ವಿವರಗಳ ಸಮೇತ ಬದುಕನ್ನು, ಬದುಕಿದ ಕಾಲವನ್ನು ಪ್ರವೇಶಿಸಿ ಸಮಕಾಲೀನಕ್ಕೆ ಬಂದು ನಿಂತು ಪರಿಭಾವಿಸಿ ಕಟ್ಟುವ ಕೆಲಸಕ್ಕೆ ತೊಡಗಬೇಕು. ವರ್ತಮಾನ ಮತ್ತ ಭೂತಗಳ ಅನುಸಂಧಾನವನ್ನು ಸಾಧ್ಯವಾಗಿಸಿಕೊಳ್ಳಬೇಕು. ಆಗ ಜೀವನವೂ ತೆರೆದು ಕೊಳ್ಳುತ್ತದೆ; ಚರಿತ್ರೆಯೂ ತೆರೆದುಕೊಳ್ಳುತ್ತದೆ. ಕಟ್ಟುವಾಗಲೇ ಬಿಚ್ಚಿಕೊಳ್ಳುತ್ತಾ ಹೋಗುವ ವಿಸ್ಮಯ ಎದುರಾಗುತ್ತದೆ. ಜೀವನಚರಿತ್ರೆಯನ್ನು ರಚಿಸುವಾಗ ಎಲ್ಲರೂ ಈ ಅಂಶಗಳನ್ನು ಅರಗಿಸಿಕೊಂಡಿರುತ್ತಾರೆಂದು ಹೇಳಲಾಗದು. ಪರಸ್ಪರ ವಿರುದ್ಧವಾದ ನಂಬಿಕೆ, ನಿಷ್ಠೆ, ನಿಲುವುಗಳಿರುವ ವ್ಯಕ್ತಿಗಳ ಜೀವನಚರಿತ್ರೆಗಳನ್ನು ಒಬ್ಬರೇ ಬರೆಯುವ ವಿಪರ್ಯಾಸ ಕಂಡುಬಂದರೆ, ಅಲ್ಲಿ ಪ್ರಾಮಾಣಿಕತೆಯ ಪ್ರಶ್ನೆಯನ್ನು ಎತ್ತಬೇಕಾಗುತ್ತದೆ. ಹೀಗೆ ಹೆಣೆಯುವವರಿಗೆ ಪುಸ್ತಕರಚನೆಯ 'ವೃತ್ತಿ' ಮುಖ್ಯವಾಗಿರುತ್ತದೆಯೇ ಹೊರತು ಸಿದ್ಧಾಂತ, ಒಲವು-ನಿಲುವುಗಳ ಒಳಪ್ರವೇಶ ಮುಖ್ಯವಾಗುವುದಿಲ್ಲ. ಒಳಪ್ರವೇಶಕ್ಕೆ ಬೇಕಾದ ಪ್ರೀತಿಯ ಪ್ರಶ್ನೆಯೂ ಉದ್ಭವವಾಗುವುದಿಲ್ಲ. ಹೇಗಿದ್ದರೂ ವ್ಯಕ್ತಿ ವಿವರಗಳ ಜೊತೆಗೆ ಒಂದಷ್ಟು ವಿಶೇಷಣಗಳು ಇರುತ್ತವೆಯಲ್ಲ! ಅವುಗಳನ್ನು ಶಕ್ತ್ಯಾನುಸಾರ ಬಳಸುವ ಜಾಣತನ ಇದ್ದರೆ ಸಾಕು! ಇನ್ನೇನು ಬೇಕು? ಅದೇನೇ ಇರಲಿ, 'ಜ್ಯೋತಿ ಬಸು' ಅವರ ಜೀವನಚರಿತ್ರೆ ಆ ಮಾದರಿಯದಲ್ಲ; ಅದು ಸಂತೋಷದ, ಸಮಾಧಾನದ ಸಂಗತಿ.

ಜೀವನಚರಿತ್ರೆಯನ್ನು ಓದುವ, ವಿಶ್ಲೇಷಿಸುವ ಮನಸ್ಸುಗಳಿಗೂ ಒಂದು ರೀತಿಯ ಸಿದ್ಧತೆ ಬೇಕು. ಯಾವುದೇ ಕೃತಿಯ ಪ್ರವೇಶಕ್ಕೆ ಇರಬೇಕಾದ ಪೂರ್ವಾಗ್ರಹರಹಿತ ಮನಸ್ಸು ಇಲ್ಲಿಯೂ ಮುಖ್ಯ. ಕೃತಿಕಾರನ ಬಗ್ಗೆಯಷ್ಟೇ ಅಲ್ಲ ಯಾರ ಜೀವನವನ್ನು ಕುರಿತು ಬರೆಯಲಾಗಿದೆಯೋ ಆ ವ್ಯಕ್ತಿಯ ಬಗ್ಗೆಯೂ ಪೂರ್ವಾಗ್ರಹ ಇರಬಾರದು. ಸೈದ್ಧಾಂತಿಕ ಭಿನ್ನತೆಗಳಿದ್ದರೆ, ಅವುಗಳ ಜೊತೆಯಾಗಿಯೇ ಗಂಭೀರವಾಗಿ ಮುಖಾಮುಖಿಯಾಗುವುದು ಮತ್ತು ಸೈದ್ಧಾಂತಿಕ ಸಮೀಪ ಅಥವಾ ದೂರವನ್ನು ನಿರ್ವಹಿಸುವ

> ಜ್ಯೋತಿ ಬಸು ಅವರ ರಾಜಕೀಯ ಕ್ರಿಯಾಶೀಲತೆಯ ಹೆಜ್ಜೆಗುರುತುಗಳು ಪ್ರಧಾನವಾಗಿರುವ ಈ ಪುಸ್ತಕದಲ್ಲಿ ಅವರ ಕೌಟುಂಬಿಕ ಬದುಕನ್ನು ಕುರಿತ ಒಂದು ಪ್ರತ್ಯೇಕ ಅಧ್ಯಾಯವಿದೆ. ಈ ಅಧ್ಯಾಯದಲ್ಲಿ ಜ್ಯೋತಿ ಬಸು ಅವರಲ್ಲಿ ಅಂತರ್ಗತವಾದ ಅಂತಃಕರಣ ಅನಾವರಣಗೊಳ್ಳುತ್ತದೆ. ಮಗ ಮತ್ತು ಸೊಸೆಯನ್ನು ಸಿನಿಮಾಕ್ಕೆ ಕಳಿಸಿ ಮೊಮ್ಮಗುವನ್ನು ತಾವೇ ನೋಡಿಕೊಂಡ ಜ್ಯೋತಿ ಬಸು ಅವರ ಕಾಳಜಿಯನ್ನು ಸುರಭಿಯವರು ಚೆನ್ನಾಗಿ ಚಿತ್ರಿಸಿದ್ದಾರೆ. ಈ ಘಟನೆಯಿಂದ ಬಸು ಅವರ ಬಗೆಗಿನ ಗೌರವ ಹೆಚ್ಚುತ್ತದೆ. ವೈಯಕ್ತಿಕ ಕುಟುಂಬ ಮತ್ತು ಕಮ್ಯುನಿಸ್ಟ್ ಕುಟುಂಬ ಎರಡರಲ್ಲೂ ಸಂವೇದನಾಶೀಲತೆಯಿಂದ ಬದುಕಿದವರು ಜ್ಯೋತಿ ಬಸು



ಪಕ್ವತೆಯನ್ನು ಪಡೆಯುವುದು ಸಹ ಅಗತ್ಯವಾದುದು.

ನಾನು, ಈ ಪುಸ್ತಕದ ಕುರಿತು ಬರೆಯುವಾಗ ಅಲ್ಲಿ ಕೃತಿಯನ್ನು ಕಟ್ಟಿಕೊಟ್ಟ ಕ್ರಮವಷ್ಟೇ ಇರುವುದಿಲ್ಲ; ಜ್ಯೋತಿ ಬಸು ಇದ್ದೇ ಇರುತ್ತಾರೆ. ಯಾಕೆಂದರೆ ಈ ಪುಸ್ತಕದ ಮೂಲಕ ನಾನು ಜ್ಯೋತಿ ಬಸು ಅವರನ್ನು ಅರ್ಥಮಾಡಿಕೊಳ್ಳುತ್ತಿದ್ದೇನೆ; ಈಗಾಗಲೇ ಅರ್ಥಮಾಡಿಕೊಂಡಿರುವುದನ್ನು ಈ ಪುಸ್ತಕದ ಮೂಲಕ ಪರೀಕ್ಷಿಸಿಕೊಳ್ಳುತ್ತೇನೆ. ಜೊತೆಗೆ ಲೇಖಕರನ್ನೂ ಅರ್ಥಮಾಡಿಕೊಳ್ಳುತ್ತೇನೆ; ಪುಸ್ತಕದಲ್ಲಿ ಅವರನ್ನು ಪರಿಶೀಲಿಸುತ್ತೇನೆ. ಹೀಗಾಗಿ ಲೇಖಕರು, ಜ್ಯೋತಿ ಬಸು ಮತ್ತು ನನ್ನ ಚಾರಿತ್ರಿಕ ಗ್ರಹಿಕೆಗಳು ಒಟ್ಟಿಗೆ ಅನುಸಂಧಾನಿಸುತ್ತವೆ. ನಾನು ಹೇಳಲಿ, ಹೇಳದಿರಲಿ, ನನ್ನ ಮಾತುಗಳಲ್ಲಿ ಈ ಎಲ್ಲ ಪದರುಗಳು ಒಂದಾಗಿರುತ್ತವೆ.

ಜ್ಯೋತಿ ಬಸು, ಒಬ್ಬ ಕಟ್ಟಾ ಕಮ್ಯುನಿಸ್ಟ್; ಆದರೆ ಕರ್ಮಠ ಕಮ್ಯುನಿಸ್ಟ್ ಅಲ್ಲ. ಕಟ್ಟಾ ಕಮ್ಯುನಿಸ್ಟ್ ಆಗುವುದಕ್ಕೂ ಕರ್ಮಠ ಕಮ್ಯುನಿಸ್ಟ್ ಆಗುವುದಕ್ಕೂ ಏನು ವ್ಯತ್ಯಾಸ, ಕಟ್ಟಾ ಆದವರು ಕರ್ಮಠರೂ ಆಗುವುದಿಲ್ಲವೆ ಎಂಬ ಪ್ರಶ್ನೆ ಕೆಲವರಲ್ಲಿ ಏಳಬಹುದು. ನನ್ನ ದೃಷ್ಟಿಯಲ್ಲಿ ಎರಡೂ ಬೇರೆ. ಕಟ್ಟಾ ಕಮ್ಯುನಿಸ್ಟ್ ಆದವರು ಕಮ್ಯುನಿಸ್ಟ್ ಸಿದ್ಧಾಂತಕ್ಕೆ ಸದಾ ಬದ್ಧರು. ಅಧಿಕಾರ ಮತ್ತಿತರ ಕಾರಣಗಳಿಗಾಗಿ ಸಿದ್ಧಾಂತಕ್ಕೆ ಮಸಿ ಬಳಿದು, ಪಕ್ಷವನ್ನು ಪಕ್ಕಕ್ಕೆ ಸರಿಸಿ, ಸಮಯೋಚಿತ ಸುಳ್ಳು ನೆಪಗಳ ಮೂಲಕ ಸಿದ್ಧಾಂತದಿಂದ ದೂರ ಹೋಗುವ ಸ್ವಾರ್ಥರಿಗೆ ಕಟ್ಟಾ ಪದವನ್ನು ಬಳಸಲಾಗದು. 'ಸ್ವಾರ್ಥರಹಿತ ಸಿದ್ಧಾಂತ ಬದ್ಧರು' ಕಟ್ಟಾ ಕಮ್ಯುನಿಸ್ಟ್ ಆಗಿರುತ್ತಾರೆ. ಮಾರ್ಕ್ಸ್ ಮತ್ತು ಏಂಗೆಲ್ಸ್ ಹೇಳಿದ ಪ್ರತಿಸಾಲನ್ನೂ ಅದು ಇದ್ದ ಹಾಗೆಯೇ ವಾಚ್ಯಾರ್ಥದಲ್ಲಿ ಸ್ವೀಕರಿಸಬೇಕೆಂದು ಹಟ ಮಾಡುವವರು, ಪುರೋಹಿತರ ಮಂತ್ರಪಠಣದಂತೆ ಪರಿಭಾವಿಸುವವರು 'ಕರ್ಮಠ ಕಮ್ಯುನಿಸ್ಟರು'. ಮಾರ್ಕ್ಸ್‌ವಾದದ ಮೂಲ ಆಶಯವನ್ನು ಬಿಟ್ಟುಕೊಡದೆ ಸಮಕಾಲೀನ ಸಂದರ್ಭ ಮತ್ತು ಆಯಾ ದೇಶ-ಪ್ರದೇಶಗಳ ಹಿನ್ನೆಲೆಯಲ್ಲಿ ಅರ್ಥೈಸಿಕೊಂಡು ಅನುಷ್ಠಾನಗೊಳಿಸುವ ಸೃಜನಶೀಲತೆ ಇರುವವರು 'ಕರ್ಮಠ ಕಮ್ಯುನಿಸ್ಟ್' ಅಲ್ಲ. ಜ್ಯೋತಿ ಬಸು ಅವರು ಸ್ವಾರ್ಥಕ್ಕಾಗಿ ಸಿದ್ಧಾಂತವನ್ನು ಶಿಥಿಲಗೊಳಿಸಲಿಲ್ಲ, ಭಿನ್ನಾಭಿಪ್ರಾಯಗಳಿದ್ದಾಗಲೂ ಪಕ್ಷದೊಳಗೆ ಚರ್ಚಿಸಿದರೇ ಹೊರತು ಪಕ್ಷದಿಂದ ದೂರ ಹೋಗಲಿಲ್ಲ. ಪಕ್ಷದ ಸಿದ್ಧಾಂತವನ್ನು ಅನುಷ್ಠಾನಗೊಳಿಸುವಾಗ ಮಂತ್ರಪಠಣದ ಪೌರೋಹಿತ್ಯ ವಹಿಸುವ ಬದಲು ಪ್ರಾಯೋಗಿಕ ಮಾದರಿಗಳನ್ನು ಕಂಡುಕೊಂಡರು; ಕರ್ಮಠರಾಗುವ ಬದಲು ಕ್ರಿಯಾರೂಪಕವಾದರು. ಜ್ಯೋತಿ ಬಸು ಅವರು ಅಧಿಕಾರದಲ್ಲಿದ್ದು ಮಾಡಿದ್ದೆಲ್ಲ ಪ್ರಶ್ನಾತೀತವಲ್ಲದಿರಬಹುದು. ಆದರೆ ಅವರ

## ದರ್ಶನ



ಕರುಳ ಬಳ್ಳಿಯ
ಕಳಚುವ ಮುನ್ನ
ಅಂಕೆಯೂ ಇರಲಿಲ್ಲ
ಅಂಕಿತವೂ;
ಗರ್ಭದ ಸಾನ್ನಿಧ್ಯ
ಮಮತೆಯ ಸಾಂಗತ್ಯ
ಒಡಲಿನ ಸಾರಥ್ಯವೇ
ಜಗದ ಹೊನಲು !

ಕಣ್ಣರಳಿಸಿದ
ಕ್ಷಣವೇ ಸುತ್ತ ಭಾವದ
ಬೇಲಿ ; ಬಿತ್ತಕಿರದ
ನಿಮಿತ್ತಗಳ ಹುತ್ತ
ಸುತ್ತುವರೆದಿರೆ
ಬಂಧನಗಳ ಸುಳಿಯಲ್ಲಿ
ಜಗವ ಕಾಣುವ
ಬವಣೆ !

ಹೆಜ್ಜೆಯೂರಿದೆಡೆ
ಹೆಗ್ಗುರುತುಗಳು
ರಂಗು ರಂಗಿನ ಪಾತರ -
ಗಿತ್ತಿಗಳಂತೆ;
ನೆಲ ಸವೆದರೂ
ಸವೆಯದ ಮುದ್ದು ಪಾದಗಳಿಗೆ
ಅಸ್ಮಿತೆಗಳ ಲೇಪನ;
ಅಡಿಯಿಂದ
ಮುಡಿಯವರೆಗೂ
ಚುಕ್ಕೆಗಳು
ರೆಕ್ಕೆ ಮೂಡುವ
ಮುನ್ನ ಮುರುಟಿ
ಹೋಗುವ ಚಿಟ್ಟೆಗಳಂತೆ !

ಎತ್ತಲಿಂದಲೋ ಬೀಸುವ
ಬಿರುಗಾಳಿ
ತರಗೆಲೆಗಳು ಕಾಲಡಿ
ಅಸ್ಥಿಯ ಋಣ
ಭಾರವ ಸಲಹುವ
ನಾರುಮಡಿ;
ತುತ್ತಿಗಿಲ್ಲದ ಆತ್ಮ
ತತ್ತಿಯಲಿಹುದಾದರೆ
ಬಿತ್ತ ಬೀಜದ
ಕುಸುಮ
ಚಿಟ್ಟೆಗಳಿಗೇಕೆ ದೂರ ?

ನಿಗೂಢವೇನಲ್ಲ
ತಥ್ಯದರ್ಶನವಿದು;
ತೊಟ್ಟಿಲಾಕಾರದ
ಬಿದಿರು
ನೆಟ್ಟಗಾಗುವ ಮುನ್ನ
ಎನಿತು
ಇಂಗಿತಗಳೋ
ಎನಿತು
ಸಂಗತಗಳೋ ;
ಎಲ್ಲವೂ ಕಟು ಸತ್ಯ
ಜಗವ ಮರೆಯುವ
ಮುನ್ನ
ಭುವಿಯ ತೊರೆಯುವ
ಮುನ್ನ !

ನಾ. ದಿವಾಕರ
ನಂ. ೫೦೪, 'ಚಿರಂತನ', ೧೩ನೇ ಅಡ್ಡರಸ್ತೆ, ೨ನೇ ಹಂತ
ಶ್ರೀರಾಮಪುರಂ, ಮೈಸೂರು - ೫೭೦ ೦೨೩

ಸೈದ್ಧಾಂತಿಕ ಪ್ರಾಮಾಣಿಕತೆ ಮತ್ತು ಪ್ರಯೋಗಶೀಲತೆಗಳು ಅನುಮಾನಾಸ್ಪದವಲ್ಲ. ಈ ಹಿನ್ನೆಲೆಯಲ್ಲಿ ಲೇಖಕರು ಹೇಳುವ ಮಾತುಗಳು ಮನನೀಯವೆನ್ನಿಸುತ್ತವೆ :

''ಭಾರತದ ರಾಜಕೀಯ ಚರಿತ್ರೆಯಲ್ಲಿ ಜ್ಯೋತಿ ಬಸು ತಮ್ಮಷ್ಟಕ್ಕೆ ತಾವು ಒಂದು ವಿಶಿಷ್ಟ ವಿದ್ಯಮಾನ. ಯಾವೊಬ್ಬ ಮಾರ್ಕ್ಸ್‌ವಾದಿ ಮುಖಂಡರೂ ಇಷ್ಟು ದೀರ್ಘಕಾಲ ಅಧಿಕಾರದ ತುದಿಯಲ್ಲಿದ್ದ ಉದಾಹರಣೆಯಿಲ್ಲ. ಇದಕ್ಕೆ ಹಲವಾರು ಕಾರಣಗಳುಂಟು. ಅದರಲ್ಲಿ ಬಹುಮುಖ್ಯವಾದದ್ದೆಂದರೆ, – ಅವರು ಬದಲಾಗುವ ವಾಸ್ತವಗಳ ಹೊಳಹೊಕ್ಕು, ಅಂತರ್ಯ ಅರಿತು, ಪರಿಸ್ಥಿತಿ-ಪರಿಸರಕ್ಕೆ ತಕ್ಕಂತೆ ಪರಿವರ್ತನಶೀಲತೆಯನ್ನು ಮೈಗೂಡಿಸಿಕೊಳ್ಳುವ ಕಲೆಯನ್ನು ಕರಗತಮಾಡಿಕೊಂಡದ್ದು; ಪ್ರತಿಯೊಂದು ಅನುಭವದಿಂದಲೂ ಹೊಸ ಪಾಠ ಕಲಿತದ್ದು.'' (ಪುಟ - ೩೯).

ಹೀಗೆ ಹೊಸಪಾಠ ಕಲಿಯುವ ಚಲನಶೀಲತೆ ಎಲ್ಲ ಕಮ್ಯುನಿಸ್ಟರಿಗೂ ಇಲ್ಲ; ಕಮ್ಯುನಿಸ್ಟ್ ಸಮುದಾಯದ ಮಾತು ಒತ್ತಟ್ಟಿಗಿರಲಿ, ಕಮ್ಯುನಿಸ್ಟ್ ಅಗ್ರನಾಯಕರಲ್ಲೇ ಅನೇಕರು ಹಳೇಪಾಠದ ಪೌರೋಹಿತ್ಯ ವಹಿಸುತ್ತ ಬಂದಿದ್ದಾರೆ. ಮಾರ್ಕ್ಸ್‌ವಾದದ ವಾಚ್ಯಾರ್ಥದಲ್ಲಿ ಸಂಭ್ರಮಿಸುತ್ತ ಧ್ವನ್ಯಾರ್ಥಕ್ಕೆ ದನಿಯಾಗದೆ ಪೌರೋಹಿತ್ಯವನ್ನೇ ಪಾತಿವ್ರತ್ಯ ಎಂದು ಭಾವಿಸಿದವರೂ ಇದ್ದಾರೆ. ಇದಕ್ಕೆ ಕಮ್ಯುನಿಸಂ ಕಾರಣವಲ್ಲ. ಅದನ್ನು ಆರಾಧಿಸುವ ಭರದಲ್ಲಿ ಅರ್ಥೈಸುವ ಮತ್ತು ಅನ್ವಯಿಸುವ ಸೃಜನಶೀಲ ನೆಲೆಗಳಿಂದ ದೂರ ಉಳಿದ ಮನೋಧರ್ಮ ಕಾರಣ. ಪಕ್ಷದೊಳಗಿದ್ದೂ ಪಕ್ಷದಾಚೆಗೆ ನಿಂತುನೋಡುವ, ಸಿದ್ಧಾಂತಕ್ಕೆ ಬದ್ಧವಾಗಿಯೂ ಸಿದ್ಧ ಅರ್ಥಗಳನ್ನು ಮೀರುವ ಮನೋಧರ್ಮವು ಸದಾ ಸೃಜನಶೀಲವಾಗಿರಲು ಸಾಧ್ಯ. ಈ ಅಂಶವನ್ನು ಅರ್ಥಮಾಡಿಕೊಳ್ಳದೆ ಹೋದದ್ದು ಕೆಲವು ಕಮ್ಯುನಿಸ್ಟರ ತಪ್ಪೇ ಹೊರತು ಕಮ್ಯುನಿಸಂನ ತಪ್ಪಲ್ಲ. ಸ್ವತಃ ಕಾರ್ಲ್ ಮಾರ್ಕ್ಸ್ ಸೈದ್ಧಾಂತಿಕ ಜಡತೆಯನ್ನು ಪ್ರತಿಪಾದಿಸಲಿಲ್ಲ.

ಯಾವುದೇ ಸಿದ್ಧಾಂತಕ್ಕೆ ಬದ್ಧವಾದವರಿಗೆ ಪೂಜೆ ಮತ್ತು ಭಕ್ತಿಯ ನಡುವಿನ ಅಂತರ ಗೊತ್ತಿರಬೇಕು. ಪೂಜೆಗೆ ಶಿಷ್ಟ ಹಾಗೂ ಶಾಸ್ತ್ರಬದ್ಧ ವಿಧಾನ ಮುಖ್ಯ; ಮನಸ್ಸು ಮುಖ್ಯವಲ್ಲ. ಕಂಠಪಾಠದ ಮಂತ್ರ ಪಠಣ ಮತ್ತು ವಿಧಾನಗಳು ಸರಿಯಾಗಿದ್ದರೆ ಸಾಕು. ಆದರೆ, ಭಕ್ತಿಗೆ ಪೂಜೆ ಬೇಕಾಗಿಲ್ಲ; ಶಿಷ್ಟ ಹಾಗೂ ಶಾಸ್ತ್ರಬದ್ಧತೆಯ ಆಗತ್ಯವೂ ಇಲ್ಲ. ಕಂಠಪಾಠ ಪ್ರವೀಣತೆಗೂ ಅವಕಾಶವಿಲ್ಲ. ಭಕ್ತಿಯು ಮನಸ್ಸಿನಲ್ಲಿ ಬೇರೂರಿರುತ್ತದೆ; ಒಲವೇ ನಿಲುವಾಗಿರುತ್ತದೆ; ನಿಲುವೇ ಒಲವಾಗಿರುವುದಿಲ್ಲ. ಮೊದಲು ನಿಲುವು ತಾಳಿ ಆನಂತರ ಅದನ್ನು ಒಲವಾಗಿಸಿಕೊಳ್ಳುವ ಒತ್ತಾಯಕ್ಕೂ, ಒಲವೇ ಮೊದಲಾಗಿ ನಿಲುವಾಗಿ ಬೆಳೆಯುವ ಭಾವವಿಕಾಸಕ್ಕೂ ವ್ಯತ್ಯಾಸವಿದೆ. ಆದ್ದರಿಂದ ಒಲವೇ ನಿಲುವಾದ ಭಕ್ತಿ ಮತ್ತು ಭಕ್ತನ ಚಹರೆಯೇ ಬೇರೆ ರೀತಿಯದಾಗುತ್ತದೆ. ಧರ್ಮಶಾಸ್ತ್ರ ಗೊತ್ತಿಲ್ಲದವನೂ ಭಕ್ತನಾಗಬಹುದು; ಭಕ್ತಿ ತೋರಬಹುದು; ಇಂತಹ ಭಕ್ತರು ನಮ್ಮ ಅನೇಕ ಜನಪದ ಕತೆಗಳಲ್ಲಿ, ಪುರಾಣಗಳಲ್ಲಿ ತಾವು ನಂಬಿದ ದೇವರ ಜೊತೆ ಮಾತಾಡುತ್ತಾರೆ; ಜಗಳವಾಡುತ್ತಾರೆ; ಜಗ್ಗಿಸಿ ಕೇಳುತ್ತಾರೆ. ಆದರೆ ದೂರ ಹೋಗುವುದಿಲ್ಲ; ಸ್ವಾರ್ಥಿಗಳಾಗುವುದಿಲ್ಲ; ಅಚಲ ನಂಬಿಕೆಯಿಂದ ಬದುಕುತ್ತಾರೆ. ಹೀಗೆ ಶಾಸ್ತ್ರಬದ್ಧವಾಗದೆ ಮನಸ್ಸನ್ನೇ ಸಿದ್ಧಾಂತವಾಗಿಸಿಕೊಂಡ ಭಕ್ತಿಯನ್ನೂ, ಶಾಸ್ತ್ರಬದ್ಧ ಶಿಷ್ಟರೂಪದ ಪೂಜೆಯನ್ನೂ ಎರಡು ರೂಪಕಗಳನ್ನಾಗಿ ನೋಡಿ. ಧಾರ್ಮಿಕ ಪರಿಭಾಷೆಯನ್ನೇ ಅದನ್ನು ಮೀರಿದ ಸೈದ್ಧಾಂತಿಕ ಬದ್ಧತೆಗೆ ಅನ್ವಯಿಸಿಕೊಳ್ಳಿ. ಪೂಜೆ – ಜಡವಾದುದು; ಭಕ್ತಿ – ಸೃಜನಶೀಲವಾದುದು. ನಾನು ಬಳಸಿದ ಪರಿಭಾಷೆ ಅರ್ಥಗ್ರಹಿಕೆಯ ರೂಪಕ ಮಾತ್ರವೆಂದು ಮತ್ತೆ ವಿಸ್ತರಿಸುವ ಅಗತ್ಯವಿಲ್ಲ. ಆದರೆ, ಎಲ್ಲ ಸಿದ್ಧಾಂತಿಗಳೂ ಅರ್ಥಮಾಡಿಕೊಳ್ಳುವ ಅಗತ್ಯವಿದೆ. ಜ್ಯೋತಿ ಬಸು ಅವರಂಥ ಕೆಲವೇ ಕಮ್ಯುನಿಸ್ಟ್ ನಾಯಕರಿಗೆ, ಈ ಜೀವನಚರಿತ್ರೆ ಬರೆದ ಸುರಭಿ ಬ್ಯಾನರ್ಜಿಯಂಥವರಿಗೆ ಇದು ಅರ್ಥವಾಗಿದೆ. ಹೀಗಾಗಿ, ಜ್ಯೋತಿ ಬಸು ಅವರ ಜೀವನವನ್ನು ಅವರ ಹೋರಾಟಗಳೊಂದಿಗೆ ಸರಿಯಾಗಿ ಗ್ರಹಿಸಲು ಸುರಭಿಯವರಿಗೆ ಸಾಧ್ಯವಾಗಿದೆ.

ನಾನು ಸೈದ್ಧಾಂತಿಕ ಜಡತೆಯ ಬದಲು ಸೈದ್ಧಾಂತಿಕ ಸೃಜನಶೀಲತೆಯನ್ನು ಪ್ರತಿಪಾದಿಸುತ್ತಾ ಬಂದಿದ್ದೇನೆ; ಮಾರ್ಕ್ಸ್‌ವಾದ, ಲೋಹಿಯಾವಾದ, ಅಂಬೇಡ್ಕರ್‌ವಾದ, ಗಾಂಧಿವಾದ – ಯಾವುದೇ ವಾದವಾಗಲಿ ವಿವಿಧ ಕಾಲಘಟ್ಟದಲ್ಲಿ ನಿಕಷಕ್ಕೊಡ್ಡಿಕೊಳ್ಳುತ್ತ ಬೆಳೆಯುವುದು ಮುಖ್ಯ. ಸಂಬಂಧಪಟ್ಟ ಮಹಾನ್ ಚೇತನಗಳ ಬಗ್ಗೆ ಅವರು ಪ್ರತಿಪಾದಿಸಿದ ವಿಚಾರಗಳ ಪ್ರಾಮಾಣಿಕತೆಯ ಬಗ್ಗೆ ಸ್ವಲ್ಪವೂ ಸಂಶಯವಿಲ್ಲದೆ ಮುಖಾಮುಖಿಯಾಗುವುದಕ್ಕೆ ನಮಗೆ ಸಾಧ್ಯವಾಗಬೇಕು. ನಾವು ನಂಬಿದ 'ವಾದ'ಗಳನ್ನು ಚರ್ಚಾಕೂಟದ ವಿಷಯವನ್ನಾಗಿ ಮಾತ್ರ ಮಾಡದೆ ಗೌರವಪೂರ್ವಕ ಮುಖಾಮುಖಿಯ ಮೂಲಕ ಪ್ರಸ್ತುತಪಡಿಸುವುದು ಮತ್ತು ಪ್ರಸ್ತುತಗೊಳಿಸುವುದು ನಮಗೆ ಮುಖ್ಯವಾಗಬೇಕು. ನಾವು ಜನಪದ ಸಂಸ್ಕೃತಿಯ ಭಕ್ತಿ ನೆಲೆಯಲ್ಲಿ ನಿಲ್ಲಬೇಕೊ, ಗರ್ಭಗುಡಿ ಸಂಸ್ಕೃತಿಯ ಪೂಜಾವಿಧಾನದ ಪುರೋಹಿತರಾಗಬೇಕೊ ಎಂದು ಪ್ರಶ್ನಿಸಿಕೊಳ್ಳಬೇಕು.

ಜ್ಯೋತಿ ಬಸು ಅವರಿಗೆ ಮಾರ್ಕ್ಸ್‌ವಾದವು ಪೂಜಾ ವಿಧಾನದ ಪೌರೋಹಿತ್ಯವಾಗಿರಲಿಲ್ಲ; ಕಂದಾಚಾರದ ಕಂತೆಯಾಗಿರಲಿಲ್ಲ. ಈ ಕುರಿತ ಅವರ ಮಾತುಗಳನ್ನು ಸುರಭಿ ಬ್ಯಾನರ್ಜಿ ದಾಖಲಿಸಿದ್ದಾರೆ. ಜ್ಯೋತಿ ಬಸು ಹೀಗೆ ಹೇಳುತ್ತಾರೆ :

''ನನ್ನ ದೃಷ್ಟಿಯಲ್ಲಿ ಮಾರ್ಕ್ಸ್‌ವಾದ ಕಂದಾಚಾರದ ಒಂದು ಕಂತೆಯಲ್ಲ. ಮಾರ್ಕ್ಸ್‌ವಾದಿಗಳಾದ ನಾವು ಮಾರ್ಕ್ಸ್‌ನನ್ನು ದೈವೀಕರಿಸಬಾರದು. ಅವನನ್ನು ಅಟ್ಟದ ಮೇಲಿಟ್ಟು ಆರಾಧಿಸಬಾರದು. ಅವನೊಬ್ಬ ಮಹಾಮಾನವ. ಅಪ್ರತಿಮ ಪ್ರತಿಭಾವಂತ. ಬಂಡವಾಳಶಾಹಿ ಸಮಾಜದ ಪ್ರಧಾನ ನಿಯಮಗಳನ್ನು ಸೂತ್ರೀಕರಿಸಿದ ಮೇಧಾವಿ. ಆದರೆ ಆತನ ನಿರೀಕ್ಷಣೆಗೆ ದಕ್ಕಿದ್ದು ಇವತ್ತಿನಷ್ಟು ಪ್ರಬುದ್ಧವಾದ ಬಂಡವಾಳಶಾಹಿ ವ್ಯವಸ್ಥೆಯಲ್ಲ. ಆಗಿನ್ನೂ ಅದು ಅಪಕ್ವ ಸ್ಥಿತಿಯಲ್ಲಿತ್ತು. ಆದರೂ ಆತನೊಬ್ಬ ದೇವನಲ್ಲ. ಮೇಲಾಗಿ, ತನ್ನನ್ನು ಯಾರೂ ಪ್ರಶ್ನಿಸದೆ ಮನ್ನಣೆ ನೀಡಬೇಕೆಂದು ಬಯಸುತ್ತಿದ್ದ ನಿರಂಕುಶ ಬುದ್ಧಿಜೀವಿಯೂ ಅಲ್ಲ. ಸಮಕಾಲೀನ ವಾಸ್ತವದ ಪರಿಸ್ಥಿತಿ, ಪರಿಸರಗಳನ್ನು ಗಮನಿಸದೆ, ಮಾರ್ಕ್ಸ್‌ನ



ಸಿದ್ಧಾಂತಗಳನ್ನು ಯಾಂತ್ರಿಕವಾಗಿ ಓದುವ, ಅನ್ವಯಿಸುವ ಕೆಲಸ ಮಾರ್ಕ್ಸ್‌ವಾದಕ್ಕೆ ಅಪಚಾರ ಬಗೆದಂತೆಯೇ ಸರಿ... ನಮಗೆ ಎದುರಾಗುವ ಸಮಕಾಲೀನ ಸಮಸ್ಯೆಗಳಿಗೆ ಮಾರ್ಕ್ಸ್‌ನ ವಿಧಾನಗಳಾದ ಚಾರಿತ್ರಿಕ ಭೌತವಾದ ಮತ್ತು ಗತಿತಾರ್ಕಿಕ ಭೌತವಾದದ ವಿಧಾನಗಳನ್ನು ತುಂಬ ಸೃಜನಶೀಲತೆಯಿಂದ, ಅರ್ಥಪೂರ್ಣವಾಗಿ ಅನ್ವಯಿಸಿ ಆಚರಿಸಲು ಯತ್ನಿಸಬೇಕು. ಈ ಮೂಲಕ ಹೊಸ ಹೊಸ ವೈಜ್ಞಾನಿಕ ಒಲವು ನಿಲುವುಗಳನ್ನು ಸಂಸ್ಥಾಪಿಸಬೇಕು... ಸ್ವತಃ ಕಾರ್ಲ್ ಮಾರ್ಕ್ಸ್ ಮುಂಗಾಣದ ಅನೇಕ ಸಂಗತಿಗಳು ಇಂದು ಕಾಣಿಸಿಕೊಂಡಿವೆ. ಅಂಥ ಹೊಸ ಹೊಸ ಬೆಳವಣಿಗೆಗಳ ಸಂದರ್ಭದಲ್ಲಿ ಎದುರಾಗುವ ಮೂರ್ತ ಸಮಸ್ಯೆಗಳಿಗೆ ಮಾರ್ಕ್ಸ್‌ವಾದವನ್ನು ಅತ್ಯಂತ ಸೃಜನಶೀಲತೆಯೊಂದಿಗೆ ಅನ್ವಯಿಸಬೇಕಾಗಿದೆ. ಆದರೆ ಹಾಗೆ ಮಾಡುವಾಗ ಮಾರ್ಕ್ಸ್‌ನ ಚಿಂತನೆಯ ಮೂಲ ಬೇರಿಗೆ ಎರವಾಗದಂತೆ ಎಚ್ಚರಿಕೆ ವಹಿಸಬೇಕು. ಸೃಜನಶೀಲ ಅನ್ವಯದ ನೆಪದಲ್ಲಿ ಪರಿಷ್ಕರಣವಾದಕ್ಕೆ ಅವಕಾಶ ನೀಡಬಾರದು'' (ಪುಟ ೨೭೦-೨೭೧).

– ಇವು ೧೯೮೯ರಲ್ಲಿ ಲಂಡನ್ನಿನ ಮಾರ್ಕ್ಸ್ ಮೆಮೋರಿಯಲ್ ಲೈಬ್ರರಿ ಆಯೋಜಿಸಿದ ಕಾರ್ಯಕ್ರಮದಲ್ಲಿ ಪಾಲ್ಗೊಂಡು ಜ್ಯೋತಿ ಬಸು ಅವರು 'ಮಾರ್ಕ್ಸ್‌ವಾದಿ ಸಿದ್ಧಾಂತ ಮತ್ತು ಆಚರಣೆ' ಎಂಬ ವಿಷಯದ ಬಗ್ಗೆ ನೀಡಿದ ಉಪನ್ಯಾಸದ ಕೆಲವು ಸಾಲುಗಳು. ಈ ಸಾಲುಗಳ ಸಾರವನ್ನು ಮಾರ್ಕ್ಸ್‌ವಾದಿಗಳಷ್ಟೇ ಅಲ್ಲ, ಎಲ್ಲ ವಾದಿಗಳೂ ತಂತಮ್ಮ



ನಂಬಿಕೆಯ ವಾದಗಳಿಗೆ ಅನ್ವಯಿಸಿಕೊಂಡರೆ ಆರೋಗ್ಯಕರ ಸಂವಾದ ಸಾಧ್ಯವಾಗುತ್ತದೆ. ಪ್ರಗತಿಪರ ಸಿದ್ಧಾಂತಗಳ ಪ್ರತಿಪಾದಕರಲ್ಲಿ ಪರಸ್ಪರ ಅಸಹನೆಯ ಹುತ್ತ ಬೆಳೆಯುವುದು ತಪ್ಪುತ್ತದೆ. ಬದಲಾಗಿ, ಕೆಲವು ಸಾಮಾನ್ಯ ವಿಷಯಗಳಲ್ಲಿ ಒಂದಾಗಿ ನಿಲ್ಲುವ ಅವಕಾಶ ಒದಗಿ ಬರುತ್ತದೆ. ಸಮಾನ ಶತ್ರುವಿನ ವಿರುದ್ಧ ಒಗ್ಗಟ್ಟಾಗಿ ಹೋರಾಡುವ ವೇದಿಕೆ ಸಿದ್ಧವಾಗುತ್ತದೆ. ೧೯೯೬ರಲ್ಲಿ ಹೀಗೆ ಆಯಿತಲ್ಲ; ಕೋಮುವಾದಿ ಶಕ್ತಿಗಳನ್ನು ದೂರವಿಟ್ಟು ಜಾತ್ಯತೀತ ಶಕ್ತಿಗಳು ಸರ್ಕಾರ ರಚಿಸಲು ಒಗ್ಗಟ್ಟಾದವಲ್ಲ? ಆಗತಾನೆ ಜ್ಯೋತಿ ಬಸು ಅವರು ಪ್ರಧಾನಮಂತ್ರಿಯಾಗಲಿ ಎಂದು ಜಾತ್ಯತೀತ ಪಕ್ಷಗಳು ನಿರ್ಣಯಿಸಿದ್ದು, ಮಾರ್ಕ್ಸ್‌ವಾದಿ ಪಕ್ಷ ಒಪ್ಪದೇ ಹೋದದ್ದು, ಮರುಮಾತಿಲ್ಲದೆ ಪಕ್ಷದ ನಿರ್ಣಯಕ್ಕೆ ಜ್ಯೋತಿ ಬಸು ಅವರು ತಲೆ ಬಾಗಿದ್ದು... ಎಂಥ ತೀರ್ಮಾನ! ಜ್ಯೋತಿ ಬಸು ಅವರನ್ನು ಪ್ರಧಾನಿಯಾಗದಂತೆ ತಡೆದದ್ದು ಯಾಕೆ ಎಂಬ ಬಗ್ಗೆ ಈ ಪುಸ್ತಕದಲ್ಲಿ ವಿವಿಧ ಅಭಿಪ್ರಾಯಗಳ ವಿಶ್ಲೇಷಣೆಯಿದೆ. ಆನಂತರದ ದಿನಗಳಲ್ಲಿ 'ಇದೊಂದು ಚಾರಿತ್ರಿಕ ಪ್ರಮಾದ' ಎಂಬುದನ್ನು ಜ್ಯೋತಿ ಬಸು ಒಪ್ಪಿಕೊಂಡರೂ ತನ್ನ ಮೇಲಿನ ವೈಯಕ್ತಿಕ ಕಾರಣಗಳಿಗಾಗಿ 'ಈ ಪ್ರಮಾದ' ಸಂಭವಿಸಿತೆಂದು ಯಾವತ್ತೂ ಹೇಳಲಿಲ್ಲ. ಅದು ಪಕ್ಷದ ಬಹುಮತದ ನಿರ್ಣಯವೆಂದೂ ಹೀಗೆ ನಿರ್ಣಯ ಕೈಗೊಳ್ಳುವಂತೆ ಒತ್ತಾಯಿಸಿದವರಲ್ಲೂ ಕೆಲವು ತಾತ್ವಿಕ ಕಾರಣಗಳಿದ್ದವೆಂದೂ ಜ್ಯೋತಿ ಬಸು ಅಭಿಪ್ರಾಯ ಪಡುತ್ತಾರೆ. ಪ್ರಧಾನಿ ಹುದ್ದೆಯಂಥ ಬಹುದೊಡ್ಡ ಸ್ಥಾನ ತಪ್ಪಿಹೋದಾಗಲೂ ಅದನ್ನು ವೈಯಕ್ತಿಕ ನೆಲೆಯಲ್ಲಿ ನೋಡದೆ ತಾತ್ವಿಕ ಭಿನ್ನಾಭಿಪ್ರಾಯದ ನೆಲೆಯಲ್ಲಿ ವಿವರಿಸಿಕೊಳ್ಳಲು ಎಷ್ಟು ಜನಕ್ಕೆ ಸಾಧ್ಯ ? ಜ್ಯೋತಿ ಬಸು ಅವರಿಗೆ ಇದು ಸಾಧ್ಯವಾಗಿದ್ದರಿಂದ ಅವರ ಗೌರವ ಹೆಚ್ಚಾಯಿತು.

ಮುಂದೆ ೨೦೦೪ರಲ್ಲಿ 'ಕಾಂಗ್ರೆಸ್' ನೇತೃತ್ವದ ಯು.ಪಿ.ಎ. ಸರ್ಕಾರದ ರಚನೆಯಲ್ಲಿ ಜ್ಯೋತಿ ಬಸು ಅವರ ಪಾತ್ರವೂ ಬಹು ಮಹತ್ವದ್ದಾಗಿತ್ತು. ಇದನ್ನು ಸ್ವತಃ ಸೋನಿಯಾ ಗಾಂಧಿ ಮತ್ತು ಮನಮೋಹನ್ ಸಿಂಗ್ ಅವರು ನೆನೆದಿದ್ದಾರೆ. ಸಮಾನ ಶತ್ರುಗಳ ವಿರುದ್ಧ ಜಾತ್ಯತೀತ ಶಕ್ತಿಗಳು ಒಗ್ಗೂಡಬೇಕೆಂಬ ಆಶಯಕ್ಕೆ ಬದ್ಧವಾಗಿ ಜ್ಯೋತಿ ಬಸು ಅವರು ಮಾರ್ಕ್ಸ್‌ವಾದಿ ಚಿಂತನೆಯನ್ನು ಅನ್ವಯಿಸಿಕೊಂಡರು. ಸಂಸದೀಯ ಪ್ರಜಾಪ್ರಭುತ್ವದಲ್ಲಿ ನಂಬಿಕೆಯಿಲ್ಲದವರಿಗೆ ಇದು ಅಷ್ಟೇನೂ ಮಹತ್ವದ ಅಂಶವಲ್ಲದೆ ಇರಬಹುದು. ಆದರೆ, ಸಂಸದೀಯ ಪ್ರಜಾಪ್ರಭುತ್ವ ವ್ಯವಸ್ಥೆಯೊಳಗೆ ಇದೊಂದು ಪ್ರಬುದ್ಧ ನಡೆಯಾಗಿದೆ; ಕೋಮುವಾದಿ ಶಕ್ತಿಗಳನ್ನು ಅಧಿಕಾರ ಕೇಂದ್ರದಿಂದ ದೂರವಿಡುವ ದೂರಗಾಮಿಕ್ರಮವೂ ಆಗಿದೆ. ಪಶ್ಚಿಮ ಬಂಗಾಳದಲ್ಲಿ ಸಿ.ಪಿ.ಐ.(ಎಂ.) ಪಕ್ಷವು ಸ್ವಂತ ಶಕ್ತಿಯ ಮೇಲೆ ಸರ್ಕಾರ ರಚಿಸುವಷ್ಟು ಶಾಸಕರ ಸಂಖ್ಯೆ ವೃದ್ಧಿಸಿದ ಮೇಲೂ ಮೊದಲಿದ್ದ ಎಡಪಕ್ಷಗಳ ಐಕ್ಯರಂಗವನ್ನು ಕಡೇವರೆಗೂ ಉಳಿಸಿಕೊಂಡದ್ದು ಸಹ ಜ್ಯೋತಿ ಬಸು ಅವರ ದೂರಗಾಮಿ ಚಿಂತನೆಗೆ ಒಂದು ಸಾಕ್ಷಿಯಾಗಿದೆ.

ಜ್ಯೋತಿ ಬಸು ಅವರು ತಮ್ಮ ಚಿಂತನಾಕ್ರಮಕ್ಕಾಗಿ ಮಾತ್ರ ಮೆಚ್ಚುಗೆಗೆ ಅರ್ಹರೆಂದು ತಿಳಿಯಬಾರದು. ಪಶ್ಚಿಮ ಬಂಗಾಳದಲ್ಲಿ ತಮ್ಮ ಪಕ್ಷವನ್ನು ಬೇರುಮಟ್ಟದಲ್ಲಿ ಬೆಳೆಸಿದ ಪ್ರಮುಖರಾಗಿ, ಅನೇಕ ಸಾಧನೆಗಳನ್ನು ಮಾಡಿದ ಮುಖ್ಯಮಂತ್ರಿಯಾಗಿಯೂ ಅವರು ಮುಖ್ಯರಾಗುತ್ತಾರೆ. ಕಮ್ಯುನಿಸ್ಟ್ ಆಡಳಿತವಿದ್ದ ಕಡೆ ಅಭಿವೃದ್ಧಿ ಕುಂಠಿತವೆಂದು ಪ್ರಚಾರ ಮಾಡುವವರಿಗೆ ಉತ್ತರವೆಂಬಂತೆ ಪಶ್ಚಿಮ ಬಂಗಾಳದಲ್ಲಿ ಜ್ಯೋತಿ ಬಸು ಸರ್ಕಾರದ ಸಾಧನೆಯನ್ನು ಸುರಭಿ ಬ್ಯಾನರ್ಜಿಯವರು ದಾಖಲಿಸಿದ್ದಾರೆ :

''೧೯೮೫-೯೦ರ ಅವಧಿಯಲ್ಲಿ ಎಲ್ಲ ರಾಜ್ಯಗಳಿಗಿಂತಲೂ ಹೆಚ್ಚು ಆಹಾರ ಉತ್ಪಾದನಾ ದರ ದಾಖಲೆಗೊಳಿಸಿದ ಕೀರ್ತಿ ಪಶ್ಚಿಮ ಬಂಗಾಳಕ್ಕೆ ಸಲ್ಲುತ್ತದೆ. ಶೇಕಡ ೩೪ರಷ್ಟು. ೧೯೮೨-೮೩ರಿಂದ ೧೯೯೨-೯೩ರ ದಶಕದಲ್ಲಿ ಪ್ರತಿ ಹೆಕ್ಟೇರಿನ ಬೆಳವಣಿಗೆಯ ದರವೂ ರಾಷ್ಟ್ರದಲ್ಲಿಯೇ ಅತ್ಯಂತ ಉನ್ನತಮಟ್ಟದಲ್ಲಿತ್ತು. ರಾಜ್ಯದ ಒಟ್ಟು ಉತ್ಪಾದನಾ ದರವು ೧೯೯೦ರ ದಶಕದಲ್ಲಿ ಸರಾಸರಿ ಶೇಕಡ ೫ರಷ್ಟಿದ್ದು ಪಶ್ಚಿಮ ಬಂಗಾಳದಲ್ಲಿ ಅಖಿಲ ಭಾರತ ಸರಾಸರಿಗಿಂತಲೂ ಹೆಚ್ಚಾಗಿತ್ತು. ಇನ್ನು ವಿದ್ಯುಚ್ಛಕ್ತಿ, ಗ್ಯಾಸ್ ಮತ್ತು ನೀರಿನ ಸರಬರಾಜು ಕ್ಷೇತ್ರದಲ್ಲಿ ರಾಜ್ಯದ ಒಟ್ಟು ಉತ್ಪಾದನೆ ೧೯೯೩-೯೪ರಲ್ಲಿ ಶೇಕಡ ೧೬.೪ರಷ್ಟು ಎತ್ತರಕ್ಕೆ ತಲುಪಿತು. ೧೯೯೫ರಲ್ಲಿ ಅಮೆರಿಕಾಗೆ ಹೋಗಿದ್ದ ಬಸು ಅಲ್ಲಿ ಅನೇಕ ಭಾವಿ ಹೂಡಿಕೆದಾರರೊಂದಿಗೆ ಒಪ್ಪಂದಗಳನ್ನು ಮಾಡಿಕೊಂಡಿದ್ದರು. ಸುಮಾರು ಒಂದು ಬಿಲಿಯನ್ ಡಾಲರಿಗಿಂತಲೂ ಹೆಚ್ಚು ಬಂಡವಾಳ ರಾಜ್ಯಕ್ಕೆ ಹರಿದು ಬರುವ ಸಾಧ್ಯತೆ ನಿರ್ಮಾಣವಾಯಿತು. ಪಶ್ಚಿಮ ಬಂಗಾಳದ ಅಭೂತಪೂರ್ವ ಅಭಿವೃದ್ಧಿಯ ಅತ್ಯುತ್ತಮ ಸೂಚಿಯೆಂದರೆ, ಪ್ರಾಯಶಃ ಆ ರಾಜ್ಯದಲ್ಲಿಯ ವಿದ್ಯುಚ್ಛಕ್ತಿ ಉತ್ಪಾದನೆಯ ಕ್ಷೇತ್ರದಲ್ಲಾದ ಸುಧಾರಣೆ. ೧೯೮೪-೮೫ರಲ್ಲಿ ಪ್ರತಿದಿನವೂ ಸರಾಸರಿ ೨.೪ ಗಂಟೆಗಳ ಕಾಲ ಲೋಡ್ ಶೆಡ್ಡಿಂಗ್ ಅನಿವಾರ್ಯವಾಗಿದ್ದದ್ದು ೧೯೯೩-೯೪ರ ವೇಳೆಗೆ ಅದು ಅತ್ಯಂತ ನಿಕೃಷ್ಟ ಅವಧಿಗೆ ಅಂದರೆ – ಪ್ರತಿದಿನ ೦.೨ ಗಂಟೆಗಳಿಗೆ ಇಳಿಯಿತು. ಮುಂದೆ ಹೆಚ್ಚು ಕಡಿಮೆ ಅದೇ ಮಟ್ಟದಲ್ಲಿಯೇ ಉಳಿಯಿತು.'' (ಪುಟ ೩೧೫)

(ಇದೆಲ್ಲ ನಿಜವೇ ಇರಬಹುದು. ಅದಕ್ಕಾಗಿ ಜ್ಯೋತಿ ಬಸು ಅವರನ್ನು ಅಭಿನಂದಿಸೋಣ. ಇತರೆ ಕ್ಷೇತ್ರಗಳ ಸಾಧನೆ ಹೇಗಿತ್ತು ಎಂಬ ಪ್ರಶ್ನೆಯನ್ನೂ ಹಾಕೋಣ. ಯಾಕೆಂದರೆ ಶಿಕ್ಷಣ ಕ್ಷೇತ್ರದಲ್ಲಿ ಹಿನ್ನಡೆಯಾಯಿತೆಂಬ ಆಕ್ಷೇಪವಿದೆ.)

ಬಂಡವಾಳ ಹೂಡಿಕೆಯನ್ನು ಅತ್ಯಂತ ಆದ್ಯತೆಯ ವಿಷಯವೆಂದು ಪರಿಗಣಿಸಿದ ಕೇಂದ್ರಸರ್ಕಾರದ ಆರ್ಥಿಕ ನೀತಿ – ನರಸಿಂಹರಾವ್ ಪ್ರಧಾನಿಯಾಗಿ ಮನಮೋಹನ ಸಿಂಗ್ ಅರ್ಥಸಚಿವರಾಗಿ ಜಾರಿಗೆ ತಂದ ಮುಕ್ತ ಆರ್ಥಿಕ ನೀತಿ – ಪಶ್ಚಿಮ ಬಂಗಾಳಕ್ಕೆ ಬಿಕ್ಕಟ್ಟಿನ ಅಂಶವಾಗಿತ್ತು. ಎಡರಂಗದ ಆರ್ಥಿಕ ನೀತಿಗೂ ಮುಕ್ತ ಆರ್ಥಿಕ ನೀತಿಗೂ ಅಜಗಜಾಂತರ. ಹೀಗಾಗಿ ಪಶ್ಚಿಮ ಬಂಗಾಳವು ಕೈಗಾರಿಕಾ ಬಿಕ್ಕಟ್ಟನ್ನು ಎದುರಿಸುತ್ತದೆಯೆಂಬುದು ಒಂದು



ಗ್ರಹಿಕೆಯಾದರೆ ಕಾರ್ಮಿಕ ಪರವಾದ ಕಮ್ಯುನಿಸ್ಟ್ ಸರ್ಕಾರವು ಕೈಗಾರಿಕಾ ಮಾಲೀಕರಿಗೆ ವಿರುದ್ಧವಾಗಿ ಉದ್ಯಮದ ಅವನತಿಗೆ ಕಾರಣವಾಗುತ್ತಿದೆಯೆಂಬುದು ಇನ್ನೊಂದು ಗ್ರಹಿಕೆ. ಈ ಎರಡೂ ಗ್ರಹಿಕೆಗಳನ್ನು ಸಂಪೂರ್ಣ ಸುಳ್ಳು ಎಂದು ಅಲ್ಲಗಳೆಯುವಂತಿಲ್ಲ. ಇವು ಎಡಪಂಥೀಯ ಸರ್ಕಾರವೊಂದು ಎದುರಿಸಿದ ಸೈದ್ಧಾಂತಿಕ ಮತ್ತು ಆನ್ವಯಿಕ ಬಿಕ್ಕಟ್ಟು ಎಂದು ನಾನು ಭಾವಿಸುತ್ತೇನೆ. ಎದುರುಬದರಾಗುವ ಸಮತಾ ಆರ್ಥಿಕತೆ ಮತ್ತು ಮುಕ್ತ ಆರ್ಥಿಕತೆಗಳ ಬಿಕ್ಕಟ್ಟು ಕೈಗಾರಿಕಾ ಕ್ಷೇತ್ರದಲ್ಲಿ ಎದುರು ಬದರಾಗುವ ಮಾಲೀಕ ಮತ್ತು ಕಾರ್ಮಿಕ ಸಂಬಂಧದ ಇಕ್ಕಟ್ಟು ಇವುಗಳನ್ನು ಪರಿಹರಿಸಿಕೊಂಡು ಜನಪರವಾಗಿ ಉಳಿಯಬೇಕಾದ ಸರ್ಕಾರದ ಸವಾಲು – ಇದಿಷ್ಟು ಜ್ಯೋತಿ ಬಸು ಸರ್ಕಾರದ ಎದುರಿಗಿದ್ದ ಸಮಸ್ಯೆ. ಈ ಸಮಸ್ಯೆಯನ್ನು ತಮ್ಮ ಸೈದ್ಧಾಂತಿಕ ಸಾರಕ್ಕೆ ಧಕ್ಕೆಯಾಗದಂತೆ ಸಮತೋಲನಗೊಳಿಸಿ ನಿಭಾಯಿಸಿದ ಬಸು ಅವರ 'ಕಾರ್ಯದಕ್ಷತೆ'ಯು ಸಂಸದೀಯ ಪ್ರಜಾಪ್ರಭುತ್ವದ ಒಂದು ಪಕ್ವಮಾದರಿ.



ಇದೇ ಸಂದರ್ಭದಲ್ಲಿ ಆರಂಭದ ದಿನಗಳಿಂದಲೂ ಕೇಂದ್ರದ ಕಾಂಗ್ರೆಸ್ ಸರ್ಕಾರವು ಕಮ್ಯುನಿಸ್ಟ್ ಪಕ್ಷಗಳು ಮತ್ತು ಸರ್ಕಾರದ ವಿರುದ್ಧ ವರ್ತಿಸುತ್ತ ಬಂದ ಬಗ್ಗೆ ಎಡಪಕ್ಷಗಳು – ವಿಶೇಷವಾಗಿ ಸಿ.ಪಿ.ಐ. (ಎಂ.) ಟೀಕಿಸುತ್ತ ಬಂದಿದೆ. ಈ ಮಧ್ಯೆ ಜವಾಹರಲಾಲ್ ನೆಹರೂ ಅಂಥವರು ವಿವೇಕಯುತವಾಗಿ ನಡೆದುಕೊಂಡ ಉದಾಹರಣೆಯೂ ಇದೆ. ಇದು ೧೯೫೯ರ ಹಿಂದೆಮುಂದೆ ನಡೆದ ಘಟನೆ. ಆಗ ಚೀನಾ ಮತ್ತು ಭಾರತದ ಸಂಬಂಧ ಹಳಸಿ ಕೊಂಡಿತ್ತು. ಭಾರತದ ಕಮ್ಯುನಿಸ್ಟರು ಚೀನಾ ಬಗ್ಗೆ ಸಹಾನುಭೂತಿ ಹೊಂದಿದ್ದಾರೆಂಬ ಭಾವನೆ ಬಲವಾಗಿತ್ತು. ಅಂದಿನ ಪಶ್ಚಿಮ ಬಂಗಾಳದ ಮುಖ್ಯಮಂತ್ರಿ ಡಾ|| ರಾಯ್ ಅವರು ಪ್ರಧಾನಿ ಜವಾಹರಲಾಲ್ ಅವರಿಗೆ ಪತ್ರ ಬರೆದು ಕಮ್ಯುನಿಸ್ಟ್ ಪಕ್ಷವನ್ನು ನಿಷೇಧಿಸಿದರೆ ಹೇಗೆ ಎಂಬ ಪ್ರಸ್ತಾಪ ಮಾಡಿದ್ದರು. ನೆಹರೂ ಅವರು ಡಾ|| ರಾಯ್ ಅವರಿಗೆ ಬರೆದ ಎರಡು ಪತ್ರಗಳ ಕೆಲವು ಸಾಲುಗಳು ಇಲ್ಲಿ ಉಲ್ಲೇಖನೀಯ :

''ಚೀನಾ ಅವಮಾನಕರವಾಗಿ ವರ್ತಿಸಿದೆ ಮತ್ತು ವರ್ತಿಸುತ್ತಿದೆ ಎಂಬುದೇನೋ ನಿಜ. ಚೀನಾ ಏನು ಮಾಡುತ್ತಿದೆಯೊ ಅದಕ್ಕಾಗಿ ಅದನ್ನು ವಿರೋಧಿಸುವುದೇ ಬೇರೆ, ಅದು ಕಮ್ಯುನಿಸ್ಟ್ ಆಗಿರುವುದರಿಂದ ಅದನು ವಿರೋಧಿಸುವುದೇ ಬೇರೆ. ಎರಡನೆಯ ನಿಲುವು ಇಡೀ ವಿರೋಧದ ಪ್ರಕ್ರಿಯೆಗೆ ಸಂಪೂರ್ಣವಾಗಿ ಒಂದು ಭಿನ್ನವಾದ ಬಣ್ಣ ಕೊಡುತ್ತದೆ. ಚೀನಾ ಕಮ್ಯುನಿಸ್ಟ್ ಆಗಿರುವುದರಿಂದಲೇ ಅದನ್ನು ವಿರೋಧಿಸುವುದೆಂದರೆ,. ನಾವು ಶೀತಲಯುದ್ಧಕ್ಕೆ ಬೆಂಬಲಿಸಿದಂತಾಗುತ್ತದೆ. ಆದರೆ ಶೀತಲಯುದ್ಧ ಯೂರೋಪ್ ಮತ್ತು ಮಧ್ಯಪ್ರಾಚ್ಯದಲ್ಲಿ ಅನನ್ಯ ಸೋಲು ಕಂಡಿದೆ. ಅಲ್ಲದೆ ಕಮ್ಯುನಿಸ್ಟರನ್ನು ವಿರೋಧಿಸುವ ಒಂದೇ ಒಂದು ಆಧಾರದ ಮೇಲೆ ಕಾಂಗ್ರೆಸ್ ಮತ್ತು ಇತರೆ ಪಕ್ಷಗಳು ಅದು ಹೇಗೆ ಕೂಡಿ ಮುನ್ನಡೆಯಬಲ್ಲವು ಎಂದು ನನಗೆ ಅರ್ಥವಾಗುತ್ತಿಲ್ಲ. ನಾವು ಜನಸಂಘ ಮತ್ತು ಇತರೆ ಕೋಮುವಾದಿ ಪಕ್ಷಗಳೊಂದಿಗೆ ಕೂಡಿಕೊಳ್ಳಬೇಕೆ ?'' (ಪತ್ರದ ದಿನಾಂಕ : ೨೮-೧೦-೧೯೫೯).

''ಒಂದು ವೇಳೆ ಅವರು (ಕಮ್ಯುನಿಸ್ಟ್ ಪಕ್ಷದವರು) ಚೀನಾದ ನಿಲುವನ್ನು ಬೆಂಬಲಿಸಿದರೆ ಭಾರತೀಯ ಜನತೆಯ ದೃಷ್ಟಿಯಲ್ಲಿ ಬಿದ್ದುಹೋಗುವುದು ಖಂಡಿತ. ಇದಕ್ಕೆ ಪ್ರತಿಯಾಗಿ ಒಂದು ವೇಳೆ ಚೀನಾದ ದಾಳಿಯನ್ನು ಖಂಡಿಸಿದರೆ, ಆಗ ಅವರು ಕೆಲಮಟ್ಟಿಗಾದರೂ ಕಮ್ಯುನಿಸ್ಟ್ ದೃಷ್ಟಿಕೋನದಿಂದ ತಮ್ಮನ್ನು ತಾವು ದುರ್ಬಲಗೊಳಿಸಿ ಕೊಳ್ಳುತ್ತಾರೆ. ಆದರಿಂದಲೂ ಅವರಿಗೆ ಹೆಚ್ಚಿನ ಒಳ್ಳೆಯ ದಾಗುವ ಸಂಭವವಿಲ್ಲ. ಪರಿಸ್ಥಿತಿ ಹೀಗಿರುವಾಗ ಈ ಹಂತದಲ್ಲಿ ನಾವು ಕಮ್ಯುನಿಸ್ಟ್ ಪಕ್ಷವನ್ನು ನಿಷೇಧಿಸುವುದು ಬುದ್ಧಿವಂತಿಕೆಯ ಕ್ರಮವಾಗುವುದಿಲ್ಲ. ಆದ್ದರಿಂದ ಅವರಿಗೇ ಅನುಕೂಲ. ಪರಿಣಾಮತಃ ಅವರು ಸದ್ಯ ಸಿಕ್ಕಿ ಬಿದ್ದಿರುವ ಉಭಯಸಂಕಟದಿಂದ ಪಾರಾಗುವುದಲ್ಲದೆ, ಅವರಿಗೆ ಸಾಕಷ್ಟು ಸಹಾನುಭೂತಿಯೂ ಲಭಿಸುತ್ತದೆ. ಮಿಗಿಲಾಗಿ, ಈ ಕ್ರಮದ ಅಂತರರಾಷ್ಟ್ರೀಯ ಪರಿಣಾಮಗಳು ಕೂಡ ಭಾರತಕ್ಕೆ ಹಾನಿಕಾರಕವಾಗಬಲ್ಲವು.'' (ಪತ್ರದ ದಿನಾಂಕ : ೨-೧೨-೧೯೫೯).

ನೆಹರೂ ಅವರು ತಮ್ಮ ಈ ಎರಡು ಪತ್ರಗಳಲ್ಲಿ ವ್ಯಕ್ತಪಡಿಸಿರುವ ಅಭಿಪ್ರಾಯಗಳಲ್ಲಿ ಕಮ್ಯುನಿಸ್ಟ್ ವಿರೋಧ ಕ್ಕಾಗಿ ಕೋಮುವಾದಿಗಳ ಜೊತೆ ಕೈಜೋಡಿಸಬಾರದೆಂಬ ವಿವೇಕವೂ ಇದೆ, ಕಮ್ಯುನಿಸ್ಟ್ ಪಕ್ಷದ ನಿಷೇಧದಿಂದ ಉಂಟಾಗುವ ಪರಿಣಾಮಗಳ ಅರಿವಿನ ಜೊತೆಗೆ ಜಾಣತನವೂ ಇದೆ. ನೆಹರೂ ಅವರು ಕಮ್ಯುನಿಸ್ಟರ ಉಭಯಸಂಕಟವನ್ನು ಚೆನ್ನಾಗಿ ಅರ್ಥಮಾಡಿಕೊಂಡು 'ಅವರು ಉಭಯಸಂಕಟದಲ್ಲಿ ನರಳುತ್ತಿರಲಿ ಅಷ್ಟೇ ಸಾಕು' ಎಂದು ಜಾಣ ನಿರ್ಧಾರಕ್ಕೆ ಬಂದಂತಿದೆ. ಜೊತೆಗೆ ಕಮ್ಯುನಿಸ್ಟ್ ಎಂಬ ಕಾರಣಕ್ಕಾಗಿಯೇ ಚೀನಾವನ್ನು ವಿರೋಧಿಸುವುದರ ಬದಲು ಆ ದೇಶದ ಕೃತ್ಯಗಳಿಗಾಗಿ ಮಾತ್ರ ವಿರೋಧಿಸಬೇಕೆಂಬ ಸರಿ ನಿಲುವನ್ನು ನೆಹರೂ ತೆಗೆದುಕೊಂಡಿದ್ದಾರೆ. ಅಲ್ಲದೆ ಕಮ್ಯುನಿಸ್ಟರ ವಿರೋಧಕ್ಕಾಗಿ ಕೋಮುವಾದಿಗಳ ಜೊತೆ ಸೇರಬಾರದೆಂಬ ತಾತ್ವಿಕತೆಯೂ ಅವರನ್ನು ಕಾಡಿಸಿದೆ. ಇದೇ ತಾತ್ವಿಕತೆ ನಮ್ಮ ಅನೇಕ ಪ್ರಗತಿಪರ, ರಾಜಕೀಯ ನಾಯಕರನ್ನು ಕಾಡಿಸಲಿಲ್ಲ. ಹೀಗಾಗಿ, ಕಾಂಗ್ರೆಸ್ ಮತ್ತು ಕಮ್ಯುನಿಸ್ಟರ ಸಾಂಪ್ರದಾಯಿಕ ವಿರೋಧವನ್ನು ಕಾಯ್ದುಕೊಳ್ಳಲು ಬಿ.ಜೆ.ಪಿ.ಗೆ ಬೆಂಬಲಿಸಿ ಎನ್.ಡಿ.ಎ. ಕೂಟದ ಪಾಲುದಾರರಾದದ್ದು ಈಗ ಇತಿಹಾಸ. ತಂತಮ್ಮ ರಾಜ್ಯಗಳ ರಾಜಕೀಯ ಸನ್ನಿವೇಶವೂ ಕೆಲವರಿಗೆ ಕಾರಣವಾಗಿರಬಹುದು. ಅದು ಬೇರೆಯೇ ಚರ್ಚೆಯಾಗುತ್ತದೆ. ಜ್ಯೋತಿ ಬಸು ಮತ್ತು ನೆಹರೂ ವಿಷಯಕ್ಕೆ ಬಂದರೆ, ನೆಹರೂ ಅವರ ವಿವೇಕವನ್ನು ಬಸು ಮೆಚ್ಚುತ್ತ ಬಂದಿದ್ದಾರೆ. ಅವರಿಗೆ ಪ್ರಜಾಪ್ರಭುತ್ವದಲ್ಲಿದ್ದ ನಿಷ್ಠೆಯನ್ನು ಹೊಗಳಿದ್ದಾರೆ. ಸೈದ್ಧಾಂತಿಕ ಭಿನ್ನಮತಗಳ ನಡುವೆಯೂ ಗೌರವಿಸಿದ್ದಾರೆ. ಸೋನಿಯಾ ಗಾಂಧಿ ಯವರ ಸಜ್ಜನಿಕೆ ಮತ್ತು ತಾಳಿಕೆಯ ಗುಣಗಳೂ ಬಸು ಅವರಿಗೆ ಮೆಚ್ಚುಗೆಯಾಗಿವೆ. ಅವರ ರಾಜಕೀಯ ತಿಳುವಳಿಕೆಯಲ್ಲ. ವ್ಯಕ್ತಿಯಾಗಿ ಒಳ್ಳೆಯವರಾದ ರಾಜೀವ ಗಾಂಧಿಯವರ ಆಡಳಿತವನ್ನು ವಿಮರ್ಶಿಸುತ್ತಾರಾದರೂ ಚುಚ್ಚುವುದಿಲ್ಲ. ಆದರೆ ಇಂದಿರಾ ಗಾಂಧಿಯವರನ್ನು ವೈಯಕ್ತಿಕ ಸ್ವಭಾವ ಮತ್ತು ರಾಜಕೀಯ ನೆಲೆ ನಿಲುವು – ಎರಡೂ ಕಾರಣಕ್ಕೆ ಟೀಕಿಸುತ್ತಾರೆ. ಇಂದಿರಾ ಗಾಂಧಿ ಯವರು ತುರ್ತುಪರಿಸ್ಥಿತಿಯನ್ನು ಹೇರಿದ್ದು, ಸಂಜಯ ಗಾಂಧಿಗೆ ಉತ್ತೇಜಕವಾಗಿ ನಿಂತದ್ದು, ಕೆಲವು ಅನಾಹುತ ಗಳಿಗೆ ಕಾರಣವಾದದ್ದು ಟೀಕಾರ್ಹವಾದ ಅಂಶಗಳು. ಆ ಬಗ್ಗೆ ಎರಡು ಮಾತಿಲ್ಲ. ಆದರೆ ಇಂದಿರಾ ಗಾಂಧಿಯವರು ಬ್ಯಾಂಕ್ ರಾಷ್ಟ್ರೀಕರಣವನ್ನೂ ಒಳಗೊಂಡಂತೆ ಜಾರಿಗೆ ತಂದ ಕೆಲವು ಕಾರ್ಯಕ್ರಮಗಳು ಎಡಪಂಥೀಯ ನೆಲೆಯನ್ನೇ ಹೊಂದಿದ್ದವು. ಇವನ್ನು 'ರಾಜಕೀಯ ಸ್ಟಂಟ್' ಎಂದು ಕೆಲವು ಟೀಕಾಕಾರರು ಕರೆಯಬಹುದು. ಆದರೆ ಸ್ಟಂಟ್ ಮಾಡಲು ಎಡಪಂಥೀಯ ಕಾರ್ಯಕ್ರಮಗಳೇ ಯಾಕೆ ಬೇಕಾಯಿತು ? ಈ ಕಾರ್ಯಕ್ರಮಗಳು ಸಣ್ಣಪುಟ್ಟ ಗಿಮಿಕ್‌ಗಳಲ್ಲ. ಅಮೆರಿಕಾದಲ್ಲಿ ಈಗ ಬ್ಯಾಂಕ್‌ಗಳ ರಾಷ್ಟ್ರೀಕರಣ ಮಾಡಬಾರದೇಕೆ ಎಂದು ಚಿಂತಿಸಲಾಗು ತ್ತಿದೆಯಂತೆ. ಅದು ನಿಜವಿದ್ದರೆ, ನಿಜವಾದರೆ ಸಂತೋಷ. ಅದೇನೇ ಇರಲಿ, ಜ್ಯೋತಿ ಬಸು ಅವರ ಈ ಜೀವನ ಚರಿತ್ರೆಯಲ್ಲಿ ಇಂದಿರಾ ಅವರ ಬಗ್ಗೆ ಟೀಕೆ ಟಿಪ್ಪಣಿ ಇದೆಯೇ ಹೊರತು, ಅವರ ಕೆಲವಾದರೂ ಪ್ರಗತಿಪರ ಕಾರ್ಯಕ್ರಮಗಳ ಮೆಚ್ಚುಗೆಯಿಲ್ಲ. ಹಾಗೆ ನೋಡಿದರೆ

ಬಂಡವಾಳಗಾರರ ಪರವೆಂದೇ ಪ್ರಸಿದ್ಧರಾಗಿದ್ದ ಮೊರಾರ್ಜಿ ದೇಸಾಯಿ ಅವರ ಆದರಪೂರ್ವಕ ಪ್ರಸ್ತಾಪವಿದೆ; ಟೀಕೆ-ಟಿಪ್ಪಣಿಯಿಲ್ಲ. ಜ್ಯೋತಿ ಬಸು ಅವರ ಈ ನಿಲುವಿಗೆ ಏನು ಕಾರಣ? ಪಶ್ಚಿಮ ಬಂಗಾಳ ಕೇಂದ್ರಿತ ರಾಜಕೀಯವೆ? ಇಂದಿರಾ ಗಾಂಧಿಯವರಿಗೆ ಸಿ.ಪಿ.ಐ. ಪಕ್ಷ ಬೆಂಬಲವಾಗಿದ್ದದ್ದೆ? ಸಿ.ಪಿ.ಐ.(ಎಂ.) ಪಕ್ಷದ ನಿರ್ಣಯಗಳೆ? ಯಾವುದು ಕಾರಣ? ಎಲ್ಲವೂ ಕಾರಣ ಇರಬಹುದು. ಅಂದರೆ ತುರ್ತುಪರಿಸ್ಥಿತಿ ಪೂರ್ವದ ಇಂದಿರಾ ಗಾಂಧಿಯವರ ಬಗ್ಗೆ ಬಸು ಅವರ ಅಭಿಪ್ರಾಯ ತನಗೆ ತಾನೇ ಸಂಕುಚಿತಗೊಂಡಿದೆ. ಇಂದಿರಾ ಅವರನ್ನು ಹೊಗಳಬೇಕೆಂದು ನಾನಿಲ್ಲಿ ಒತ್ತಾಯಿಸುತ್ತಿಲ್ಲ. ಆಗ ಇಂದಿರಾ ವಿರೋಧಿಯಾಗಿದ್ದ 'ಸಿಂಡಿಕೇಟ್' ಎಂಬ ಹೆಸರಿನಿಂದ ಪ್ರಸಿದ್ಧವಾಗಿದ್ದ ಕಾಂಗ್ರೆಸ್‌ನ ಹಿರಿಯ ನಾಯಕರ ಸಾಮಾಜಿಕ-ಆರ್ಥಿಕ ನಿಲುವುಗಳ ಬಗ್ಗೆ ತೀಕ್ಷ್ಣ ವಿಮರ್ಶೆಯೂ ಇಲ್ಲವಲ್ಲ ಎಂದು ಆಶ್ಚರ್ಯವಾಗುತ್ತದೆ. ಈ ಮಧ್ಯೆ ಗಮನಿಸಲೇಬೇಕಾದ ಅಂಶವೆಂದರೆ – ಕೆಲವರಂತೆ ಜ್ಯೋತಿ ಬಸು ಅವರು ಯಾವತ್ತೂ ನೆಹರೂ ಕುಟುಂಬದ ಕುರುಡು ದ್ವೇಷಿಯಾಗಿರಲಿಲ್ಲ. ದ್ವೇಷದ ಮಾತಿರಲಿ ಕುರುಡು ವಿರೋಧಿಯೂ ಆಗಿರಲಿಲ್ಲ. ಅಷ್ಟರಮಟ್ಟಿಗೆ ಆರೋಗ್ಯಕರ ನಿಲುವು ಅವರದಾಗಿತ್ತು.

ಮತ್ತೆ ನೆಹರೂ ಪತ್ರದ ಹಿನ್ನೆಲೆಗೆ ಬರುತ್ತೇನೆ. ಆಗ ನಮ್ಮ ದೇಶ ಮತ್ತು ಚೀನಾ ಸಂಬಂಧ ಹಳಸಿಕೊಂಡಿತ್ತು. ಗಡಿಯ ವಿಷಯದಲ್ಲಿ ಚೀನಾ ನಿಲುವು ನಮ್ಮ ದೇಶಕ್ಕೆ 'ಮಾರಕ'ವಾಗಿತ್ತು. ಮುಂದೆ ಯುದ್ಧವೂ ನಡೆಯಿತು. ಅಂತಹ ಸನ್ನಿವೇಶದಲ್ಲಿ ಕಮ್ಯುನಿಸ್ಟ್ ಪಕ್ಷವು ಅಂತರರಾಷ್ಟ್ರೀಯ ರಾಜಕಾರಣ ಮತ್ತು ಸೈದ್ಧಾಂತಿಕ ಚರ್ಚೆಗಳನ್ನು ಮುಂಚೂಣಿಗೆ ತಂದು ಶಾಂತಿಪರವಾಗಿ ಮಾತನಾಡಿತೇ ಹೊರತು ಚೀನಾಕ್ಕೆ ವಿರುದ್ಧವಾಗಿ ನಿಲ್ಲಲಿಲ್ಲ. ನೆಹರೂ ಹೇಳುವಂತೆ ಕಮ್ಯುನಿಸ್ಟ್ ಪಕ್ಷ 'ಉಭಯಸಂಕಟ'ದಲ್ಲಿತ್ತು. ಮುಂದೆ ಪಾಕ್ ವಿಚಾರದಲ್ಲೂ ಇದೇ ಶಾಂತಿ-ಸಂಧಾನದ ಮಾತನ್ನು ಆಡಿತು. ಅದೆಲ್ಲ ಸರಿ; ಆದರೆ ಎರಡು ದೇಶಗಳ ನಡುವೆ ಯುದ್ಧ ಸಂಭವಿಸಿದಾಗ ನಾವು ಎಲ್ಲಿ ನಿಂತಿರಬೇಕು, ಯಾರ ಪರ ಇರಬೇಕು ಎಂಬುದನ್ನು ಬಹುದೊಡ್ಡ ಸೈದ್ಧಾಂತಿಕ ಚರ್ಚೆಯಾಗಿಸಬೇಕಾಗಿಲ್ಲ. ಯುದ್ಧದ ಕಾರಣಗಳು ಚರ್ಚೆಯ ವಿಷಯವಾಗಬಹುದೇ ಹೊರತು ನಾವು ಯಾರ ಪರ ಎಂಬುದು ಚರ್ಚೆಯ ಹಾಗೂ ಗೊಂದಲದ ಸಂಗತಿಯಾಗಬೇಕಿಲ್ಲ. ಇದರ ಪರಿಣಾಮವೆಂದರೆ – 'ರಾಷ್ಟ್ರಭಕ್ತಿ'ಯ ಗುತ್ತಿಗೆಯನ್ನು ಕೋಮುವಾದಿ ಶಕ್ತಿಗಳು ಪಡೆದುಕೊಳ್ಳುತ್ತವೆ. ಎಡಪಕ್ಷಗಳು ಜನಮಾನಸವನ್ನು ಪ್ರವೇಶಿಸದೆ ಬೌದ್ಧಿಕ ಚರ್ಚೆಯಲ್ಲಿ ಸಿಲುಕಿಕೊಳ್ಳುತ್ತವೆ. ನಾನಿಲ್ಲಿ ಬೌದ್ಧಿಕ ಚರ್ಚೆಯನ್ನು ನಿರಾಕರಿಸುತ್ತಿಲ್ಲ. ನಾನದರ ವಿರೋಧಿಯೂ ಅಲ್ಲ. ಆದರೆ ದೇಶ-ದೇಶಗಳ ನಡುವಿನ ಯುದ್ಧದ ಸಂದರ್ಭದಲ್ಲಿ ಕೂದಲೆಳೆ ಸೀಳುವ ಬೌದ್ಧಿಕ ಲೋಲುಪತೆಯಲ್ಲಿ ಸಂಭ್ರಮಿಸಿದರೆ, ಯಾವ ಪಕ್ಷಕ್ಕೂ ಸೇರದ ಜನರಿಂದಲೂ ವಿರೋಧಕ್ಕೊಳಗಾಗುತ್ತೇವೆಂಬ ವಿವೇಕ ಅಗತ್ಯ. ಜನಗಳ ಮನಸ್ಸನ್ನು ಅರ್ಥಮಾಡಿಕೊಂಡು ಸೈದ್ಧಾಂತಿಕ ಸಂಗತಿಗಳನ್ನು ನೆಲೆಗೊಳಿಸುವ ಕಾರ್ಯತಂತ್ರಕ್ಕೆ ಬದಲು ಬೇರೆಯ



ದಾರಿಯಲ್ಲಿ ಸೈದ್ಧಾಂತಿಕ ಸಂಭ್ರಮದ ನಿರ್ಣಯಕ್ಕೆ ಬಂದಾಗ ಆಗುವ ಪರಿಣಾಮ ಅಸಾಧಾರಣವಾದುದು. ಅನೇಕ ಕಮ್ಯುನಿಸ್ಟ್ ನಾಯಕರು ಬ್ರಿಟಿಷ್ ವಸಾಹತು ವಿರೋಧಿ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದ್ದರೂ ಒಟ್ಟಾರೆಯಾಗಿ ಕಮ್ಯುನಿಸ್ಟರ ಮೇಲೆ ಕೆಲವರ ಆರೋಪ ಇದ್ದೇ ಇದೆ – ಸ್ವಾತಂತ್ರ್ಯ ಹೋರಾಟದಲ್ಲಿ ಸಕ್ರಿಯ ಪಾತ್ರ ಇರಲಿಲ್ಲ – ಎಂದು. ಸ್ವತಃ ಜ್ಯೋತಿ ಬಸು ಅವರೇ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದ್ದರು. ಆದರೆ, ಅಂತರರಾಷ್ಟ್ರೀಯ ರಾಜಕಾರಣವನ್ನು ಗಮನಿಸುತ್ತ ಮಾಡುವ ವಿಶ್ಲೇಷಣೆಗಳ ಧಾಟಿ ಕಾಂಗ್ರೆಸ್‌ನ ಸ್ವಾತಂತ್ರ್ಯ ಚಳವಳಿಯ ವಿಚಾರಗಳಿಗಿಂತ ಬೇರೆ ರೀತಿಯದಾಗಿರಬಹುದು. ಆ ವಿಚಾರ ಇರಲಿ; ಚೀನಾ ಭಾರತ ಯುದ್ಧದ ಸಂದರ್ಭದಲ್ಲಿ ಜ್ಯೋತಿ ಬಸು ಅವರು ಪಕ್ಷದ



ವಿಚಾರಗಳಿಗೆ ಮಾತ್ರ ಬದ್ಧರಾದಂತೆ ಕಾಣುತ್ತದೆಯೇ ಹೊರತು, ಕೆಲ ಸಂದರ್ಭಗಳಲ್ಲಿ ಆದಂತೆ ಪ್ರತ್ಯೇಕ ವಿಶ್ಲೇಷಣೆಯೇನೂ ಈ ಪುಸ್ತಕದಲ್ಲಿ ಕಾಣುವುದಿಲ್ಲ. ಆದರೆ ಅದೇ ಜ್ಯೋತಿ ಬಸು ಮತ್ತು ಎಡಪಕ್ಷದವರು ಇಪ್ಪತ್ತನೇ ಶತಮಾನದ ಕೊನೇ ದಶಕದ ವೇಳೆಗೆ ಕೋಮುವಾದವೇ ತಮ್ಮ ಮೊದಲ ಶತ್ರು ಎಂಬ ನಿಲುವಿಗೆ ಬರುತ್ತಾರೆ. ಚೀನಾ ಮತ್ತು ರಷ್ಯಾಗಳ ನೆಲೆಯಿಂದ ನಮ್ಮ ದೇಶದ ಕೆಲವು ಆಗುಹೋಗುಗಳನ್ನು ನೋಡುವ ಬದಲು ನಮ್ಮ ಸಂಸದೀಯ ರಾಜಕಾರಣದ ಅವಿಭಾಜ್ಯ ಅಂಗವಾಗುತ್ತಾರೆ. ಇದಕ್ಕೆ ನಮ್ಮ ರಾಜಕೀಯ ಚರಿತ್ರೆಯಲ್ಲಾದ ಪಲ್ಲಟಗಳೂ ಕಾರಣವಿರಬಹುದು.

ಅದೇನೇ ಇರಲಿ, ಜ್ಯೋತಿ ಬಸು ಅವರು ನಮ್ಮ ದೇಶದ ಸಂಸದೀಯ ಪ್ರಜಾಪ್ರಭುತ್ವದಲ್ಲಿ ವಿಶಿಷ್ಟ ವ್ಯಕ್ತಿತ್ವವಾಗಿ ಬೆಳೆದು ನಿಂತವರು. ಬಸು ಅವರ ಪ್ರಬುದ್ಧ ಬೆಳವಣಿಗೆಯನ್ನು ಸುರಭಿ ಬ್ಯಾನರ್ಜಿಯವರು ಈ ಪುಸ್ತಕದಲ್ಲಿ ಸಾರ್ಥಕ ರೀತಿಯಲ್ಲಿ ನಿರೂಪಿಸಿದ್ದಾರೆ. ಇಲ್ಲಿ ಜ್ಯೋತಿ ಬಸು ಅವರ ಬೆಳವಣಿಗೆಯಷ್ಟೇ ಇಲ್ಲ; ಭಾರತದ ಕಮ್ಯುನಿಸ್ಟ್ ಚಳವಳಿಯ ಬೆಳವಣಿಗೆಯೂ ಹಿನ್ನೆಲೆಯಲ್ಲಿ ಹರಿಯುತ್ತದೆ. ಈ ಹರಿವಿನ ಮೇಲೆ ಜ್ಯೋತಿ ಬಸು ಅವರ ಹಾಯಿದೋಣಿ ಸಾಗುತ್ತದೆ.

ಜ್ಯೋತಿ ಬಸು ಅವರ ರಾಜಕೀಯ ಕ್ರಿಯಾಶೀಲತೆಯ ಹೆಜ್ಜೆಗುರುತುಗಳು ಪ್ರಧಾನವಾಗಿರುವ ಈ ಪುಸ್ತಕದಲ್ಲಿ ಅವರ ಕೌಟುಂಬಿಕ ಬದುಕನ್ನು ಕುರಿತ ಒಂದು ಪ್ರತ್ಯೇಕ ಅಧ್ಯಾಯವಿದೆ. ಈ ಅಧ್ಯಾಯದಲ್ಲಿ ಜ್ಯೋತಿ ಬಸು ಅವರಲ್ಲಿ ಅಂತರ್ಗತವಾದ ಅಂತಃಕರಣ ಅನಾವರಣಗೊಳ್ಳುತ್ತದೆ. ಮಗ ಮತ್ತು ಸೊಸೆಯನ್ನು ಸಿನಿಮಾಕ್ಕೆ ಕಳಿಸಿ ಮೊಮ್ಮಗುವನ್ನು ತಾವೇ ನೋಡಿಕೊಂಡ ಜ್ಯೋತಿ ಬಸು ಅವರ ಕಾಳಜಿಯನ್ನು ಸುರಭಿಯವರು ಚೆನ್ನಾಗಿ ಚಿತ್ರಿಸಿದ್ದಾರೆ. ಈ ಘಟನೆಯಿಂದ ಬಸು ಅವರ ಬಗೆಗಿನ ಗೌರವ ಹೆಚ್ಚುತ್ತದೆ. ವೈಯಕ್ತಿಕ ಕುಟುಂಬ ಮತ್ತು ಕಮ್ಯುನಿಸ್ಟ್ ಕುಟುಂಬ ಎರಡರಲ್ಲೂ ಸಂವೇದನಾಶೀಲತೆಯಿಂದ ಬದುಕಿದವರು – ಜ್ಯೋತಿ ಬಸು.

ಜ್ಯೋತಿ ಬಸು ಅವರ ಜೀವನ ಚರಿತ್ರೆಯ ಓದು ನನಗಂತೂ ಉಪಯುಕ್ತವೆನಿಸಿದೆ. ಈ ಪುಸ್ತಕದ ಓದಿನಿಂದ ವ್ಯಕ್ತಿತ್ವವೊಂದರ ಪ್ರಬುದ್ಧ ಪರಿಚಯದ ಜೊತೆಗೆ ಅರ್ಥಪೂರ್ಣ ಸಂವಾದವೊಂದು ಸಾಧ್ಯವಾಗುತ್ತದೆ. ಇದು – ಎಲ್ಲ ಎಡಪಂಥೀಯ ಹಾಗೂ ಪ್ರಗತಿಪರ ವಿಚಾರಧಾರೆಯವರು ಅನುಸಂಧಾನಿಸಲು ಯೋಗ್ಯವಾದ ಒಂದು ಕೃತಿಯಾಗಿದೆ. ಜೀವನಚರಿತ್ರೆ ವಿಭಾಗದ ಒಂದು ಮುಖ್ಯ ಕೃತಿಯಾಗಿರುವ ಇದನ್ನು ಬರೆದ ಮೂಲ ಲೇಖಕರಾದ ಸುರಭಿ ಬ್ಯಾನರ್ಜಿ ಮತ್ತು ಅನುವಾದಕರಾದ 'ರಾಹು' ಅವರು ಅಭಿನಂದನಾರ್ಹರು. ಅಂತೆಯೇ ಈ ಪುಸ್ತಕದ ಪ್ರಕಾಶಕರಾದ 'ಚಿಂತನ ಪುಸ್ತಕ'ದ ಗೆಳೆಯರ ಕಾಳಜಿಯನ್ನು ಮೆಚ್ಚಬೇಕು.

**ಪ್ರೊ|| ಬರಗೂರು ರಾಮಚಂದ್ರಪ್ಪ**
ನಂ. ೨೭೫, ೧೧/ಬಿ ಅಡ್ಡರಸ್ತೆ, ೧೪ನೇ ಮುಖ್ಯರಸ್ತೆ
ವಿ.ಇ.ಟಿ. ಪಾಲಿಟೆಕ್ನಿಕ್ ಹತ್ತಿರ
ಜೆ. ಪಿ. ನಗರ ೨ನೇ ಹಂತ
ಬೆಂಗಳೂರು - ೫೬೦ ೦೭೮




“ಇದ್ನೋಡಿ, ಒಳ್ಳೆ ಬರಾಬ್ಬರಿ ಹಣ್ಣು. ಮರದ್ ಬುಡಕ್ಕೇ ಇತ್ತು. ಮುಟ್ಟಿದ್ದ್ ಹಾಂಗೆ ಬಿತ್ತು'' ಎನ್ನುತ್ತಾ ದೊಡ್ಡ ಗಾತ್ರದ ಹಲಸಿನ ಹಣ್ಣನ್ನು ಕೆಳಗಿರಿಸಿ ಉಸ್ಸೆಂದು ಕುಳಿತಳು ದೇವಿ. ತಮ್ಮ ಆಚೀಚೆ ಈಗಾಗಲೇ ಒಂದೆರಡು ಹಲಸಿನ ಹಣ್ಣುಗಳನ್ನು ಸೀಳಿ ಬಗೆದು, ನರಸಿಂಹಾವತಾರಕ್ಕೆ ಸವಾಲೆಸೆಯುವಂತೆ ಕುಳಿತಿದ್ದ ಸಾವಿತ್ರಕ್ಕ ತಮ್ಮ ಮೇಣದ ಕೈಯಲ್ಲೇ ಹೊಸ ಹಣ್ಣನ್ನು ಪರೀಕ್ಷಿಸಿದರು.

“ಇದ್ಯಾವ ಮರದ್ದೇ ದೇವಿ? ಸಂಡಿಗೆ ಮರದ್ದಲ್ದಾ? ಇದ್ರಲ್ಲೆಂತ ಕಡುಬು ಮಾಡ್ತ? ಬರೀ ಚಪ್ಪೆ ಈ ಹಣ್ಣು...'' ಎನ್ನುತ್ತಾ ಮುಖ ಸಿಂಡರಿಸಿ, “ಆ ಹಳೇ ತೋಟದ ಕಂಟದ ಮೇಲಿಪ್ಪ ಕಡುಬಿನ ಮರದ ಹಣ್ಣು ತರಬಾರ್ದ?'' ಎಂದು ಆಕ್ಷೇಪಿಸಿದರು. “ಆ ಜೋಡಿ ಮರದಲ್ಲಿ ಈಗ ಇಪ್ಪದು ಅದೊಂದೇ ಮರ. ಅದೂ ಹೋದ್ರೆ, ಕಡುಬೂ ಇಲ್ಲೆ, ಕಜ್ಜಾಯ್ವೂ ಇಲ್ಲೆ'' ಎಂದು ತಮ್ಮಷ್ಟಕ್ಕೆ ಹೇಳಿಕೊಂಡರು.

“ಕಡುಬಿನ ಮರದ ಹಣ್ಣ್ಯಾವ್ದೂ ಬೆಳೀಲಿಲ್ಲ ಸಾಯಿತ್ರಮ್ಮ. ಅದ್ಕೇ ಸಂಡ್ಗೆ ಮರದ್ದಾರೂ ಇರ್ಲಿ ಹೇಳ್ ಹಿಡ್ಕಬಂದೆ. ಹಾಂಗಾರೆ ಈಗೆಂತ ಮಾಡೂದು? ಗಂಗಮ್ಮನ್ ಕೂಡೆ ಕೇಳ್ಲಾ? ಅವ್ರ ಮನೆ ಮರ್ದಲ್ಲಿ ಲಾಯ್ಕ್ ಹಣ್ಣಾಗದೆ'' ಎಂದು ಸಮಸ್ಯೆಯನ್ನೂ, ಬೆನ್ನಿಗೇ ಒಂದು ಸಮಾಧಾನವನ್ನೂ ಸೂಚಿಸಿದಳು ದೇವಿ.

“ಏನಾದ್ರೂ ಒಂದು ಮಾಡು ಮಾರಾಯ್ತಿ. ಇದಿಷ್ಟೇ ಗುಳ (ಹಲಸಿನ ಹಣ್ಣಿನ ರಸ) ಸಾಲ್ತಿಲ್ಲೆ ಕಡುಬಿಗೆ. ಎರಡು ಸಾರಿಯಾದ್ರೂ ಕಡುಬು ಮಾಡಾಡ್ದಾ? ಇನ್ನು ಯಾವ ಕಾಲಕ್ಕೋ ಅವ್ರೆಲ್ಲಾ ಕಡುಬು ತಿಂಬದು'' ಎಂದು ಬಿಡಿಸಿ ಖಾಲಿಯಾದ ಹಲಸಿನ ಸೋರೆಯನ್ನು ಬಾಳೆಯೆಲೆ ಹಾಸಿದ ಬುಟ್ಟಿಗೆ ಎಸೆದರು ಸಾವಿತ್ರಕ್ಕ.

“ಆ ಪರದೇಶದಲ್ಲಿ ನಮ್ಮ್ ಕಡುಬು-ಕಜ್ಜಾಯ ಎಲ್ಲ್ ಸಿಕ್ಬಕು ಸಾಯಿತ್ರಮ್ಮ? ಹುಡುಗ್ರಿಗೆ ಲಾಯ್ಕ್ ಕಡುಬು ಮಾಡ್ಕೊಡಿ... ಪಾಪ, ಇನ್ಯಾವಾಗೇನ ಅವ್ರನ್ನೆಲ್ಲಾ ಕಾಣೂದು. ಗಂಗಮ್ಮನ್ ಮನೆಲ್ಲಿ ಹಣ್ಣಿದ್ದ ಕೇಳ್ತೆ'' ಎನ್ನುತ್ತಾ ದೇವಿ ಅಂಗಳ ಇಳಿದಳು.

“ಹಾಂಗೆ ಅವ್ರ ಮನೆ ಮಗೆಮಾವು ಬೆಳೆದಿದ್ದಾ ಕೇಳು. ರಸಾಯನಕ್ಕೆ ಅದ್ರ ಮುಂದೆ ಬೇರಾವ ಹಣ್ಣೂ ಇಲ್ಲೆ. ಅಲ್ಲೇ ತ್ವಾಟ ಇಳಿದು ನಾಕು ಪನ್ನೇರಲು ಹಣ್ಣು ಕೊಯ್ಕಂಡ್ ಬಾ. ಕೂಸಿಗೆ ಪನ್ನೇರ್ಲು ಅಂದ್ರೆ ಜೀವ...'' ಎಂಬ ಸಾವಿತ್ರಕ್ಕನ ಸೂಚನೆಗೆ “ಆತ್ರೋ...'' ಎಂದು ಕೂಗಿದ ದೇವಿ ದಾಪುಗಾಲಿಕ್ಕಿದಳು.

* * *

ವಿದೇಶಕ್ಕೆ ಹೊರಟಿದ್ದ ಮಗ-ಸೊಸೆ-ಮೊಮ್ಮಗಳನ್ನು ಬೀಳ್ಕೊಡಲು ಬೆಂಗಳೂರಿಗೆ ಹೊರಡುವ ತಯಾರಿ ನಡೆಸಿದ್ದರು ಸಾವಿತ್ರಕ್ಕ. ತಮ್ಮ ಒಬ್ಬನೇ ಮಗ ದೂರ ದೇಶಕ್ಕೆ ತೆರಳುತ್ತಿದ್ದಾನೆಂಬ ನೋವಿನೊಂದಿಗೇ, ಅವನ ಸಂಸಾರಕ್ಕೆ ಬೇಕು ಎಂದು ತಮಗನಿಸಿದ ಎಲ್ಲ ವಸ್ತುಗಳನ್ನು ಸಾವಿತ್ರಕ್ಕ ಹೊಂದಿಸಿಕೊಳ್ಳುತ್ತಿದ್ದರು. ಸುದೀರ್ಘ ಕಾಲದಿಂದ ಅವರ ಮನೆಯಲ್ಲೇ ಕೆಲಸ ಮಾಡಿಕೊಂಡಿದ್ದು, ಸಾವಿತ್ರಕ್ಕನ ಪ್ರೀತಿಪಾತ್ರಳಾಗಿದ್ದ ದೇವಿಯೂ ಈ ತಯಾರಿಯಲ್ಲಿ ನೆರವಾಗುತ್ತಿದ್ದಳು. ತನ್ನ ಒಡತಿ ಇನ್ನು ಎಂದಿಗಿಂತಲೂ ಹೆಚ್ಚು ಒಂಟಿ ಎಂಬ ಭಾವನೆ ಆಕೆಯಲ್ಲಿ ವಿಷಾದವನ್ನೂ, ಹೌದೊ ಅಲ್ಲವೋ ಎಂಬಂತೆ ಒಂದೆಳೆ ಸಂತಸವನ್ನೂ ಹುಟ್ಟುಹಾಕಿತ್ತು. ಒಟ್ಟಾರೆ ಇಬ್ಬರೂ ಸೇರಿ ಮದುವೆ ಮನೆಯ ಗಡಿಬಿಡಿ ಸೃಷ್ಟಿಸಿ, ಹಪ್ಪಳ, ಉಪ್ಪಿನ ಕಾಯಿ, ಸಾಂಬಾರ ಪುಡಿ ಮುಂತಾದವನ್ನು ಮಾಡಿ ಮುಗಿಸಿದ್ದರು. ಪ್ರತಿದಿನವೂ ಹೊಸದೊಂದು ವಸ್ತು ಮಗ/ಸೊಸೆ/ಮೊಮ್ಮಗಳಿಗೆ ಬೇಕು ಎಂದು ಸಾವಿತ್ರಕ್ಕನಿಗೆ ಅನಿಸುತ್ತಿದ್ದರಿಂದ, ಅವರ ತಯಾರಿಪಟ್ಟಿ ಹನುಮಂತನ ಬಾಲದಂತಾಗಿತ್ತು.

ಹಾಗೆ ನೋಡಿದರೆ ದೊಡ್ಡ ಪ್ರಮಾಣದ ತಯಾರಿ ಸಾವಿತ್ರಕ್ಕನಿಗೆ ಹೊಸದೇನಲ್ಲ. ಹಿರಿಸೊಸೆಯಾಗಿ ದೊಡ್ಡ ಪರಿವಾರದ ನೊಗ ಹೊತ್ತಿದ್ದ ಆಕೆ, ಒಂದಾನೊಂದು ಕಾಲದಲ್ಲಿ ಆಳು-ಕಾಳು ಸೇರಿ ಕನಿಷ್ಠ ೩೦ ಜನರ ಅಡುಗೆಯನ್ನು ಪ್ರತಿ ದಿನವೂ ಮಾಡುತ್ತಿದ್ದರು. ಈಗ ತನಗೆ ಮತ್ತು ದೇವಿಗಷ್ಟೇ ಅಡುಗೆ ಮಾಡಿಕೊಳ್ಳುವಂತಾಗಿತ್ತು.

ಊರಲ್ಲೆಲ್ಲಾ ದೊಡ್ಡ ಹೆಗಡೇರ ಮನೆ ಎಂದೇ ಖ್ಯಾತವಾಗಿದ್ದ ಆ ಮನೆಯ ಹೊಸಿಲು ತುಳಿಯುವಾಗ ಸಾವಿತ್ರಕ್ಕನಿಗಿನ್ನೂ ಚಿಕ್ಕ ಪ್ರಾಯ. ನೂರಾರು ವರ್ಷಗಳ ಹಳೆ ಮನೆಯಲ್ಲಿ ಹಲವು ತಲೆಮಾರುಗಳಿಂದ ಅಣ್ಣ-ತಮ್ಮಂದಿರು ಕೂಡಿ ಬಾಳುತ್ತಿದ್ದರು. ಪತಿ ಸತ್ಯನಾರಾಯಣ ತಮ್ಮ ತಲೆಮಾರಿನಲ್ಲಿ ಹಿರಿಯ ಎಂಬುದನ್ನು ಬಿಟ್ಟರೆ, ಉಳಿದಂತೆ ಯಾರು ಅಣ್ಣ, ಯಾರು ತಮ್ಮ, ಇವರ ಮಕ್ಕಳ್ಯಾರು, ಅವರ ತಂದೆ-ತಾಯಿ ಯಾರು... ಎಂಬುದೇ ಗೊಂದಲವಾಗಿ ಆಕೆ ಪರದಾಡಿದ್ದರು. ಸುಂದರ ಕುಸುರಿಯ ಹೆಬ್ಬಾಗಿಲು, ಭಾರಿ ಗಾತ್ರದ ಮುಂಡಿಗೆ ಕಂಬಗಳು, ದೊಡ್ಡ-ದೊಡ್ಡ ಗೋಡೆಗಳು, ಅದರೊಳಗೇ ಮೆಟ್ಟಿಲು, ಕತ್ತಲು ತುಂಬಿದ

ಅಲಕಾ ಕೆ.



ನೆಲಮಾಳಿಗೆ ಮುಂತಾದ ಹಳೆಯ ಕಾಲದ ಸಕಲ ವೈಶಿಷ್ಟ್ಯಗಳನ್ನೂ ಹೊಂದಿದ್ದ ಆ ದೊಡ್ಡ ಮನೆ ಕಂಡು ವಿಸ್ಮಯ ಪಟ್ಟಿದ್ದರು.

ಸತ್ಯನಾರಾಯಣ ಮನೆಯ ಯಜಮಾನಿಕೆ ವಹಿಸಿಕೊಳ್ಳುವಷ್ಟರಲ್ಲಿ ಹಿಂದಿನ ತಲೆಮಾರಿನ ಒಬ್ಬಿಬ್ಬರು ಹಿರಿಯರನ್ನು ಬಿಟ್ಟು ಉಳಿದವರೆಲ್ಲ ಕಾಲವಾಗಿದ್ದರು. ಮೊದಲಿಗೆ ಎಲ್ಲ ಸಹೋದರರಲ್ಲಿ ಸಾಮರಸ್ಯವಿದ್ದರೂ ಅದು ಹೆಚ್ಚು ವರ್ಷಗಳ ಕಾಲ ಉಳಿಯಲಿಲ್ಲ. ಸಾವಿತ್ರಕ್ಕನ ಮಗಳು ರೋಹಿಣಿಯ ವಿವಾಹದ ಸಂದರ್ಭದಲ್ಲಿ ಸಹೋದರರಲ್ಲಿದ್ದ ಭಿನ್ನಮತ ಸ್ಫೋಟಗೊಂಡಿತ್ತು. ಒಬ್ಬಳೇ ಮಗಳಾದ್ದರಿಂದ ಕೊಂಚ ಕೈಬಿಚ್ಚಿ ಖರ್ಚು ಮಾಡಬೇಕೆಂಬ ಸಾವಿತ್ರಕ್ಕನ ಬಯಕೆ ಎಲ್ಲರ ಅಸಮಾಧಾನಕ್ಕೆ ಕಾರಣವಾಗಿತ್ತು. ಇದೇ ನೆಪದಲ್ಲಿ ಮನೆ ಹಿಸ್ಸೆಯಾಯಿತು.

ಸದಾ ಗೌಜು-ಗದ್ದಲದಿಂದ ಜೀವ ತುಂಬಿಕೊಂಡಿರುತ್ತಿದ್ದ ಮನೆ ಇದ್ದಕ್ಕಿದ್ದಂತೆ ಬರಿದಾದಾಗ ಎಲ್ಲರಿಗಿಂತ ಹೆಚ್ಚು ನೊಂದವರು ಸತ್ಯನಾರಾಯಣ. ನೂರಾರು ವರ್ಷ ಕೂಡಿ ಬಾಳಿದ್ದ ಮನೆ ತನ್ನ ಯಜಮಾನಿಕೆಯಲ್ಲಿ ಛಿದ್ರವಾಯಿತೆಂಬ ಕೊರಗಿನಲ್ಲೇ ಅವರು ತೀರಿಕೊಂಡರು. ಮಗಳು-ಅಳಿಯ ಬೆಂಗಳೂರಿನಲ್ಲಿ ನೆಲೆಸಿದ್ದರೆ, ಮಗ ರವಿ ಸಹ ಭವಿಷ್ಯ ಅರಸಿಕೊಂಡು ಬೆಂಗಳೂರಿನ ಪಾಲಾಗಿದ್ದ. ಹಾಗಾಗಿ ಪತಿಯ ಸಾವಿನ ನಂತರ ಸಾವಿತ್ರಕ್ಕ ತೀರಾ

ಒಂಟಿಯಾಗಿಬಿಟ್ಟರು. ಆದರೆ ಮನೆಯ ಎಲ್ಲಾ ಕಷ್ಟ-ಸುಖಗಳಿಗೆ ತಾನೂ ಸಮಾನ ಬಾಧ್ಯಸ್ಥಳೆಂದು ನಂಬಿದ್ದ ದೇವಿ, ಸಾವಿತ್ರಕ್ಕನ ನೆರಳಾಗಿ ಮನೆಯಲ್ಲೇ ಉಳಿದುಕೊಂಡಳು.

* * *

''ಕಡುಬಿನ ಹಣ್ಣು ಗಂಗಮ್ಮ ಮನೆಲ್ಲೂ ಇಲ್ರ ಸಾಯಿತ್ರಮ್ಮ. ಮಾಯಿನಣ್ಣು ಆದೆ, ಹಾಂಗೆ ಸಂಡ್ಗೆ ಮಾಡಾಂಗಿದ್ರೆ ಹಲಸಿನ್ಕಾಯ್ ಬೆಳದದೆ ಅಂದ್ರು. ಹ್ಯಾಂಗ್ ಮಾಡತ್ರಿ ನೋಡಿ'' ಎಂದು ತನ್ನ ಸೆರಗಿನಲ್ಲಿದ್ದ ಪನ್ನೇರಲು ಹಣ್ಣುಗಳನ್ನು ಗೋಣಿಚೀಲದ ಮೇಲೆ ಸುರಿವಿದಳು ದೇವಿ.

ಪನ್ನೇರಲು ಹಣ್ಣುಗಳ ಜತೆ ಸಾಕಷ್ಟು ಕಾಯಿಗಳೂ ಇದ್ದಿದ್ದು ಕಂಡು ಕುಪಿತರಾದ ಸಾವಿತ್ರಕ್ಕ, ''ಅಯ್ಯೋ ಪುಣ್ಯಾತ್ಗಿತ್ತಿ! ಹಣ್ಣೋ ಕಾಯೋ ನೋಡದೆ ತಂದ್ಯನೇ. ಈ ಎಳೆ ಕಾಯಿ ಯಾರ್ ತಿಂತ? ಬರೀ ತೊಗರು... ಈ ಹುಳುಕು ಹಣ್ಣೆಲ್ಲಾ ಎಂತಕ್ಕೆ ತಂದೆ? ಒಂದ್ ಕೆಲ್ಸ ಸರಿಯಾಗ್ಗಿಲ್ಲೆ ನಿನ್ ಕೈಲಿ...''

ಸಾವಿತ್ರಕ್ಕನ ಗೊಣಗಾಟಕ್ಕೆ ಹೆಚ್ಚಿನ ಗಮನ ನೀಡದೆ ದೇವಿ ಮುಂದುವರಿಸಿದಳು. ''ಸೈತ್ರಮ್ಮ, ಮತ್ತೆ ಡ್ಯಾಂ ಕಟ್‌ತ್ರಂತೆ... ನಮ್ಮೂರೆಲ್ಲಾ ಮುಳುಗಡೆ ಆಗ್ತದಂತೆ.''

''ಕಟ್ಲಿ ಬಿಡೆ. ಅಜ್ಜಿಗೆ ಅಂಬ್ಲಿ ಚಿಂತ್ಯಾದ್ರೆ ಮೊಮ್ಮಗಳಿಗೆ ಮತ್ತೊಂದ್ ಚಿಂತೆ. ಇಲ್ಲಿ ಕಡುಬಿಗೆ ಗುಳ ಇಲ್ಲೆ ಹೇಳಿ ಒದ್ದಾಡ್ತಿದ್ದಿ. ಇದ್ರದ್ದೊಂದು... ಇಲ್ಲೊಂದಿಷ್ಟು ಎಣ್ಣೆ ಹಾಕು'' ಎನ್ನುತ್ತಾ ಹಲಸಿನ ಮೇಣ ಮೆತ್ತಿದ್ದ ಕೈಗಳಿಗೆ ಕೊಬ್ಬರಿ ಎಣ್ಣೆ ಹಾಕಿಸಿಕೊಂಡ ಸಾವಿತ್ರಕ್ಕ ಬೆರಳುಗಳನ್ನು ತಿಕ್ಕಿ ತೊಳೆಯಲಾರಂಭಿಸಿದರು.

''ನಿಜವಂತೆ ಸಾಯಿತ್ರಮ್ಮ. ನಮ್ಮೂರಿನ ಮೂರ್ಕುಡಿ ಹೊಳೆಗೆ ಡ್ಯಾಂ ಕಟ್‌ತ್ರಂತೆ. ಗಂಗಮ್ನ ಮನೆ ಜಗ್ಲಿ ಮೇಲೆ ಅದೇ ಸುದ್ದಿ.''

''ಯಾರ್ ಹೇಳಿದ್ದು? ಗಂಗಾನ ಮಗನಾ? ಅವಂಗೊಂದು ಹೊತ್ತ್ ಹೋಗ್ತಿಲ್ಲೆ! ಸೊಸೈಟಿ ಕೆಲಸಕ್ಕೆ ಸೇರಿದ ಮೇಲಿಂದ ದೊಡ್ಡ ಜನವೇ ಆಗೋದ. ಅಂವನ ಪುಂಗಿಗೆ ತಲೆ ತೂಗಡ, ಎಲ್ಲಾ ಸುಳ್ಳು'' ಎನ್ನುತ್ತಾ ತಮ್ಮ ಕೈ ಸಂಪೂರ್ಣ ಮೇಣ ಮುಕ್ತವಾಗಿದೆಯೇ ಎಂಬುದನ್ನು ಪರಿಶೀಲಿಸಿದರು.

''ಇಲ್ರೊ. ಅವ್ರ ಮನಿಗೆ ಶಾನುಭೋಗ್ರು ಬಂದಾರೆ. ಇನ್ನೂ ಏಳೆಂಟು ಜನ ಇದ್ರಪ್ಪಾ. ಕೆಳಗಿನ ಕೇರಿ ಹೆಗಡೇರ್ನೂ ಕಂಡಂಗಾತು'' ಎಂದು ತನ್ನ ಮಾತಿಗೆ ಇನ್ನಷ್ಟು ಪುರಾವೆಗಳನ್ನು ದೇವಿ ಮುಂದಿಟ್ಟಳು.

ಸಾವಿತ್ರಕ್ಕ ಒಂದು ಕ್ಷಣ ಮೌನವಾದರೂ ಕೊಟ್ಟಿಗೆಯಿಂದ ಬರುತ್ತಿದ್ದ ದನಗಳ ಕೂಗು ಕೇಳಿ, ''ಈ ಸೋರೆನೆಲ್ಲಾ ದನಕ್ಕೆ ಹಾಕು'' ಎಂದು ದೇವಿಗೆ ಸೂಚಿಸಿ ಒಳನಡೆದರು.

* * *

ಮಗ, ಸೊಸೆ, ಮೊಮ್ಮಗಳನ್ನು ವಿಮಾನ ನಿಲ್ದಾಣದವರೆಗೆ ಬೀಳ್ಕೊಟ್ಟ ಸಾವಿತ್ರಕ್ಕ, ರೋಹಿಣಿ ಮತ್ತು ಪರಿವಾರ ಮನೆಗೆ ಹಿಂದಿರುಗಿದಾಗ ಬೆಳಗು ಸಮೀಪಿಸಿತ್ತು. ಎಲ್ಲರೂ ನಾಲ್ಕಾರು ದಿನಗಳಿಂದ ವಿಪರೀತ ತರಾತುರಿ, ಆದೇನೋ ತಳಮಳದಲ್ಲಿದ್ದುದರಿಂದ ಈಗ ಮನೆಯೆಲ್ಲಾ ಖಾಲಿ ಎನಿಸತೊಡಗಿತ್ತು. ಹಾಸಿಗೆಯ ಮೇಲೆ ಉರುಳಿಕೊಂಡರೂ ಅಮ್ಮ-ಮಗಳಿಗೆ ನಿದ್ದೆ ಹತ್ತಲಿಲ್ಲ.

''ರೋಹಿಣಿ... ಸಂಡಿಗೆ ಮೆಣಸು ಅಷ್ಟೂ ಹಾಕಿದ್ಯನೆ?''

''ಇಲ್ಲಮ್ಮ. ಅರ್ಧಕ್ಕರ್ಧ ಉಳಿದಿದ್ದು, ಬ್ಯಾಗಿನ ತೂಕ ಹೆಚ್ಚಾತು. ಹಂಗಾಗಿ ನಿಂಬೆ ಉಪ್ಪಿನ ಕಾಯಿನೂ ಸಣ್ಣ ಡಬ್ಬಿಗೆ ಹಾಕಿದ್ದಾತು. ಯಾವುದೂ ಚೆಲ್ಲದಿದ್ರೆ ಸಾಕು.''

''ಕೂಸಿಗೆ ಟಾಟಾ ಮಾಡಕ್ಕಾದ್ರೆ ಏನೋ ಸಂಕಟ ಆಗ್ತಿತ್ತು ರೋಹಿಣಿ. ಇನ್ನು ಅವ್ರನ್ನೆಲ್ಲಾ ನೋಡದು ಯಾವಾಗ್ಲೆ?''

''ವರ್ಷಕ್ಕೊಮ್ಮೆ ಬರ್ತಿ ಹೇಳಿದ್ನಲ್ಲಾ ರವಿ. ಮುಂದಿನ ವರ್ಷ ಎಲ್ಲರೂ ಬರ್ತ ಬಿಡು.''

''ಈವರೆಗೆ ಹಬ್ಬ-ಹುಣ್ಣಿಮೆಗಾದ್ರೂ ಮನೆಯಲ್ಲಿ ಜನ ಇರ್ತಿದ್ದ. ಇನ್ಮೇಲೆ ನಾನೇ ನಾನು. ಮನೆಲ್ಲಿ ಎಲ್ಲಾ ಸಂಪತ್ತಿದ್ರೂ ಅನುಭವಿಸಲ್ಲೇ ಯಾರೂ ಇಲ್ಲೆ. ಕಾಡು ಬಾ ಅನ್ನೋ ಕಾಲಕ್ಕೆ ಈ ಐಶ್ವರ್ಯ ಇಟ್ಗಂಡ್ ಏನ್ ಮಾಡ್ಲಿ?''

''ಅಷ್ಟು ದೊಡ್ಡ ಮನೆಲ್ಲಿ ನೀನೆಂತಕ್ಕೆ ಒಬ್ಬೆ ಇರ್ತೆ. ಇಲ್ಲೇ ಬಂದ್ಬಿಡಮ್ಮ. ಅಲ್ಲಿ ಏನಾದ್ರೂ ವ್ಯವಸ್ಥೆ ಮಾಡಿದ್ರಾತು. ನೀನಿಲ್ಲಿದ್ರೆ ನಂಗೂ ಸಮಾಧಾನ'' ಎಂಬ ಮಗಳ ಮಾತನ್ನು ಸಾವಿತ್ರಕ್ಕ ತಳ್ಳಿಹಾಕದಿದ್ದರೂ, ಮಗಳ ಮನೆಗೆ ಬಂದಿರಲು ಒಪ್ಪಲಿಲ್ಲ.

''ನೂರಾರು ವರ್ಷ ಬಾಳಿ ಬದುಕಿದ ಮನೆಗೆಂತ ಬೀಗ ಹಾಕಲ್ಲೆ ಬತ್ತಾ? ಯಾರೋ ಗೊತ್ತು-ಗುರಿ ಇಲ್ಲವ್ರನ್ನ ತಂದಿಡೋ ಬದ್ಲು ನಾನೆ ಇರ್ತಿ. ಯನ್ನ ನಂತ್ರ ನಿಂಗ ಆ ಮನೇನಾ ಏನ್ ಬೇಕಾದ್ರೂ ಮಾಡಿ.''

''ಹೌದೌದು! ಇಡೀ ಮನೆ ವಜ್ಜೆಯೆಲ್ಲಾ ನಿನ್ಮೇಲೆ ಇದ್ದಲಾ! ನಾನೇ ಮಗಳಲ್ದೆ ಮಗ ಆಗಿದ್ರೆ ಇಂಥ ಮಾತು ಎಲ್ಲಿ ಬರ್ತಿತ್ತು ನಿನ್ ಬಾಯಲ್ಲಿ? ಎಷ್ಟಂದ್ರೂ ಮಗಳ ಮನೆಲ್ಲಿ ಇಪ್ಪದು ಹೆಂಗೆ... ಅದ್ಕೆ ಮನೆಯ ಚರಿತ್ರೆ, ಭೂಗೋಳ ಎಲ್ಲಾ ಹೇಳ್ತಿದ್ದೆ... ಹೌದಲ್ದಾ?'' ಎಂದು ಸಿಡುಕಿದ ರೋಹಿಣಿ ಚಹಾಗೆ ನೀರಿಡಲು ಎದ್ದುಹೋದಳು.

* * *

ರೋಹಿಣಿಯ ಒತ್ತಾಯದ ಮೇಲೆ ಇನ್ನಷ್ಟು ದಿನ ಅಲ್ಲೇ ಉಳಿದಿದ್ದ ಸಾವಿತ್ರಕ್ಕ ಊರಿಗೆ ಹಿಂದಿರುಗುವಾಗ ನಾಲ್ಕಾರು ವಾರಗಳಾಗಿತ್ತು. ಊರಲ್ಲಿ ಮಳೆಗಾಲ ಆರಂಭವಾಗಿತ್ತು. ಕೆಸರು ತುಂಬಿದ ಅಂಗಳದ ತುದಿಯಲ್ಲಿ ಒಡತಿಯ ಮುಖ ಕಾಣುತ್ತಿದ್ದಂತೆ ಸಂಭ್ರಮಿಸಿದ ದೇವಿ, ''ಏನ್ ಸಾಯಿತ್ರಮ್ಮ ಅಂತೂ ಊರಿನ ನೆನಪಾತಲ್ಲ! ಮಗನ್ ಕೂಡೆ ಎಲ್ಲಿ ನೀವೂ ಪರದೇಶಕ್ಕೆ ಹಾರಿದ್ರೇನ ಮಾಡ್ದೆ'' ಎಂದು ಸಣ್ಣದಾಗಿ ಛೇಡಿಸಿದಳು.

''ನಾನೆಲ್ಲಿ ಹೋಗ್ಲೆ? ಈ ಬ್ಯಾಗು ಹಿಡಿ... ನೀ ಅರಾಮಿದ್ಯ? ಮನೆ ಕಡೆ ಎಂತ ನಡೆಸಿದ್ದೆ?... ಬಚ್ಚಲು ಹಂಡೆಲ್ಲಿ ಬಿಸಿನೀರಿದ್ದ? ಈ ಸುಟ್ಟ ಬಸ್ಸಿನ ಧಡಕಿಲ್ಲಿ ಮೈ-ಕೈಯೆಲ್ಲಾ ನೋವು...'' ಎನ್ನುತ್ತಾ ಮನೆಯೊಳಗೆ ಬಂದವರು ನೇರ ಬಚ್ಚಲು ಮನೆಗೆ ತೆರಳಿ, ಕೊಚ್ಚೆಯಾದ ಕಾಲುಗಳಿಗೆ ಹಾಯೆನಿಸುವಷ್ಟು ಬಿಸಿನೀರು ಸುರಿದುಕೊಂಡರು.

''ಇಲ್ಲೆಂತ ವಿಶೇಷಿಲ್ಲ. ಮಳೆಗಾಲ ಸುರುವಾಗದಲ್ರಾ, ಹಿತ್ಲು ಮಾಡೂಕಾಯ್ತು. ಎಲ್ಲಾ ಬಿತ್ತಿದೆ, ಆದ್ರೆ ಬೆಂಡೆ ಬೀಜೊಂದ್ ಕಾಣ್ಲಿಲ್ಲ. ಎಲ್ಲಿಟ್ಟೀರೇನ ನೀವು ಹೇಳ್ ಸುಮ್ನಾದ. ಕಟ್ಗೆ, ಬೆಳೆಹುಲ್ಲು ಎಲ್ಲದ್ನೂ ಕೊಟ್ಟಿಗೆ ಅಟ್ಟಕ್ಕೆ ಸರ್ದಾಗದೆ...'' ಸಾವಿತ್ರಕ್ಕನ ಗೈರು ಹಾಜರಿಯಲ್ಲಿ ತಾನು ಮಾಡಿ ಮುಗಿಸಿದ ಅಷ್ಟೂ ಕೆಲಸಗಳ ವರದಿಯನ್ನು ದೇವಿ ಒಪ್ಪಿಸಿದಳು. ಜತೆಗೆ, ಸಾವಿತ್ರಕ್ಕ ಬೆಂಗಳೂರಿಗೆ ಹೋದ ದಿನದಿಂದ ಹಿಡಿದು ಊರಿಗೆ ಬರುವವರೆಗಿನ ಎಲ್ಲಾ ವಿವರಗಳನ್ನೂ ಕೆದಕಿ, ತಿಳಿದು ಸಂಭ್ರಮಿಸಿದಳು. ರವಿಯ ಹೆಂಡತಿ ತನಗೆಂದು ಕಳುಹಿಸಿದ ಸೀರೆ ಕಂಡು ಖುಷಿಯಿಂದ ಕಣ್ಣೊರೆಸಿಕೊಂಡಳು.

''ಮುಂದಕ್ಕೆ ಬರೂವಾಗ ಕೂಸು ದೊಡ್ಡಾಗಿರ್ತದಲ್ಲ, ನನ್ನ್ ಗುರ್ತೆಲ್ಲಿ ಇರ್ತದೆ ಸಾಯಿತ್ರಮ್ಮ? ಅವ್ರೆಲ್ಲಾ ಬರೂದ್ರೊಳ್ಗೆ ಡ್ಯಾಂ ಕಟ್ಟಿರೆ ಈ ಮನೆ, ನಮ್ಮೂರು ಯಾವ್ದೂ ಇರೂದಿಲ್ಲ. ಹಾಂಗೆ ನಾನೂ ಇರೂದಿಲ್ಲ.''

''ಡ್ಯಾಂ ಕಟ್ಟದು ಹೌದೇನೆ? ಯಾರ್ ಹೇಳಿದ್ರೆ?''

''ಹೌದಂತೆ ಸಾಯಿತ್ರಮ್ಮ. ಮೂರ್ಕುಡಿ ಹೊಳೆಗೆ ಒಡ್ಡು ಹಾಕ್‌ತ್ರಂತೆ. ತುಪ್ಪದ ಜಡ್ಡಿ ಗುಡ್ಡದ್ ಹತ್ರೆ ಡ್ಯಾಂ ಕಟ್ಟಿ, ನಮ್ಮೂರ್ನೆಲ್ಲಾ ಮುಳುಗಡೆ ಮಾಡ್‌ತ್ರಂತೆ. ನಮ್ಗೆಲ್ಲಾ ಬ್ಯಾರೆ ಜಾಗ, ದುಡ್ಡು ಕೊಟ್ಟು ಇಲ್ಲಿಂದ ಖಾಲಿ ಮಾಡ್‌ಸ್ತಂತೆ. ಅದೆಂತದೋ ಸರ್ವೆನೊ, ಸುಡುಗಾಡೊ ಎಲ್ಲಾ ಮಾಡಾರಂತೆ...'' ತನಗೆ ತಿಳಿದಷ್ಟನ್ನು ಒಂದೇ ಉಸುರಿಗೆ ಒದರಿದಳು ದೇವಿ.

''ಎಲ್ಲಾ ಮುಳುಗೋದ್ರೆ ಎಂತ ಮಾಡದು ಸಾಯಿತ್ರಮ್ಮ? ಇಷ್ಟು ವರ್ಷ ಗೈಯಿದ್ದಲ್ಲಾ ಹೊಳೆಲ್ಲಿ ಹೋಮವಾಗೋದ್ರೆ ಹ್ಯಾಂಗೆ?... ನಿಮ್ಗೆಂತ ತಾಪತ್ರಯಿಲ್ಲ, ಮಕ್ಕಳು-ಮರಿ ಇದ್ದಲ್ಲಿ ಹೋದ್ರಾತು. ನಂಗ್ಯಾರಿದ್ದ ಹಿಂದೆ-ಮುಂದೆ... ನೀವೂ ಹೋದ್ರೆ ನಂಗ್ಯಾರು


ಡಾ|| ಎಚ್. ಆರ್. ಕೃಷ್ಣಮೂರ್ತಿ

## ಅಭಿನಂದನೆಗಳು

ನವಕರ್ನಾಟಕ ಪ್ರಕಟಿಸಿರುವ ಡಾ|| ಎಚ್. ಆರ್. ಕೃಷ್ಣಮೂರ್ತಿ ಅವರ 'ಕಲ್ಪವೃಕ್ಷದ ಜಾಡುಹಿಡಿದು' ಮತ್ತು ಶ್ರೀ ಟಿ. ಆರ್. ಅನಂತರಾಮು ಅವರ 'ಪಶ್ಚಿಮ ಮುಖಿ' ಈ ಎರಡು ಕೃತಿಗಳಿಗೆ ೨೦೦೮ರ ಸಾಲಿನ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಲಭಿಸಿದೆ. ಲೇಖಕರಿಗೆ ನವಕರ್ನಾಟಕದ ಮತ್ತು 'ಹೊಸತು' ಪತ್ರಿಕೆಯ ಅಭಿನಂದನೆಗಳು ಸಲ್ಲುತ್ತವೆ.


ಶ್ರೀ ಟಿ. ಆರ್. ಅನಂತರಾಮು

ದಿಕ್ಕು...'' ದೇವಿಯ ಪೇಚಾಟಕ್ಕೆ ಸಾವಿತ್ರಕ್ಕನಿಗೆ ಏನು ಹೇಳಲೂ ತೋಚಲಿಲ್ಲ.

''ನೀ ಸ್ವಲ್ಪ ಸುಮ್ನಿರೆ'' ಎಂದು ಗದರಿದ ಆಕೆ, ''ಯಾವುದಕ್ಕೂ ಗಂಗಾನ ಕೇಳಿದ್ರೆ ಗೊತ್ತಾಗ್ತು'' ಎಂದು ತಮ್ಮಷ್ಟಕ್ಕೇ ಸಮಾಧಾನ ಮಾಡಿಕೊಂಡರು.

* * *

ಹೊಳೆಗೆ ಡ್ಯಾಂ ಕಟ್ಟುವ ವಿಷಯ ಈ ಊರಿನ ಜನರ ಪಾಲಿಗೆ ಹೊಸದೇನೂ ಆಗಿರಲಿಲ್ಲ. ಮುಳುಗಡೆ ಭೀತಿ ನಾಲ್ಕಾರು ವರ್ಷಗಳಿಂದ ನೆತ್ತಿಯ ಮೇಲೆ ತೂಗುತ್ತಿದ್ದರೂ, ಈವರೆಗೆ ಯಾವ ಖಚಿತ ವರ್ತಮಾನವೂ ಇವರಿಗೆ ತಿಳಿದಿರಲಿಲ್ಲ. ಒಡ್ಡು ಹಾಕುವ ಯತ್ನಕ್ಕೆ ಹಿಂದೊಮ್ಮೆ ಚಾಲನೆ ದೊರೆತಾಗ, ಸುತ್ತಲಿನ ಹತ್ತಾರು ಊರುಗಳ ಜನ ತೀವ್ರ ಪ್ರತಿರೋಧ ತೋರಿದ್ದರಿಂದ ಈ ವಿಷಯ ಬೂದಿ ಮುಚ್ಚಿದ ಕೆಂಡದಂತಿತ್ತು.

''ಹೌದು ಸಾವಿತ್ರಿ, ಡ್ಯಾಂ ಕಟ್ಟ ವಿಷಯಾನ ಶಾನುಭೋಗ್ರೇ ಹೇಳಿದ್ದು. ಸರ್ವೆ-ಗಿರ್ವೆ ಎಲ್ಲಾ ಆಜಡ. ಯಾರಾರಿಗೆ ಎಷ್ಟೆಷ್ಟು ಪರಿಹಾರ ಹೇಳದು ಸದ್ಯದಲ್ಲೇ ಗೊತ್ತಾಗ್ತಡ. ಒಟ್ನಲ್ಲಿ ಸುಖಕ್ಕೆ ಬಂದ ಶಿವರಾತ್ರಿ ಅಲ್ಲ ಇದು. ಎಲ್ಲರೂ ಅತಂತ್ರನೇ'' ಎಂದು ಸಾವಿತ್ರಕ್ಕನ ನೆರೆ ಮನೆಯ ಗೆಳತಿ ಗಂಗಕ್ಕ ಅಲವತ್ತುಕೊಂಡಳು.

ತಾವೆಲ್ಲ ಸಂತ್ರಸ್ತರಾಗುವುದನ್ನು ಊಹಿಸಿಕೊಳ್ಳುತ್ತಿದ್ದಂತೆ ಸಾವಿತ್ರಕ್ಕನಿಗೆ ಅಳು ಒತ್ತರಿಸಿ ಬಂತು. ''ನಮ್ಮದು ಹೇಳಿ ಬಾಳಿ-ಬದುಕಿದ ಮನೆ-ಮಾರು ಎಲ್ಲಾ ನೀರು ಪಾಲಾದ್ಮೇಲೆ ಏನ್ ಪರಿಹಾರ ಕೊಟ್ಟು ಏನ್ ಸುಖ ಗಂಗಾ ? ನಿಂತ ನೆಲವೇ ಮುಳುಗಿಹೋದ್ರೆ ಈ ವಯಸ್ಕಾಲದಲ್ಲಿ ಎಲ್ಲಿಗ್ ಹೋಗ್ಲೆ? ನೆಮ್ಮದಿಯಿಂದ ಸಾಯಲೂ ಇಲ್ಲದ ಹಾಂಗಾಂತು...''

''ಮುಂದಿನ ಮಳೆಗಾಲದೊಳಗೆ ಡ್ಯಾಂ ಕೆಲ್ಸ ಶುರುವಾಗ್ತು ಹೇಳ್ತಿದ್ದ. ಅಂದ್ರೆ, ಇನ್ನೊಂದೆರಡು ಮಳೆಗಾಲ ಅನ್ನೋಷ್ಟರಲ್ಲಿ ಎಲ್ಲಾ ಮುಳುಗಿ ಹೋಗ್ತೇನ. ಈಗ ಹೊಸ್ತಾಗಿಂದ ತೋಟ-ಗದ್ದೆ ಮಾಡಿ ನಾವು ಉಂಡ್ಕಂಡ್ ಹೋಗದು ಹೌದಾ ? ನಿಂಗೆಂತ ಚಿಂತಿಲ್ಲೆ ಸಾವಿತ್ರಿ, ಮಗಳ ಮನೆಗೆ ಹೋದ್ರಾತು. ಮಗ ಕರೆಸಿಕೊಂಡ್ರಂತೂ ಇನ್ನೂ ಚೊಲೋದು...''

ಹೌದಾ ! ಯೋಚಿಸಿದರು ಸಾವಿತ್ರಕ್ಕ. ತನ್ನ ಸರ್ವಸ್ವ ಎಂದು ನೆಚ್ಚಿಕೊಂಡಿದ್ದ ವಸ್ತುಗಳಿಗೆ ಅಪಾಯ ಒದಗಲಿದೆ ಎಂದಾಗ ಅವನ್ನೆಲ್ಲಾ ಬಿಟ್ಟು ಹೋಗಿಬಿಡಲು ಸಾಧ್ಯವೇ ? ಹಾಗೆಂದು ನೆಚ್ಚಿಕೊಂಡು ಕೂರಲು ಉಳಿಯುವುದಾದರೂ ಏನು ?

* * *

ಸಂಜೆ ಮಳೆಯನ್ನೇ ದಿಟ್ಟಿಸುತ್ತಾ ಹಜಾರದಲ್ಲಿ ಕುಳಿತಿದ್ದ ದೇವಿಗೆ ತನ್ನ ಒಡತಿ ಮಗಳ ಮನೆಗೆ ತೆರಳಲಿದ್ದಾರೆ ಎಂಬುದನ್ನು ಅರಗಿಸಿಕೊಳ್ಳಲು ಕಷ್ಟವಾಗಿತ್ತು. ಇಲ್ಲಿ ಇರುವುದಾದರೂ ಇನ್ನೆಷ್ಟು ದಿನ ಮತ್ತು ಇದ್ದಾದರೂ ಮಾಡುವುದೇನು ಎಂಬ ಪ್ರಶ್ನೆಗಳಿಗೆ ಆಕೆಯ ಬಳಿ ಉತ್ತರ ಇರಲಿಲ್ಲ. ಮುಳುಗಡೆಯಾಗುವುದು ಖಚಿತವಾಗುತ್ತಿದ್ದಂತೆ, ತನ್ನೊಡನೆ ಬಂದಿರುವಂತೆ ತಾಯಿಯ ಮನವೊಲಿಸುವಲ್ಲಿ ರೋಹಿಣಿ ಯಶಸ್ವಿಯಾಗಿದ್ದಳು. ಆದರೂ ಮಗಳ ಮನೆಗೆ ಹೋಗಲು ಸಾವಿತ್ರಕ್ಕ ಒಪ್ಪಿಕೊಂಡಿದ್ದು ಹೇಗೆ ಎಂಬುದು ದೇವಿಗೆ ಯಕ್ಷಪ್ರಶ್ನೆಯಾಗಿತ್ತು.

''ಅಲ್ಲ ಸಾಯಿತ್ರಮ್ಮ, ಮಗಳ ಮನಿಗಾದ್ರೆ ಹೋಗಿ-ಬರಲಷ್ಟೇ ಚಂದ ಹೇಳ್ತಿದ್ರಲ್ಲಾ! ಈಗ ರೋಹಿಣಮ್ಮನ್ ಮನಿಗೇ ಹೋಗಿತ್ರ್ರಾ ?'' ಹೂಮಾಲೆ ಕಟ್ಟುತ್ತಿದ್ದ ಸಾವಿತ್ರಕ್ಕನ ಮುಂದೆ ದೇವಿ ತನ್ನ ಗೊಂದಲ ತೆರೆದಿಟ್ಟಳು.

''ಇಲ್ಲಿನ್ನೆಷ್ಟು ದಿನ ಹೇಳು... ಒಂದಲ್ಲಾ ಒಂದು ದಿನ ಬಿಟ್ಟಿಕ್ಕೆ ಹೋಪದೇ ಅಲ್ದ. ನಿಂಗೂ ಒಂದಿಷ್ಟು ಪರಿಹಾರ ಸಿಕ್ತಲಾ... ಮುಂದೆಂತ ಮಾಡ್ತೆ ?''

''ಅಯ್ಯ... ನಂದೆಂತ ! ಹೆಂಗಾರೂ ಕಳೀತದೆ. ಒಂದಲ್ಲಾ ಒಂದು ಮನೆ ಕೆಲ್ಸ ಸಿಕ್ತದೆ ಬಿಡ್ರೊ. ಆದ್ರೂ ನಿಮ್ಮನೆ ಋಣ ಯಾವತ್ತಿಗೂ ನನ್ ಮೇಲದೆ ಸಾಯಿತ್ರಮ್ಮ.''

''ನಿಂದೊಂದೇ ಅಲ್ಲ, ಈ ಮನೆ ಜೊತಿಗೆ ನನ್ನ ಋಣನೂ ಮುಗೀತು ದೇವಿ. ಮನುಷ್ಯಂಗೆ ಎಷ್ಟಿದ್ರೂ, ಏನಿದ್ರೂ ಸಮಾಧಾನ ಇರ್ತಿಲ್ಲೆ. ಇಷ್ಟು ದಿನ ನಾ ಮಾಡಿದ್ದೂ ಅದ್ನೇ. ಮಗ ಬೆಂಗ್ಳೂರಲ್ಲಿ ಇದ್ದಾಗ, ಕರೆದಾಗ ಬರ್ತಿದ್ದ. ಹಬ್ಬ-ಹುಣ್ಮೆಗೆಲ್ಲಾ ಇರ್ತಿದ್ದ. ಆದ್ರೂ ಅಂವ ನನ್ನ ಹತ್ರಿಲ್ಲೆ ಹೇಳಿ ಹಲುಬಿದೆ. ಈಗ ನೋಡು, ಬೇಕಾದಾಗ ನೋಡ್ಲೂ ಆಗದಷ್ಟು ದೂರ ಹೋದ. ಮಕ್ಕಳು ದೂರ ಇದ್ರೂ ನಂದು ಹೇಳಿ ಒಂದು ಮನೆಯಿತ್ತು, ಜಮೀನಿತ್ತು. ಆದ್ರೆ ಪೂರ್ವೀಕರ ಮನೆಯಲ್ಲಿ ಅನುಭವಿಸಲ್ಲೆ ಯಾರೂ ಇಲ್ಲೆ ಹೇಳಿ ಕೊರಗಿದೆ. ಈಗ ಮನೆ-ಜಮೀನೆಲ್ಲಾ ಮುಳುಗಿ ಹೋಗ್ತಿದ್ದು. ನನಗೀಗ ಉಳಿದ ಸಂಪತ್ತು ಅಂದ್ರೆ ಮಗಳು. ಅವಳ ಹತ್ರ ಹೋಗದೆ, ಅವಳೂ ಕೈತಪ್ಪಿ ಹೋದ್ರೆ ಎಂತ ಮಾಡ್ಲಿ? ಇದ್ದಿದ್ನ ಕಂಡು ಖುಷಿ ಪಡದೆ, ಇಲ್ದಿದ್ದಕ್ಕೆ ಹಲುಬಿದ್ರೆ ಎಂತ ಬಂತು ಹೇಳು ?''

ಸಾವಿತ್ರಕ್ಕನ ಜೀವನಾನುಭವಕ್ಕೆ ''ಹೋ... ಹೌಹೌದು'' ಎಂದು ದೇವಿ ತಲೆ ಹಾಕಿದಳು.

''ಒಂದಿಷ್ಟು ಪರಿಹಾರದ ದುಡ್ಡು ಕೈಗೆ ಬತ್ತು, ಖರೆ. ಆದ್ರೆ ನಂಗೀಗ ನಿಜವಾದ ಆಸ್ತಿ ಅಂದ್ರೆ ನನ್ನ ಮಗಳು. ಅದ್ರ ಹತ್ರ ಹೋಪಲೆ ಹನಿ ಬೇಜಾರೂ ನಂಗಿಲ್ಲೆ. ನಾಳೆಯಿಂದ ಮನೆ ಸಾಮಾನೆಲ್ಲ ಜೋಡಿಸವ್ವು...'' ಎಂದು ಸಾವಿತ್ರಕ್ಕ ಮತ್ತೊಮ್ಮೆ ಕೆಲಸಗಳ ಪಟ್ಟಿ ತಯಾರಿಸಲು ಆರಂಭಿಸಿದರು.

* * *

ತೋಟದಲ್ಲಿ ಓಡಾಡುತ್ತಿದ್ದ ಸಾವಿತ್ರಕ್ಕ, ದೇವಿಗೊಂದಿಷ್ಟು ಸೂಚನೆ ನೀಡುತ್ತಿದ್ದರು. ''ನಮ್ಮನೆ ಆಕಳನ್ನು ಗಂಗನ್ ಮನಿಗೆ ಹೊಡೆದ್ರಾತು. ಕೊಟ್ಗೆಗೆ ಅಟ್ಟಕ್ಕಿದ್ದ ಹುಲ್ಲು, ಕಟ್ಟಿಗೆನೂ ಅವ್ರಿಗೇ ಕೊಟ್ಬಿಡ್ತಿ. ನಮ್ಮನೆಯಿಂದ ಏನೇನು ಬೇಕೊ ಎಲ್ಲಾ ನೀ ತಗ ದೇವಿ. ಪಣತದಲ್ಲಿಪ್ಪ ಬತ್ತದಲ್ಲಿ ನೀನೊಂದಷ್ಟು ಇಟ್ಗ, ಹಾಂಗೆ ಕೆಂಪಡಕೆನೂ ಬೇಕಾದಷ್ಟು ತಗ...''

ಮುಳುಗುತ್ತಿದ್ದವಳಿಗೆ ಹುಲ್ಲಿನಾಸರೆ ಸಿಕ್ಕಂತೆ... ಸಾವಿತ್ರಕ್ಕನ ಮಾತಿನಿಂದ ಭರವಸೆಯ ನಗೆಯೊಂದು ದೇವಿಯ ಮುಖದಲ್ಲಿ ಮೂಡಿಬಂತು. ''ಆದ್ರೂ ಮುಳುಗಡೆ ಮಾಡೂಕೆ ಈ ಸುಟ್ಟ್ ಸರ್ಕಾರಕ್ಕೆ ನಮ್ಮೂರೆ ಆಗ್ಬಕಿತ್ತಾ ಸಾಯಿತ್ರಮ್ಮ ? ಯಾರಿಗೊ ನೀರ್ ಕೊಡೋಕೆ ನಮ್ನೆಲ್ಲಾ ಮುಳುಗಿಸ್ತ್ರಲ್ಲಾ ಚೋದಿಮಕ್ಳು...''

''ಹಾಂಗಲ್ಲ ದೇವಿ, ನಮ್ಮ್ ಮಲೆನಾಡು ಅಂದ್ರೆ ಹಲಸಿನ ಮರ ಇದ್ದಾಂಗೆ. ಎಲ್ರಿಗೂ, ಎಲ್ಲಾ ಕೆಲ್ಸಕ್ಕೂ ಬೇಕು...''

''ಅಯ್ಯಯ್ಯೋ ಸಾಯಿತ್ರಮ್ಮ, ಈ ಕಂಟದ ಮೇಲಿನ್ ಹಲಸಿನ ಮರ ಬಿದ್ದೋಗದಲ್ರೊ !'' ಎಂದು ಒಡತಿಯ ಮಾತನ್ನು ತುಂಡರಿಸಿ, ಹೌಹಾರಿ ಕೂಗಿದಳು ದೇವಿ. ತೋಟದ ಕಂಟದಲ್ಲಿದ್ದ ಭಾರಿ ಹಲಸಿನ ಮರ ದಾರಿಗೆ ಅಡ್ಡಲಾಗಿ ಉರುಳಿ ಬಿದ್ದಿತ್ತು. ಪರಮ ಶರಣಾಗತಿಯನ್ನು ತಿಳಿಸುವ ನಿಷ್ಠ ನಾಯಿಯಂತೆ ಅಂಗಾತ ಬಿದ್ದಿದ್ದ ಮರವನ್ನು ಕಂಡು ಇಬ್ಬರೂ ಸಂಕಟಪಟ್ಟರು.

''ಈ ಮನೆ ಕಟ್ಟಿದ ಹೊಸತ್ರಲ್ಲಿ ನಮ್ಮನೆ ಮುತ್ತಜ್ಜ ಎರಡು ಹಲ್ಸಿನ ಸಸಿ ನೆಟ್ಟಿದಿದ್ರು. ಆಗ ನಮ್ಮನೆಲ್ಲಿ ಅಷ್ಟೊಂದ್ ಜನ ಇದ್ರೂ, ಎಲ್ರಿಗೂ ಸಾಕಂಬಷ್ಟು ಫಲ ಕೊಟ್ಟಿದ್ದ ಮರ ಇದು. ಹಣ್ಣು, ಹಪ್ಪಳ, ಸಂಡಿಗೆ, ಕಡುಬು ಯಾವ್ದಕ್ಕೂ ಕೊರತೆ ಇತ್ತಿಲ್ಲೆ. ಈ ಮನೆ ಹಿಸ್ಸೆಯಾದಾಗ ಒಂದು ಮರ ಕಡಿಸಿ, ಪ್ರಧಾನ ಬಾಗಿಲು, ಕಿಟಕಿಯೆಲ್ಲಾ ಮಾಡ್ಸಿದ್ರು. ಆ ಮನೆ ಗೃಹಪ್ರವೇಶದ್ ಹೋಮಕ್ಕೆ ಈಗ ಬಿದ್ದ ಮರದ ಎಲೇನೇ ತಗಂಡ್ ಹೋಗಿದ್ದ...'' ಎಂದೆಲ್ಲಾ ಸಾವಿತ್ರಕ್ಕ ಗತ ಮರದ ಗುಣಗಾನ ಮಾಡಿದರು.

''ಎಂತೆಂಥ ಗಾಳಿ, ಮಳಿಗೂ ಬಗ್ಗದ್ ಮರ ಈಗೆಂತಕ್ಕೆ ಬಿತ್ತು ?'' ಎಂದು ಚಿಂತಿಸುತ್ತಿದ್ದ ದೇವಿಗೆ ''ಈ ಮರಕ್ಕೆ ವಯಸ್ಸೆಂತ ಕಡಿಮೆ ಆಗಿತ್ತಾ ? ಹೋಗ್ಲಿಬಿಡು. ಇಷ್ಟು ದಿನ ನಮ್ಗೆಲ್ಲಾ ಕಡುಬು ತಿನ್ಸಿ ಈಗ ಉರುಳಿ ಬಿತ್ತು'' ಎಂದು ಸಾವಿತ್ರಕ್ಕನೇ ಸಮಾಧಾನ ಹೇಳಿದರು.

''ದಾರಿಗೆ ಅಡ್ಡಾಗಿ ಬಿದ್ದದಲ್ರೊ... ಇದ್ನ ಕಡಿಸಿ ಹಾಕ್ಬಕಲ್ಲ. ಇವತ್ಯಾರಾದ್ರೂ ಆಳು ಸಿಕ್ರಾ ನೋಡ್ಬಕಾಯ್ತು'' ಎಂದು ಆಚೀಚೆ ನೋಡುತ್ತಿದ್ದ ದೇವಿ ತುಸು ದೂರದಲ್ಲಿ ಕರಿ ಕೊಡೆಯೊಂದು ಕಾಣುತ್ತಿದ್ದಂತೆ ಕೊಂಚ ಪರಾಂಬರಿಸಿ, ''ಓಹೊ... ಶಾನುಭೋಗ್ರು !'' ಎಂದು ಉದ್ಗರಿಸಿದಳು.

''ನಿಮ್ಮನಿಗೇ ಹೊರಟಿದ್ದೆ ಸಾವಿತ್ರಕ್ಕ. ಚೂರು ಮಾತಾಡದಿತ್ತು ನಿಮ್ಹತ್ರೆ. ಇಲ್ಲೇ ಸಿಕ್ಕಿದ್ದು ಚೊಲೊ ಆತು'' ಎಂದು ಬಿದ್ದ ಮರ ದಾಟಿ ಬಂದ ಶಾನುಭೋಗರು ಪತ್ರವೊಂದನ್ನು ಆಕೆಯ ಕೈಗಿತ್ತರು.

''ಇದು ನಿಮ್ಮ ಮಗ ರವಿ ಬರೆದ ಪತ್ರ. ತನ್ನ ತಂದೆ ಸತ್ಯನಾರಾಯಣ ಬರೆದ ಉಯಿಲು ತನ್ನ ಹತ್ರ ಇದ್ದು. ಅದ್ರ ಪ್ರಕಾರ ಆಸ್ತಿಯೆಲ್ಲಾ ತನ್ನ ಹೆಸ್ರಿಗಿದ್ದು. ಈಗ ಪರಿಹಾರಾನೂ ತನಗೇ ಸೇರಬೇಕು ಹೇಳಿ ಪತ್ರದಲ್ಲಿ ಬರದ್ದ'' ಎಂದು ಶಾನುಭೋಗರು ವಿವರಿಸಿದರು.

ಹೊಳೆಗೆ ಬಿದ್ದು ಉಸಿರು ಕಟ್ಟಿದವಳಂತಾದ ಸಾವಿತ್ರಕ್ಕ ತುಸು ಸಾವರಿಸಿಕೊಂಡು, ''...ನಂಗೆ ತಿಳಿದಂತೆ ನನ್ನ ಯಜಮಾನ್ರು ಯಾವ ಉಯಿಲನ್ನೂ ಬರೆದಿದ್ರಿಲ್ಲೆ! ಅವರು ಹೋಗಿ ಇಷ್ಟು ವರ್ಷಗಳವರೆಗೂ ಈ ಉಯಿಲಿನ ಪ್ರಸ್ತಾಪ ಯಾರೂ ಮಾಡಿದ್ದಿಲ್ಲೆ! ಈಗೆಲ್ಲಿಂದ ಬಂತು ಇದು...?'' ಎಂದು ಪ್ರಶ್ನಿಸಿದಳು.

''ಈ ಉಯಿಲಿನ ವಿಷಯ ನಂಗೂ ಹೊಸದೇ. ಪಿತ್ರಾರ್ಜಿತ ಆಸ್ತಿ ಅವಂಗೊಬ್ಬಂಗೇ ಸೇರ್ತಿಲ್ಲೆ. ಆದ್ರೆ ನಿಮ್ಮ ಮಗನೇ ಹೀಂಗೆ ತಕರಾರು ತೆಗೆದ್ರೆ ನಿಮಗೆ ಪರಿಹಾರ ಸಿಕ್ಕದು ಸ್ವಲ್ಪ ಕಷ್ಟಾಗ್ತು ಸಾವಿತ್ರಕ್ಕ. ಏನು ಮಾಡ್ತಿ ನೋಡಿ... ನಿಮ್ಮ ಮಗಳನ್ನ ಒಂದ್ ಮಾತು ಕೇಳಿ ನೋಡಿ...''

ಶಾನುಭೋಗರ ಮಾತು ಸಾವಿತ್ರಕ್ಕನ ಕಿವಿ ಮೇಲೆ ಬೀಳುತ್ತಿತ್ತಷ್ಟೆ... ಮನೆ, ಜಮೀನು, ಊರು, ಕೇರಿ ಎಲ್ಲದರ ಜೊತೆ ಆಕೆಗೆ ತಾನು ಸಹ ರಭಸವಾದ ನೀರಿನ ಸುಳಿಯಲ್ಲಿ ಕೊಚ್ಚಿಹೋದಂತೆನಿಸಿ ಬಿದ್ದ ಮರದ ಪಕ್ಕದಲ್ಲೇ ಕುಸಿದರು. ■

**ಅಲಕಾ ಕೆ.**

೮೨, 'ಅಲಕಾ', ತ್ಯಾಗರಾಜ ರಸ್ತೆ, ಬೆಟ್ಟಮಕ್ಕಿ, ಸೀಬಿನಕೆರೆ ಅಂಚೆ, ತೀರ್ಥಹಳ್ಳಿ - ೫೭೭೪೩೨, ಶಿವಮೊಗ್ಗ ಜಿಲ್ಲೆ

## ಒಂದಿಷ್ಟು ಅರ್ಥಶಾಸ್ತ್ರ

# ಮಾರ್ಜಿನಲ್ ಆದಾಯ ತೆರಿಗೆ

ಒಬ್ಬ ವ್ಯಕ್ತಿಯ ಆದಾಯದಲ್ಲಿ ಮೊದಲ ಒಂದಷ್ಟು ಭಾಗವನ್ನು ತೆರಿಗೆಯಿಂದ ವಿನಾಯಿತಿಯಾಗಿ ಇಡಲಾಗುತ್ತದೆ. ತದನಂತರದ ಆದಾಯದ ಮೇಲೆ ಇಂತಿಷ್ಟು ತೆರಿಗೆ. ಅದನ್ನು ಹಲವು ಮಜಲುಗಳಾಗಿ ವಿಂಗಡಿಸಿ, ಮೊದಲ ಮಜಲಿನ ದಕ್ಕಿಂತ, ಮುಂದಿನ, ಅದರ ಮುಂದಿನ.... ಹೀಗೆ ತೆರಿಗೆಯ ದರ ಹೆಚ್ಚುತ್ತಾ ಹೋಗುತ್ತದೆ. ಈ ವರ್ಷದ ಬಜೆಟ್ಟಿಗೆ ಹಿಂದೆ ಈ ಮಜಲುಗಳು ಹಲವು ಇದ್ದು, ಈಗ ಇದನ್ನು ಮೂರೇ ಮಜಲಿಗೆ ಇಳಿಸಲಾಗಿದೆ. ೫ ಲಕ್ಷ ರೂ.ವರೆಗೆ, ೮ ಲಕ್ಷದವರೆಗೆ ಮತ್ತು ಅದಕ್ಕೂ ಹೆಚ್ಚಿದ ಆದಾಯ ಎಂದು. ವಿನಾಯಿತಿಯ ಆದಾಯದ ಮಟ್ಟವನ್ನು ಬಿಟ್ಟು, ಮಿಕ್ಕ ಆದಾಯದ ಮೇಲೆ ಶೇ. ೧೦.೩, ೨೦.೩ ಮತ್ತು ೩೦.೩ ಮಜಲಿನಿಂದ ಮಜಲಿಗೆ ಹೆಚ್ಚುವ ತೆರಿಗೆ ವಿಧಿಸಲಾಗಿದೆ. ಇಲ್ಲಿ ಮೊದಲನೆಯ ಗುಂಪಿಗೆ ಕೊನೆಯ ರೂಪಾಯಿಯ ಮೇಲೆ ತೆರಿಗೆಯ ದರ ಶೇ. ೧೦.೩, ಎಂಟು ಲಕ್ಷ ಆದಾಯದ ಕೊನೆಯ ರೂಪಾಯಿಯ ಮೇಲೆ ೨೦.೩ ಮತ್ತು ಅದಕ್ಕೆ ಹೆಚ್ಚಿನ ಆದಾಯದ ಕೊನೆಯ ರೂಪಾಯಿಗೆ ಶೇ. ೩೦.೩ ತೆರಿಗೆ. ಈ ಆದಾಯದ ಅಂಚಿನ ತೆರಿಗೆಯ ದರಕ್ಕೆ ಮಾರ್ಜಿನಲ್ ತೆರಿಗೆ ಎಂದು ಹೆಸರು.

ಮಾರ್ಜಿನಲ್ ತೆರಿಗೆಯ ದರ ವ್ಯಕ್ತಿಯ ಕೈಯಲ್ಲಿ ಉಳಿಯುವ ಹಣವನ್ನು ನಿರ್ಧರಿಸುತ್ತದೆ. ಈ ವರ್ಷದ ಬಜೆಟ್ಟಿನಲ್ಲಿ ಈ ಮಜಲುಗಳನ್ನು ಮೂರಕ್ಕೆ ಇಳಿಸಿದ್ದರಿಂದ ಐದು ಲಕ್ಷ ವರಮಾನದ ವ್ಯಕ್ತಿಯೂ ಅತಿ ಕಡಿಮೆ ತೆರಿಗೆ ನೀಡುತ್ತಾರೆ. ಮಧ್ಯಮ ವರ್ಗದವರ ಆದಾಯದ ಮಟ್ಟವನ್ನು ಹೆಚ್ಚಿಸುತ್ತದೆ. ಹೀಗೆ ಸಂಪತ್ತಿನ ಕೇಂದ್ರೀಕರಣ ಹಿಂದೆಂದಿಗಿಂತಲೂ ಹೆಚ್ಚಾಗುತ್ತಿರುವುದು ಈ ಬಜೆಟ್‌ನಲ್ಲಿ ಸೂಚಿತವಾಗಿದೆ. ಪ್ರಗತಿಪರ ತೆರಿಗೆಯ ನೀತಿಯು ಸಂಪತ್ತಿನ ಕೇಂದ್ರೀಕರಣವನ್ನು ಬೆಂಬಲಿಸುವುದಿಲ್ಲ. ಇಲ್ಲಿ 'ಪ್ರಗತಿಪರ' ಅಂದರೆ ಸಮಾಜವಾದ ಎಂದು ಅರ್ಥವಿಲ್ಲ; ಪ್ರಗತಿಪರ ಬಂಡವಳಿಗ ಪ್ರಜಾಪ್ರಭುತ್ವಾತ್ಮಕ ಅಂತ.

ಆರ್ಥಿಕ ಉದಾರೀಕರಣ ನೀತಿಯನ್ನು ಅಂತರ ರಾಷ್ಟ್ರೀಯ ಹಣಕಾಸು ಸಂಸ್ಥೆ ಮತ್ತು ವಿಶ್ವಬ್ಯಾಂಕಿನ ಮುಂಚೂಣಿಯಲ್ಲಿ, ಜಾಗತಿಕ ಬಂಡವಾಳ ವ್ಯವಸ್ಥೆ ಎಲ್ಲ ರಾಷ್ಟ್ರಗಳ ಮೇಲು ಹೇರಿದಂತೆಲ್ಲಾ, ಈ ಮಾರ್ಜಿನಲ್ ತೆರಿಗೆ ದರವನ್ನು ಕಡಿಮೆ ಮಾಡುತ್ತಾ ಬರಲಾಗಿದೆ. ಭಾರತ ಈಗ ಅಭಿವೃದ್ಧಿಶೀಲ ಮತ್ತು ಮುಂದುವರಿದ ರಾಷ್ಟ್ರಗಳ ಪೈಕಿ ಅತಿ ಕಡಿಮೆ ಆದಾಯ ತೆರಿಗೆ ದರವನ್ನು ವಿಧಿಸುತ್ತಿದೆ. ಪಕ್ಕದಲ್ಲಿರುವ ಮಾಹಿತಿ ಪಟ್ಟಿಯನ್ನು ನೋಡಿ. ಆದರೂ ನಮ್ಮ ವಾಣಿಜ್ಯ ಘಟಕಗಳು, ಉದ್ದಿಮೆದಾರರು ನಮ್ಮ ತೆರಿಗೆಯ ಮಟ್ಟ ಹೆಚ್ಚು ಎಂದು ಹೇಳುತ್ತಲೇ ಇವೆ. ಹೀಗೇಕೆ ?

ರಾಜಕೀಯವಾಗಿ ಕಳೆದ ೬೦ ವರ್ಷಗಳಲ್ಲಿ ನಮ್ಮ ಸರ್ಕಾರಿ ನೀತಿಯು ಮಧ್ಯಮವರ್ಗವನ್ನು ಹೆಚ್ಚು ಸಂಖ್ಯೆಯಲ್ಲಿ ಸೃಷ್ಟಿಸಿಕೊಂಡು, ಬಂಡವಳಿಗ ವ್ಯವಸ್ಥೆಗೆ ಪೋಷಕ ಮತದಾರರನ್ನು ಬೆಳೆಸಿಕೊಂಡಿದೆ. ಸರ್ಕಾರ ಕೇವಲ ಆಡಳಿತ ನೀಡಬೇಕು, ಅದು ಅರ್ಥವ್ಯವಸ್ಥೆಯಿಂದ ದೂರ ಸರಿಯಬೇಕು ಎಂಬುದು ಇಂದಿನ ನೀತಿ. ರಾಜ್ಯಾಂಗದಲ್ಲಿ ಇರುವ ''ಸಮಾಜವಾದ'' ಪದವನ್ನು ಈ ನೀತಿ ನಿರ್ಲಕ್ಷಿಸುತ್ತದೆ. ಆದ್ದರಿಂದ ಸರ್ಕಾರಕ್ಕೆ ಹೆಚ್ಚಿನ ಆದಾಯದ ಅಗತ್ಯವಿಲ್ಲ; ಕೇವಲ ಗಡಿರಕ್ಷಣೆ ಮತ್ತು ಆಂತರಿಕ ಶಾಂತಿ ಪಾಲನೆ ಮಾತ್ರ ಸರ್ಕಾರದ ಕೆಲಸ ಎಂಬುದು ಇದರ ತತ್ವ. ಹಾಗಾದರೆ ಬಡತನ ನಿರ್ಮೂಲನ, ಸಾರ್ವಜನಿಕ ಶಿಕ್ಷಣ, ಆರೋಗ್ಯ, ಸಾರಿಗೆ ಇವನ್ನೆಲ್ಲಾ ಸಾಧಿಸುವುದು ಹೇಗೆ, ಅದರ ಹೊಣೆ ಯಾರದು ಎಂದರೆ, ಅದನ್ನು ಮುಕ್ತ ಮಾರುಕಟ್ಟೆಯ ಪ್ರಕ್ರಿಯೆ ತಂತಾನೆ ಸಾಧಿಸುತ್ತದೆ ಮತ್ತು ಈ ಪ್ರಕ್ರಿಯೆಯಲ್ಲಿ ಅಸಮರ್ಥರಿಗೆ ಅವಕಾಶವಿಲ್ಲ, ಮಾರುಕಟ್ಟೆ ಅವರನ್ನು ನಿರ್ದಾಕ್ಷಿಣ್ಯವಾಗಿ ತಿರಸ್ಕರಿಸುತ್ತದೆ ಹಾಗೂ ಅದೇ ಸರಿಯಾದ ಮಾರ್ಗ ಎನ್ನುತ್ತದೆ ಈ ನೀತಿ. ಈ ನೀತಿ ಪ್ರಗತಿಪರ ಬಂಡವಾಳ ವ್ಯವಸ್ಥೆಗೇ ಮಾರಕವಾಗುವುದಿಲ್ಲವೆ ?

ವಾಣಿಜ್ಯ ಮತ್ತು ಮಾರುಕಟ್ಟೆಯ ಲೋಕ ನಿರಾತಂಕವಾಗಿ ನಡೆಯಬೇಕಾದರೆ ಬಡತನದಿಂದ ರೊಚ್ಚಿಗೆದ್ದವರ ಹೋರಾಟ ಇರಕೂಡದು, ನಕ್ಸಲ್‌ವಾದ ನಶಿಸಬೇಕು, ಸಾರ್ವಜನಿಕ ಆರೋಗ್ಯದ ಸಾಂಕ್ರಾಮಿಕಗಳ ಸಮಸ್ಯೆ ಇರಬಾರದು, ಕಾರ್ಮಿಕನೂ ಆರೋಗ್ಯದಿಂದ ಇರಬೇಕು, ರೈಲು, ವಿಮಾನ, ರಸ್ತೆ, ಸಮುದ್ರ ಸಂಚಾರ ವ್ಯವಸ್ಥೆ ಸಮರ್ಪಕವಾಗಿರಬೇಕು. ಉದ್ದಿಮೆಗೆ ಅಗತ್ಯವಾದ ಪರಿಣತರನ್ನು ನಿರಂತರ ಸರಬರಾಜು ಮಾಡುವ ಶಿಕ್ಷಣ ವ್ಯವಸ್ಥೆ ಬೇಕು ಇತ್ಯಾದಿ. ಇವುಗಳನ್ನು ನಿರ್ವಹಿಸುವಾಗ, ನೇರವಾಗಿ ತಕ್ಷಣಕ್ಕೆ ಲಾಭ ದೊರಕುವುದಿಲ್ಲ. ಲಾಭವನ್ನು ಸಮರ್ಥ ನಿರ್ವಹಣೆಯ ಏಕೈಕ ಮಾಪಕವಾಗಿ ಗಮನಿಸುವ ಖಾಸಗಿ ವ್ಯವಹಾರ ಈ ಮೂಲಭೂತ ಕೆಲಸಗಳಲ್ಲಿ ಬಂಡವಾಳ ಹೂಡಿ ಭಾಗವಹಿಸುವುದಿಲ್ಲ. ಅಥವಾ ಆರೋಗ್ಯ, ಶಿಕ್ಷಣ ಕ್ಷೇತ್ರಗಳಲ್ಲಿ ವಾಣಿಜ್ಯೀಕೃತ ಲಾಭಕೋರ ವ್ಯವಸ್ಥೆಯಾಗಿ, ಅವು ಕೇವಲ ಅನುಕೂಲಸ್ಥರಿಗೆ ಹೆಚ್ಚಿನ ಬೆಲೆಯಲ್ಲಿ ದೊರಕುವ ವ್ಯವಹಾರವಾಗುತ್ತದೆ, ಅಗತ್ಯ ಸೇವೆಯಲ್ಲ. ಆಗ ಬಹುಭಾಗ ಪ್ರಜೆಗಳು ಈ ವ್ಯವಸ್ಥೆಯ ಪ್ರಯೋಜನ ಪಡೆಯಲಾರದೆ ಮತ್ತಷ್ಟು ಹಿಂದೆ ಬೀಳುತ್ತಾರೆ.

ಅಂದರೆ ಒಂದು ದೇಶದ ಎಲ್ಲ ಜನರೂ ಅಲ್ಲಿಯ ಉತ್ಪಾದನೆಯ ವ್ಯವಸ್ಥೆಯಲ್ಲಿ ತಮ್ಮನ್ನು ತೊಡಗಿಸಿಕೊಳ್ಳಲಾರದೆ, ಅದರ ಒಟ್ಟಾರೆ ರಾಷ್ಟ್ರೀಯ ಉತ್ಪಾದನೆ ಸಾಧ್ಯತೆಗಿಂತ ತೀರ ಕಡಿಮೆಯಾಗಿ ಅದೊಂದು ದುರ್ಬಲ ರಾಷ್ಟ್ರವಾಗುತ್ತದೆ. ಅದಕ್ಕೆಂದೇ ಸಾರ್ವಜನಿಕ ಹಣಕಾಸು ತತ್ವ, ಉಳ್ಳವರಿಂದ ಸಾಕಷ್ಟು ತೆರಿಗೆ ವಸೂಲು ಮಾಡಿ, ಮೂಲಭೂತ ಬೆಳವಣಿಗೆಗಳನ್ನು, ತಕ್ಷಣದ ಲಾಭಕ್ಕೆ ಗಮನ ನೀಡದೆ, ಸಾರ್ವಜನಿಕ ಖಾತೆಯಲ್ಲಿ ನಿರ್ವಹಿಸಬೇಕು ಎನ್ನುತ್ತದೆ. ವರ್ಷದಿಂದ ವರ್ಷಕ್ಕೆ ಮಾರ್ಜಿನಲ್ ತೆರಿಗೆ ಯನ್ನು ಕಡಿಮೆ ಮಾಡುತ್ತಾ ಹೋದರೆ ಈ ಕೆಲಸ ಹೇಗೆ ತಾನೆ ಸಾಧ್ಯ? ಸಾರ್ವಜನಿಕ ಹಣಕಾಸು ನೀತಿ ಎನ್ನುವುದನ್ನು ಬಂಡವಳಿಗ ಅರ್ಥಶಾಸ್ತ್ರಜ್ಞರು ಸಮಾಜವಾದಕ್ಕೆ ಪರ್ಯಾಯ ವೆಂದು ಕೇವಲ ೭೦ ವರ್ಷಗಳ ಹಿಂದೆ ಮಂಡಿಸಿದ್ದು, ಇದು ಆಗಲೆ ಸವಕಲಾಗಿದೆ.

ಒಂದು ಉದಾಹರಣೆ ಗಮನಿಸಿ. ಶಿಕ್ಷಣದ ಹಕ್ಕು ಕಾನೂನಿನನ್ವಯ ಖಾಸಗೀ ಶಾಲೆಗಳು ಶೇಕಡ ೨೫ರಷ್ಟು ಸ್ಥಾನಗಳನ್ನು ಬಡವರಿಗೆ ನೀಡಬೇಕು ಎನ್ನುತ್ತದೆ. ಖಾಸಗೀ ಶಾಲೆಯವರು ಇದನ್ನು ವಿರೋಧಿಸುತ್ತಾರೆ. ಅವರ ಶಿಕ್ಷಣದ ಧಂಧೆ ಒಂದು ಉದ್ಯಮ, ಸೇವೆ ಅಲ್ಲ; ಅದನ್ನು ಲಾಭದಾಯಕವಾಗಿ ನಡೆಸುವುದು ಅವರ ಮೂಲಭೂತ ಹಕ್ಕು. ಸರ್ಕಾರ ಇದಕ್ಕೆ ಚ್ಯುತಿ ಉಂಟುಮಾಡುತ್ತಿದೆ ಎನ್ನುತ್ತದೆ ಖಾಸಗಿ ಉದ್ಯಮ. ಅವರು ಉಳಿದ ಶೇಕಡ ೭೫ ಉಳ್ಳವರ ಮಕ್ಕಳಿಂದ ಹೆಚ್ಚಿನ ಶುಲ್ಕ ವಸೂಲು ಮಾಡಿಕೊಳ್ಳಬೇಕು. ಇಲ್ಲವೆ ಸರ್ಕಾರ ಉಳ್ಳವರ ಆದಾಯದ ಮಾರ್ಜಿನಲ್ ತೆರಿಗೆಯನ್ನು ಹೆಚ್ಚಿಸಿ, ಇದಕ್ಕೆ ಬೇಕಾದ ಹಣ ಒದಗಿಸ ಬೇಕು. ಈ ಎರಡು ಮಾರ್ಗಗಳಲ್ಲಿ ಯಾವ ಕ್ರಮದಿಂದ ಆಳುವ ಪಕ್ಷ, ವರ್ಗ ತನ್ನ ಅಧಿಕಾರವನ್ನು ಉಳಿಸಿಕೊಳ್ಳ ಬಹುದೋ ಅದು ಈ ತೀರ್ಮಾನವನ್ನು ನಿರ್ದೇಶಿಸುತ್ತದೆ. ಉದಾರೀಕರಣದ ಕಳೆದ ಇಪ್ಪತ್ತು ವರ್ಷಗಳಿಂದ ನಾವಂತೂ ಈ ಮಾರುಕಟ್ಟೆಯ ಶಕ್ತಿಗಳಿಗೆ ಸಾರ್ವಜನಿಕ ಹೊಣೆಗಾರಿಕೆಯನ್ನು ಹೊರುವ ಮನಸ್ಸಿಲ್ಲದ್ದನ್ನು ಸ್ಪಷ್ಟವಾಗಿ ಗಮನಿಸುತ್ತಿದ್ದೇವೆ.

**ಕೆ. ಎಸ್. ಪಾರ್ಥಸಾರಥಿ**
ನಂ. ೨೪೭, 'ವನಸಿರಿ', ಟೆಲಿಕಾಂ ಬಡಾವಣೆ, ವಿದ್ಯಾನಗರ,
ಬೆಟ್ಟಹಲಸೂರು ಅಂಚೆ, ಬೆಂಗಳೂರು - ೫೬೨ ೧೫೭

### ಮಾರ್ಜಿನಲ್ ತೆರಿಗೆ ಮಾಹಿತಿ ಪಟ್ಟಿ

ಈ ಕೆಳಗೆ ಹಲವು ದೇಶಗಳ ಮಾರ್ಜಿನಲ್ ತೆರಿಗೆಯ ವಿವರಗಳನ್ನು ನೀಡಲಾಗಿದೆ. ನಮ್ಮ ದೇಶವನ್ನು ಇತರರೊಡನೆ ಓದುಗರು ಹೋಲಿಸಿ, ಈ ಕುರಿತು ತೀರ್ಮಾನಕ್ಕೆ ಬರಬಹುದು.

| | ೧೯೭೯ | ೧೯೯೦ | ೨೦೦೨ |
|---|---|---|---|
| ಅರ್ಜೆಂಟೈನಾ | ೪೫ | ೩೦ | ೩೫ |
| ಆಸ್ಟ್ರೇಲಿಯ | ೬೨ | ೪೮ | ೪೭ |
| ಕೆನಡಾ | ೫೮ | ೪೭ | ೪೬ |
| ಡೆನ್‌ಮಾರ್ಕ್ | ೭೩ | ೬೮ | ೫೯ |
| ಜರ್ಮನಿ | ೫೬ | ೫೩ | ೪೯ |
| ಭಾರತ | ೬೦ | ೫೦ | ೩೦ |
| ಇಸ್ರೇಲ್ | ೬೬ | ೪೮ | ೫೦ |
| ಬ್ರೆಜಿಲ್ | ೫೫ | ೨೫ | ೨೮ |
| ಇಟಲಿ | ೭೨ | ೫೦ | ೫೨ |
| ಜಪಾನ್ | ೭೫ | ೫೦ | ೫೦ |
| ರಷ್ಯಾ | - | ೬೦ | ೧೩ |
| ಸ್ವೀಡನ್ | ೮೭ | ೬೫ | ೫೬ |
| ಇಂಗ್ಲೆಂಡ್ (ಯುಕೆ) | ೮೩ | ೪೦ | ೪೦ |
| ಅಮೆರಿಕ ಸಂಯುಕ್ತ ಸಂಸ್ಥಾನ | ೭೦ | ೩೩ | ೩೫ |

ಈ ಪಟ್ಟಿಯನ್ನು ಗಮನಿಸಿದರೆ ತಿಳಿದು ಬರುವ ವಿಷಯ : ಮುಂದುವರಿದ ರಾಷ್ಟ್ರಗಳು ತಮ್ಮ ಬೆಳವಣಿಗೆಯ ಮೊದಲ ಹಂತದಲ್ಲಿ ಹೆಚ್ಚು ಹೆಚ್ಚು ತೆರಿಗೆ ವಸೂಲಿ ಮಾಡಿವೆ. ಈಗಲೂ ಮಾಡುತ್ತಿವೆ. ಇನ್ನೂ ಬೆಳವಣಿಗೆಯ ಮೊದಲ ಹಂತವನ್ನೇ ಹತ್ತದ ನಾವು ಈಗಲೆ ತೆರಿಗೆಯನ್ನು ಕನಿಷ್ಠ ಮಟ್ಟಕ್ಕೆ ತಂದಿದ್ದೇವೆ !

# ನ್ಯಾಚುರಲ್ ನಿಸರ್ಗ

ಸತ್ಯವತಿ ಹರಿಕೃಷ್ಣನ್

‘‘ಪ್ರಾಣಿ ನಿಲಯ ! ಛೆ ! ಅಲ್ಲ; ಪ್ರಾಣೇಶ ನಿಲಯ !... ಸರಿ, ಕರೆಕ್ಟಾಗೇ ಬಂದಿದ್ದೀನಿ. ಇದೇ ನಮ್ಮ ಅಂಬತ್ತೆಯ ಹೊಸ ಮನೆ'' ಎಂದು, ಗೋಡೆಯ ಮೇಲೆ ಫಳಫಳ ಕಲ್ಲಿನಲ್ಲಿ ಕೊರೆದು ಇರಿಸಿದ್ದ ತನ್ನ ಸೋದರ ಭಾವನ ಮನೆಯ ಹೆಸರನ್ನು ಓದಿಕೊಂಡು ಉದ್ಗರಿಸಿದ ಹೂವು-ಹಣ್ಣಿನ ಚಿತ್ರವಿದ್ದ ಶರ್ಟು-ಪ್ಯಾಂಟು ಹಾಗೂ ಅದೇ ಡಿಸೈನಿನ ಬ್ಯಾಗ್ ಹಿಡಿದು ನಿಂತಿದ್ದ ಇಪ್ಪತ್ತನಾಲ್ಕು-ಇಪ್ಪತ್ತೈದರ ತರುಣ. ತಲೆಯಲ್ಲಿ ಹಕ್ಕಿಗೂಡಿನ ಹಾಗೆ ಎರ್ರಾಬಿರ್ರಿ ತಲೆಗೂದಲು, ಹುಚ್ಚುಗಡ್ಡ, ಟ್ರಿಮ್ ಮಾಡದ ಮೀಸೆಗಳಿಂದ ಕಂಗೊಳಿಸುತ್ತಿದ್ದ ಈ ಹೇಗ್ಹೇಗೋ ಇರೋ ಆಸಾಮೀನ ನೋಡಿ, ಬಾಗಿಲು ತೆರೆದ ಪ್ರಾಣೇಶ ತಬ್ಬಿಬ್ಬಾದ. ಗದ್ದೆಯಲ್ಲಿ ನೆಟ್ಟ ಬೆರ್ಚಪ್ಪಂಗೆ (ಬೆದರು ಗೊಂಬೆಗೆ) ಜೀವ ಬಂದು ಇಲ್ಲಿಗೆ ಬಂತೆ ಅಥವಾ ಸರ್ಕಸ್ ಜೋಕರ್ ತಪ್ಪಿ ಇಲ್ಲಿಗೆ ಬಂದನೆ ಎಂಬ ಅನುಮಾನದಲ್ಲೇ ಪ್ರಶ್ನಿಸಿದ...

‘‘ಯಾರ್‍ರೀ ನೀವು ? ಯಾರು ಬೇಕಾಗಿತ್ತು ?''

‘‘ಇದು ಅಂಬತ್ತೆ ಮನೆ ತಾನೆ ?'' ಬೆರ್ಚಪ್ಪ ಯಾ ಜೋಕರ್ ಉತ್ತರ ನೀಡದೆ ಪ್ರಶ್ನೆಯನ್ನೇ ಹಾಕಿದ.

‘‘ಅಂಬತ್ತೆ ಅಂದ್ರೆ ?''

‘‘ಅಂಬಾಬಾಯಿ ಎಂಬ ಹೆಸರಿನ ನನ್ನ ಅತ್ತೆ... ಸೋದರತ್ತೆ, ಗೊತ್ತಾಯ್ತಾ ಮಿಸ್ಟರ್ ಪ್ರಾಣಿ ಭಾವ ?''

ತನ್ನ ಹೆಸರು ಕೇಳಿ ಪ್ರಾಣೇಶನ ಅಮ್ಮ ಅಂಬಾಬಾಯಿ ತನ್ನ ಕೋಣೆಯಿಂದ ಹೊರಬಂದಳು. ಜೊತೆಗೇ ಪ್ರಾಣಿ ಹೆಂಡತಿ ಪಮ್ಮಿ, ಇವರಲ್ಲೇ ಉಳಿದುಕೊಂಡು ಕಾಲೇಜು ವಿದ್ಯಾಭ್ಯಾಸ ಮಾಡುತ್ತಿದ್ದ ಪಮ್ಮಿಯ ತಮ್ಮ – ಸಂಜುನೂ ಹೊರಗೆ ಬಂದರು.

‘ಪ್ರಾಣಿ’ ಎಂಬ ಅಡ್ಡಹೆಸರಲ್ಲೇ ಪ್ರಸಿದ್ಧನಾದ ‘ಪ್ರಾಣೇಶ’ ಅಚ್ಚರಿಯಿಂದ, ಅನುಮಾನದಿಂದ ‘‘ಅಂದ್ರೆ... ಅಂದ್ರೆ... ನೀನು...'' ಎಂದು ಕ್ಲೂ ಹುಡುಕಲು ಶುರುಮಾಡುತ್ತಿದ್ದಂತೆ,

‘‘ಹಾಂ... ಹಾಂ... ನಾನೇ... ಅಂಬತ್ತೆಯ ಏಕಮಾತ್ರ ತಮ್ಮನ ಸುಪುತ್ರ ಮಿಸ್ಟರ್ ನಿಸರ್ಗ'' ಎಂದು ಹೂ-ಹಣ್ಣಿನ ಅಂಗಿಯ ಸರದಾರ ಸ್ವಪರಿಚಯ ಮಾಡಿಕೊಂಡ.

‘‘ಮಿಸ್ಟರ್ ನಿಸರ್ಗ !?... ನಿನ್ನ ಹೆಸರು ವೆಂಕ್ಟೇಶ ಅಲ್ವೇನೋ ? ಏನೋ ಇದು ನಿನ್ನ ವೇಷ ? ನಂಗೆ ಗುರ್ತೇ ಸಿಗ್ಲಿಲ್ಲ!'' ಪ್ರಾಣಿ ಅಚ್ಚರಿಯಿಂದ ವಟಗುಟ್ಟಿದ.

‘‘ಆ ಹೆಸ್ರು ನಂಗೆ ಇಷ್ಟ ಆಗ್ಲಿಲ್ಲ. ಅದಕ್ಕೇ ಚೇಂಜ್ ಮಾಡಿಕೊಂಡ್ಬಿಟ್ಟೆ ಭಾವ.''

ಮಿಸ್ಟರ್ ನಿಸರ್ಗನ ಮಾತು ಕೇಳಿ ಅಂಬತ್ತೆ ‘‘ಬಿಡ್ತು ಅನ್ನು. ಆ ಹೆಸರಿಗೆ ಏನಾಗಿತ್ತೋ ? ಒಳ್ಳೇ ದಿವಿನಾಗಿತ್ತು'' ಎಂದು ಗದರಿಕೊಂಡರು.

‘‘ಓ ಅತ್ತೇ ! ನಂಗೆ ‘ನೇಚರ್’ ‘ನ್ಯಾಚುರಲ್’ ಅಂದ್ರೆ ತುಂಬಾ ಇಷ್ಟ. ಅದಕ್ಕೇ ಹೆಸರು ಬದಲಾಯಿಸಿ ಕೊಂಡಿದ್ದು.'' ಹಾವ-ಭಾವ ಪೂರ್ಣವಾಗಿ ಸ್ಟೈಲಾಗಿ ಸಮರ್ಥಿಸಿಕೊಂಡ ನಿಸರ್ಗ.

‘‘ಸರಿ, ಬಾ ಒಳಗೆ. ಬಾಗ್ಲಲ್ಲೇ ಎಲ್ಲಾ ಮಾತಾಯ್ತಲ್ಲ'' ಎಂದು ಪ್ರಾಣಿ ಆತನನ್ನು ಒಳಗೆ ಬರಮಾಡಿಕೊಂಡ.

ಎಲ್ಲರೂ ಸೋಫಾದಲ್ಲಿ ಕುಳಿತರೆ, ನಿಸರ್ಗ ಮಾತ್ರ ಆಚೀಚೆ ನೋಡಿ, ಹೊರಗೋಡಿ, ಒಂದು ಕಲ್ಲನ್ನು ಹುಡುಕಿ ತಂದಿಟ್ಟುಕೊಂಡು, ಅದರ ಮೇಲೆ ಕುಳಿತ.

‘‘ಏನೋ ಇದು ಅವಾಂತರ ? ಸೋಫ ಇರೋವಾಗ ಈ ಕಲ್ಲು ಯಾಕೋ ?'' ಪ್ರಾಣಿ ಕೆಟ್ಟ ಮುಖ ಮಾಡಿ ಕೊಂಡು ಪ್ರಶ್ನಿಸಿದ. ತನ್ನ ನೂತನ ಗೃಹದ ಕನ್ನಡಿಯಂಥಾ ನೆಲದಲ್ಲಿ ಈ ಕಲ್ಲಿನಿಂದಾಗಿ ಎಲ್ಲಿ ಸ್ಕ್ರ್ಯಾಚ್ ಬೀಳುತ್ತೋಂತ ಆತಂಕಗೊಂಡಿದ್ದ.

‘‘ನೋಡಿ ಭಾವ, ಕಲ್ಲು ನ್ಯಾಚುರಲ್ ವಸ್ತು. ಸೋಫ ಮ್ಯಾನ್‌ಮೇಡ್. ಆದ್ರಿಂದ ನಂಗೆ ಕಲ್ಲೇ ಇಷ್ಟ.''

‘‘ಇವನೂ ಮ್ಯಾನ್‌ಮೇಡ್ ಅಲ್ವಾ ? ಇವನನ್ನು ಏನು ಮಾಡ್ಬೇಕು ?'' ಅಷ್ಟು ಹೊತ್ತೂ ಮೌನದಿಂದ ಎಲ್ಲವನ್ನೂ ವೀಕ್ಷಿಸುತ್ತಿದ್ದ ಸಂಜು, ಅಕ್ಕನ ಬಳಿ ಪ್ರಶ್ನಿಸಿದ.

ಪಮ್ಮಿ ಬೆಚ್ಚಿಬಿದ್ದಳು. ಮೆಲ್ಲಗೆ ಕಳ್ಳದನಿಯಲ್ಲಿ ‘‘ಏಯ್ ಸಂಜು, ಸ್ವಲ್ಪ ಸುಮ್ನಿರ್ತೀಯಾ ? ಅವ್ನು ಬರ್ತಿದ್ದ ಹಾಗೇ ಯಾಕೋ ಗಲಾಟೆ ಎಬ್ಬಿಸ್ತೀಯ ?'' ಎಂದು ತಮ್ಮನನ್ನು ಎಚ್ಚರಿಸಿ, ಗಟ್ಟಿಯಾಗಿ,




‘‘ನಿಸರ್ಗ, ಬಿಸಿ ಬಿಸಿ ಕಾಫಿ ಮಾಡಿಕೊಡ್ಲಾ ?'' ಎಂದು ಉಪಚಾರದ ಡೈಲಾಗ್‌ಅನ್ನು ತೂರಿಬಿಟ್ಟಳು.

ಆದರೆ ನಿಸರ್ಗ ಒಪ್ಪಲಿಲ್ಲ. ಕಾಯಿಸದೇ ಇರೋ ಹಾಲು ಮಾತ್ರ ಕೊಡಬೇಕೆಂದು ತಾಕೀತು ಮಾಡಿದ. ಬೇಯಿಸಿದ್ದು, ಕುದಿಸಿದ್ದು ‘ನ್ಯಾಚುರಲ್’ ಆಗುವುದಿಲ್ಲವಾದ್ದರಿಂದ ಕಾಫಿ-ಗೀಫಿ ಎಲ್ಲಾ ವರ್ಜ್ಯವೆಂದು ಸಾರಿದ.

ಸಂಜುಗೆ ತಡೆಯಲಾಗಲಿಲ್ಲ. ‘‘ಅಕ್ಕಾ, ಇವ್ನು ಆದಿಮಾನವನೇ ಇರ್ಬೇಕು. ‘ಕಾರ್ಟೂನ್ ಶೋ’ನಲ್ಲಿ ಬರೋ ‘ಫ್ಲಿನ್‌ಸ್ಟೋನ್’ ಇವ್ನೇ ಅಂತ ಕಾಣಿಸುತ್ತೆ'' ಎಂದು ಅಕ್ಕನ ಕಿವಿಯಲ್ಲುಸುರಿದ.

‘‘ಟಾರ್ಜಾನೂ ಆಗಿರ್ಬೋದು – ಕಾದು ನೋಡೋಣ'' ಎಂದು ಪಿಸುದನಿಯಲ್ಲಿ ಪ್ರತಿಕ್ರಿಯಿಸಿ, ಅಡುಗೆಮನೆಗೆ ನಡೆದಳು ಪಮ್ಮಿ; ಅವಳ ಬೆಳಗಿನ ತಿಂಡಿ, ಅಡುಗೆ ತಯಾರಿಕೆ ಅರ್ಧದಲ್ಲೇ ನಿಂತುಹೋಗಿತ್ತು.

ಉಳಿದವರೂ ಅವರವರ ಕೆಲಸಗಳತ್ತ ಗಮನ ಹರಿಸಿದರು. ಘಮಘಮ ಮಸಾಲೆ ದೋಸೆಯನ್ನು ಸಿದ್ಧಪಡಿಸಿ, ಎಲ್ಲರನ್ನೂ ತಿಂಡಿಗೆ ಆಹ್ವಾನಿಸಿದಳು ಪಮ್ಮಿ. ಎಲ್ಲರೂ ಸಂತಸದಿಂದ ಡೈನಿಂಗ್ ಟೇಬಲನ್ನು ಸುತ್ತುವರಿದು ತಿಂಡಿಯನ್ನು ಕಬಳಿಸತೊಡಗಿದರು. ಆದರೆ ನಿಸರ್ಗ ಮಾತ್ರ ಯಥಾಪ್ರಕಾರ ಕೆಂಪು ಸಿಗ್ನಲ್ ತೋರಿಸಿದ.

''ಭಾವ, ನಂಗೆ ಆಗದಿರೋದನ್ನೇ ತಿನ್ನು ಅಂದ್ರೆ ಹೇಗೆ ತಿನ್ನಲಿ ? ಹಸಿ ತರಕಾರಿ, ಹಣ್ಣು ಹಂಪಲು ಕೊಡಿ. ಎಷ್ಟು ಬೇಕಾದರೂ ತಿನ್ತೀನಿ. ಅದು ಬಿಟ್ಟು ಅನ್‌ನ್ಯಾಚುರಲ್ ಫುಡ್ ತಿನ್ನೂಂತ ಒತ್ತಾಯ ಮಾಡಬೇಡಿ.''

ನಿಸರ್ಗನ ಮಾತು ಕೇಳಿ ಹೆಂಡತಿಯನ್ನರಸಿ ಅಡುಗೆ ಮನೆಗೆ ದೌಡಾಯಿಸಿದ ಪ್ರಾಣಿ, ''ಪಮ್ಮಿ, ಮನೇಲಿ ಹಣ್ಣು-ಹಸಿ ತರಕಾರಿ ಏನಾದ್ರೂ ಉಳಿದಿದ್ಯೇನೇ ?'' ಎಂದು ಪ್ರಶ್ನಿಸಿದ.

''ಇಲ್ಲ'' ಕಡ್ಡಿ ಮುರಿದಂಥ ಉತ್ತರ !

''ಮಾರ್ಕೆಟ್ಟಿಗೆ ಹೋಗಿ ಹಣ್ಣುಹಂಪಲು ತರೋಣಾಂದ್ರೆ ಆಫೀಸಿಗೆ ಹೊತ್ತಾಗುತ್ತೆ. ಏನು ಮಾಡೋದೇ ?'' ಪ್ರಾಣಿ ಪೇಚಾಡಿಕೊಂಡ.

''ಮಾಡೋದೇನು ? ಯಾವ್ದಾದ್ರೂ ಮರ ಹತ್ತಿ, ನ್ಯಾಚುರಲ್ ಆಗಿ ಕಿತ್ತಿ, ನ್ಯಾಚುರಲ್ ಆಗಿ ಕಚ್ಚಿ ತಿನ್ನಕ್ಕೆ ಹೇಳಿ.''

''ತಮಾಷೆ ಸಾಕೆ. ಸೀರಿಯಸ್ ಆಗಿ ಏನಾದ್ರು ಹೇಳೆ.'' ಪ್ರಾಣಿ ಅಲವತ್ತುಕೊಂಡ.

''ನೀರು ಕುಡಿಯಕ್ಕೆ ಹೇಳಿ ಭಾವ. ಅದರಷ್ಟು ನ್ಯಾಚುರಲ್ ಬೇರೆ ಯಾವ್ದೂ ಇಲ್ಲ'' ಎನ್ನುತ್ತ ಒಳಬಂದ ಸಂಜು.

''ಸುಮ್ನಿರೋ ತಲೆಹರಟೆ. ಮನೆಗೆ ಬಂದೋರ್ನ ಉಪಚಾರ ಮಾಡೋದ್ ಬೇಡ್ವಾ ?'' ಪ್ರಾಣಿ ಗದರಿದ.

''ಮಾಡಿ ಮಾಡಿ, ನನ್ಗೇನು ? ನಿಮ್ಮ ಮನೆ, ನಿಮ್ಮ ನೆಂಟ್ರು !'' ಎನ್ನುತ್ತ ಅಕ್ಕ ಮಾಡಿಟ್ಟ ಕಾಫಿಯನ್ನು ಹೀರತೊಡಗಿದ ಸಂಜು.

ಅಷ್ಟರಲ್ಲಿ ಪ್ರಾಣಿಗೇ ಒಂದು ಉಪಾಯ ಹೊಳೆಯಿತು. ಭಾವ ಮೈದುನನ ಕೈ ಹಿಡಿದುಕೊಂಡು,

''ಏಯ್ ಸಂಜು, ನಂಗೊಂದು ಉಪಕಾರ ಮಾಡ್ತೀಯ ?'' ಎಂದು ದೈನ್ಯದಿಂದ ಬೇಡಿಕೊಂಡ.

''ಏನು ?''

''ನೀನೇ ಮಾರ್ಕೆಟ್ಟಿಗೆ ಹೋಗಿ ಹಣ್ಣು ತಂದುಬಿಡ್ತೀಯ ?''

ಸಂಜುವಿನ ಹುಬ್ಬು ಮೇಲೇರಿತು. ಆತ ಅಚ್ಚರಿಯನ್ನು ವ್ಯಕ್ತಪಡಿಸುತ್ತಾ, ನಿರ್ದಾಕ್ಷಿಣ್ಯವಾಗಿ ಅಸಹಕಾರ ಚಳುವಳಿ ನಡೆಸಿದ.

''ಭಾವ, ಇದ್ರಿಂದ ನಿಮ್ಗೆ ಉಪಕಾರ ಮಾಡಿದ ಹಾಗಾಗುತ್ತೆ ? ಬಂದಿದ್ದಾನಲ್ಲ, ಆ 'ನ್ಯಾಚುರಲ್ ಕೋಡಂಗಿ !' ಅವ್ನಿಗೆ ಸಹಾಯ ಮಾಡಿದ ಹಾಗೆ ಆಗುತ್ತೆ, ಅಷ್ಟೆ. ಯಾರಿಗೆ ಮಾಡಿದ್ರೂ ಆ ಮೂರ್ಖಂಗೆ ಮಾತ್ರ ನಾನು ಸಹಾಯ ಮಾಡಲ್ಲ. ಅವ್ನ ಕೈಕಾಲು ಗಟ್ಟಿ ಇದ್ಯಲ್ಲಾ ! ಅವ್ನಿಗೆ ಬೇಕಾದ್ದು ಅವ್ನೇ ಹೋಗಿ ತರ್ಲಿ.''

ಬಂದವರ ಹತ್ತಿರವೇ ತರಿಸೋದು ಹೇಗೆಂದು ಪ್ರಾಣಿ ಪೇಚಾಡಿಕೊಂಡ. ಸಂಜುಗೆ ನಿಸರ್ಗನ ರೀತೀನೇ ಹಿಡಿಸಿರಲಿಲ್ಲ. ಹಾಗಾಗಿ ಭಾವಂಗೆ ಮತ್ತಷ್ಟು ಉಪದೇಶ ನೀಡತೊಡಗಿದ.

''ಎಲ್ರೂ ತಿಂದ ಹಾಗೆ ತಿನ್ನೋದು, ಇರೋದು ಬಿಟ್ಟು ಹೀಗೆ ಹುಚ್ಚಾಬಟ್ಟೆ ಇರೋದು ಸರಿಯಾ ? ನೋಡಿ ಭಾವ, ನೀವೂನೂ ಅಧಿಕಪ್ರಸಂಗಿಗೆ ಮಣೆ ಹಾಕ್ತೀರಿ. ನೀವು ಅವ್ನ ತಾಳಕ್ಕೆ ತಕ್ಕ ಹಾಗೆ ಕುಣೀತೀರಿ ಅಂತ ಗೊತ್ತಾದ್ರೆ, ನಿಮ್ಮ ತಲೇಮೇಲೇ ಹತ್ತಿ ಕೂತ್ಬಿಡ್ತಾನೆ. ನೋಡ್ತಿರಿ ಬೇಕಾದ್ರೆ.''

ಪ್ರಾಣಿಗೆ ರೇಗಿತು. ''ಉಪದೇಶ ನಿಲ್ಸಿ ಉಪಕಾರ ಮಾಡ್ತ್ಯ ?'' ಗರಂ ಆಗಿ ಕೇಳಿದ.

''ಇಲ್ಲ. ಆ ಆದಿಮಾನವನ್ನ ಕಾಡಿಗೇ ಕಳ್ಸಿ. ಸುಮ್ನೆ ನನ್ನನ್ನ ಕಾಡ್ಬೇಡಿ. ನಂಗೆ ಕಾಲೇಜಿಗೆ ಹೊತ್ತಾಗುತ್ತೆ. ಇವತ್ತು ಇಂಟರ್‌ನಲ್ಸ್ ಬೇರೆ ಇದೆ. ಬರ್ತೀನಿ, ಬೈ... ಬೈ...''

ಸಂಜು ಹೋಗೇ ಬಿಟ್ಟ. ''ನನ್ನ ಪ್ರಾರಬ್ಧಕರ್ಮ !'' ಎಂದು ತಲೆತಲೆ ಚಚ್ಚಿಕೊಂಡು, ಅರ್ಧ ದಿನ ಆಫೀಸಿಗೆ ರಜೆ ಹಾಕಲು ನಿರ್ಧರಿಸಿ, ಮಾರ್ಕೆಟ್ಟಿಗೆ ಹೊರಟ ಪ್ರಾಣಿ.

ಮಗ ಚೀಲ ಹಿಡಿದು ಹೊರಟಿದ್ದು ನೋಡಿ, ಅಂಬಾಬಾಯಿ ತನ್ನ ಕೋಣೆಯಿಂದ ಓಡಿಕೊಂಡೇ ಬಂದರು.

''ಲೋ ಪ್ರಾಣೀ, ಮಾರ್ಕೆಟ್ಟಿಗೆ ಹೋಗ್ತಾ ಇದ್ಯಾ ? ನಮ್ ವೆಂಕ್ಟು... ಅಲ್ಲಲ್ಲ... ನಿಸರ್ಗ ಹೇಳ್ತಾನೆ; ನಾನೂ ದಿನಾ ಹಣ್ಣು-ಹಂಪ್ಲು ತಿನ್ಕೊಂಡಿದ್ರೆ ಚೆನ್ನಾಗಿರ್ತೀನಂತೆ. ಅದಕ್ಕೇ ಇವತ್ತಿಂದ್ಲೇ ಒಂದ್ಹೊತ್ತು ಊಟ-ತಿಂಡಿ ಬಿಟ್ಟು, ಹಣ್ಣು ತಿಂದು ಅಭ್ಯಾಸ ಮಾಡಿಕೊಳ್ತೀನಿ. ನಂಗೂ, ನಿಸರ್ಗಂಗೂ ಒಂದಿಷ್ಟು ಹಣ್ಣು ಹಂಪ್ಲು ತಂದ್ಬಿಡಪ್ಪ. ನನ್ನ ರೋಗಗಳೂ ಹೋಗುತ್ವೆ, ನಿನ್ನ ಹೆಂಡ್ತಿಗೆ ನಂಗೆ ಬೇಯ್ಸಿ ಹಾಕೋ ಕಾಟಾನೂ ತಪ್ಪುತ್ತೆ.''

ಅಮ್ಮನ ಕೊಂಕು ಮಿಶ್ರಿತ ಸೊಂಪು ಮಾತಿಗೆ ಸುಮ್ಮನೆ 'ಹೂಂ' ಗುಟ್ಟಿ ಹೊರನಡೆದ ಪ್ರಾಣಿ. ಅವನು ಮಾರ್ಕೆಟ್ ಎಲ್ಲಾ ಸುತ್ತಿ, ಹಣ್ಣುಗಳನ್ನು ಕೊಂಡುಕೊಂಡು ಮನೆ ಸೇರುವ ಹೊತ್ತಿಗೆ ಹಗಲು ಏರಿ, ಇಳಿದು, ಸಂಜೆ ಯಾಗತೊಡಗಿತ್ತು. ಎರಡು ಕೈಯಲ್ಲಿ ಎರಡು ಚೀಲ ಹಿಡಿದು ಒಳಬಂದು ''ಉಸ್ಸಪ್ಪ !'' ಎಂದು ಕೂರುತ್ತಿದ್ದಂತೆ, ಅಲ್ಲೇ ಕಾದು ಕುಳಿತಿದ್ದ ನಿಸರ್ಗ ಹಾಗೂ ಅಂಬಾಬಾಯಿ ಒಂದೊಂದು ಚೀಲವನ್ನು ಸೆಳೆದುಕೊಂಡು ತಮ್ಮ ಕೋಣೆಯತ್ತ ಹೆಜ್ಜೆ ಹಾಕಿದರು. ಕೋಣೆಗೆ ಹೋಗುತ್ತಾ ''ಒಳಗೆ ಇಟ್ರೆ ಎಲ್ಲಾ ನಿನ್ ಹೆಂಡ್ತೀನೇ ತಿಂದುಬಿಡ್ತಾಳೆ.



... ನಂ ರಾಜ್ಯ ಸರ್ಕಾರದಲ್ಲಿನ ಪಕ್ಷದ ಚಿಹ್ನೆಯಲ್ಲಿ ಮಾತ್ರ ಮಹಿಳೆಗೆ ಸ್ಥಾನ...!

ಆಮೇಲೆ ನನ್ನ ಹೊಟ್ಟೆಗೆ ತಣ್ಣೀರು ಬಟ್ಟೇನೇ ಗತಿ'' ಎಂದು ಅಂಬಾಬಾಯಿ ಗೊಣಗಿದ್ದು ಕೇಳಿಸಿದರೂ, ಕೇಳಿಸದಂತೆ ಕುಳಿತ ಪ್ರಾಣಿ, ''ಲೇ ಪಮ್ಮಿ, ಕುಡಿಯಕ್ಕೆ ನೀರು ತಾರೇ'' ಎಂದು ಕೂಗಿಕೊಂಡ.

''ಯಾಕ್ರೀ ಇಷ್ಟು ಹೊತ್ತು ? ಇವತ್ತು ಇಡೀ ದಿವ್ಸ ಆಫೀಸಿಗೆ ರಜೆ ಆಯ್ತಲ್ರೀ !'' ಎನ್ನುತ್ತಾ ನೀರು ತಂದ ಪಮ್ಮಿ, ಗಂಡನ ಪಕ್ಕದಲ್ಲಿ ಏನೂ ಇಲ್ಲದ್ದು ನೋಡಿ, ''ಅರೆ ! ಹಣ್ಣು ಸಿಗ್ಲಿಲ್ವಾ ?'' ಎಂದು ಪ್ರಶ್ನಿಸಿದಳು.

ಅಷ್ಟರಲ್ಲಿ ''ಲೋ ಪ್ರಾಣಿ, ಬಾರೋ ಇಲ್ಲಿ'' ಎಂಬ ಅಂಬಾಬಾಯಿಯ ಆಜ್ಞಾವಾಕ್ಯ ತೂರಿಬಂತು.

''ಒಳ್ಳೆ ಕರಡಿ ಸಹವಾಸ ಆಯ್ತಲ್ಲ ! ನಾವಿಬ್ರು ಮಾತಾಡೋ ಹಾಗೂ ಇಲ್ಲ.'' ಪಮ್ಮಿ ಗೊಣಗಿದಳು.

''ಅವ್ರನ್ನ 'ಕರಡಿ' ಅಂತ ಹೇಳಿದ್ರೆ, ಅವ್ರ ಮಗ ನಾನೂ 'ಕರಡಿ' ಆಗ್ತೀನಲ್ಲೇ'' ಎಂದು ರಾಗ ಹಾಡಿದ ಪ್ರಾಣಿ, ''ಹಣ್ಣಿನ ರೇಟೆಲ್ಲ ಗಾಳಿಪಟದ ಹಾಗೆ ಆಕಾಶದಲ್ಲೇ ಹಾರಾಡ್ತಿದೆ ಕಣೇ ಪಮ್ಮಿ. ಎಲ್ಲಾ ಹಣ್ಣಿನ ರೇಟೂ ಕೆ.ಜಿ.ಗೆ ನೂರು ರೂಪಾಯಿ ಮೇಲೇನೇ. ಜೇಬೆಲ್ಲ ಖಾಲಿ ಆಗ್ಹೋಯ್ತು ಕಣೆ...'' ಎಂದು ಕಷ್ಟ ಸುಖ ಹೇಳಿಕೊಳ್ಳತೊಡಗಿದ.

ಆದರೆ ''ಪ್ರಾಣೀ, ಪ್ರಾಣೀ...'' ಅಂತ ಅಂಬಾಬಾಯಿಯ ಬಾಯಿ ಬಡಿದುಕೊಳ್ಳುತ್ತಲೇ ಇತ್ತು. ಅದನ್ನು ಮುಚ್ಚಿಸುವ ಸಲುವಾಗಿ ಕಷ್ಟ-ಸುಖದ ಹೇಳಿಕೆಗೆ ಬ್ರೇಕ್ ಹಾಕಿ ತಾಯಿಯ ಕೋಣೆಗೆ ನುಗ್ಗಿದ ಪ್ರಾಣಿ.

''ಅಲ್ವೋ ಪ್ರಾಣಿ ನಿಂಗೆ ಬಾಳೆಹಣ್ಣು, ಸೀಬೆಹಣ್ಣು ಮಾತ್ರ ಗೊತ್ತಿರೋದ ? ಬರೀ ಅವನ್ನೇ ತಂದಿದ್ದೀಯಲ್ಲಾ ! ಒಂದಿಷ್ಟು ಸೇಬು, ದಾಳಿಂಬೆ, ಕಿತ್ತಳೆ, ಅನಾನಸು, ಅಂಜೂರ ಎಲ್ಲಾ ತರ್ಬಾರ್ದಿತ್ತ ?'' ಎಂದು ಅಂಬಾಬಾಯಿ ತರಾಟೆಗೆ ತೆಗೆದುಕೊಂಡರೆ, ನಾಚಿಕೆರಹಿತ, ದಾಕ್ಷಿಣ್ಯ ವಿಹೀನ ಮಿಸ್ಟರ್ ನಿಸರ್ಗ ಪ್ರಾಣಿಯನ್ನು ಹಂಗಿಸಿದ.

''ಏನು ಕಂಜೂಸು ಭಾವ ನೀವು ! ಬಂದೋರಿಗೆ ಹೊಟ್ಟೆ ತುಂಬ ಹಾಕಬೇಕು ಅನ್ನೋದೂ ಇಲ್ವಲ್ಲ ನಿಮ್ಗೆ. ಇಷ್ಟು ಸ್ವಲ್ಪ ಹಣ್ಣುಗಳು ಎಲ್ಲಿಗೆ ಸಾಕು ? ಕಡಿಮೇಂದ್ರ ಒಬ್ಬರಿಗೆ ಒಂದು ಹೊತ್ತಿಗೆ ಎಂಟು-ಹತ್ತು ಕೆ.ಜಿ. ಹಣ್ಣಾದ್ರೂ ಬೇಡ್ವಾ ?''

'ಒಂದು ಹೊತ್ತಿಗೆ ೧೦ ಕೆ.ಜಿ.! ಅಂದ್ರೆ ದಿನಕ್ಕೆ ಎರಡು ಸಾವಿರ ರೂಪಾಯಿಯಷ್ಟು ಹಣ್ಣುಗಳು ಎರಡು ಹೊತ್ತಿಗೆ !' ಯೋಚಿಸುತ್ತಿದ್ದಂತೆ ಕೋಪ ನೆತ್ತಿಗೇರಿ ಪ್ರಾಣಿಯ ಹಲ್ಲುಗಳು ಕಟಕಟ ಕಡಿದು ಯುದ್ಧಕ್ಕೆ ರೆಡಿಯಾದವು. ಕಷ್ಟಪಟ್ಟು ಕೋಪವನ್ನು ನಿಗ್ರಹಿಸುತ್ತ ''ನೀವು ಹೇಳಿದ ಹಣ್ಣುಗಳು ಅಲ್ಲಿ ಇರ್ಲಿಲ್ಲ ಅಮ್ಮ'' ಎಂದು ತಾಯಿಗೆ ಮಾತ್ರ ಉತ್ತರಿಸಿದ.

''ಯಾಕೋ ? ಈಗ ಅದ್ರ ಸೀಸನ್ ಅಲ್ವಾ ?''

ಅಂಬಾಬಾಯಿಯ ಈ ಪ್ರಶ್ನೆಗೆ ಉತ್ತರಿಸಿದವನು ಪ್ರಾಣಿ ಅಲ್ಲ, ನಿಸರ್ಗ !

''ಈಗ ಮೊದ್ಲಿನ ಹಾಗೆ ಸೀಸನ್ ಗೀಸನ್ ಏನಿಲ್ಲ ಅಂಬತ್ತೆ. ಎಲ್ಲಾ ಕಾಲದಲ್ಲೂ ಎಲ್ಲಾ ಹಣ್ಣುಗಳೂ, ತರಕಾರಿಗಳೂ ಧಾರಾಳವಾಗಿ ಸಿಗುತ್ವೆ. ರೇಟ್ ಸ್ವಲ್ಪ ಹೆಚ್ಚು ಕಡಿಮೆ ಇರತ್ತೆ, ಮುಖ್ಯವಾಗಿ ಅವುಗಳ ಕೊಂಡುಕೊಳ್ಳೋ ಮನಸ್ಸು ಬೇಕು, ಅಷ್ಟೆ !''

''ಹಾಗಾದ್ರೆ ನೀನೇ ತಾ'', ಕೋಪ ಮಾತಾಗಿ

ಹೊರಬಂತು. ನಿಗ್ರಹ ಕಿತ್ತುಕೊಂಡುಹೋಯ್ತು. ಕೋಪ ವಾಪಾಸು ಬಂತು.

''ನಾನ್ಯಾಕೆ ತರ್ಲಿ? ನೀವೇ ತರ್ಬೇಕು. ನಾನು ನಿಮ್ಮ ಅತಿಥಿ ಅಲ್ವಾ?''

'ಅತಿಥಿ ಅಂತೆ ಅತಿಥಿ! ನಮ್ ತಿಥಿ ಮಾಡೋಕೆ ಬಂದಹಾಗಿದೆ ಇವ್ನು. ಬಹುಶಃ ಈ ಕೋಡಂಗೀನ ಸಾಕಕ್ಕೆ ಆಗಲ್ಲಾಂತ ಅವ್ನ ಮನೆಯವ್ರು ಇವನನ್ನು ಹೊರಗೆ ಅಟ್ಟಿರಬೇಕು. ಇವ್ನು ಇಲ್ಲಿ ವಕ್ಕರಿಸಿಕೊಂಡಿದ್ದಾನೆ' ಎಂದು ಮನದೊಳಗೇ ಬಯ್ದುಕೊಳ್ಳುತ್ತಾ, ನಿಸರ್ಗನನ್ನು ನುಂಗುವ ಹಾಗೆ ನೋಡಿ, ಬಿರುಗಾಳಿಯಂತೆ ಆ ಕೋಣೆಯಿಂದ ಹೊರನಡೆದ ಪ್ರಾಣಿ.

ಮತ್ತೆ ತಲೆನೋವೂಂತ ಮುಸುಕು ಹಾಕಿ ಮಲಗಿದವನು ಎದ್ದದ್ದು ಸಂಜು ಕಾಲೇಜಿಂದ ಬಂದ ಮೇಲೆಯೇ. ನಿಸರ್ಗನಂಥಾ ಬಿಳಿ ಆನೇನ ಸಾಕೋದೇ ಕಷ್ಟ ಅಂತ ಪೇಚಾಡ್ತಾ ಇರೋವಾಗ, ಅವ್ನು ಅಂಬಾಬಾಯಿಯ ತಲೆಕೆಡಿಸಿ, ಅವರೂ ಕೂಡ ಊಟ-ತಿಂಡಿ ಬಿಟ್ಟು ಕೆ.ಜಿ.ಗಟ್ಟಳೆ ಹಣ್ಣು ತಿನ್ನೋ ಹಾಗೆ ಮಾಡ್ತಾ ಇದ್ದಾನೆ. ಇವರಿಬ್ಬರ ಹೊಟ್ಟೆ ತುಂಬಿಸೋದ್ರೊಳಗೆ ತಾನು ಪಾಪರ್ ಆಗ್ತೀನೀಂತ ಪ್ರಾಣಿ ಪಮ್ಮಿ ಹಾಗೂ ಸಂಜು ಎದುರಿಗೆ ಎಗರಾಡಿ ಬಾಯಿ ಬಾಯಿ ಬಡಿದುಕೊಂಡ.

''ಅವ್ನು ಬರ್ತಿದ್ದ ಹಾಗೇ ಹೇಳ್ದೆ ನಾನು. ಆ ಕೋಡಂಗೀನ ತಲೆಮೇಲೆ ಇಟ್ಕೋಬೇಡೀಂತ. ನೀವು ಕಿವಿಗೇ ಹಾಕ್ಕೊಳ್ಳಿಲ್ಲ ಭಾವ. ಈಗ ನೋಡಿ, ಪರಿಸ್ಥಿತಿ ಎಲ್ಲೀವರೆಗೆ ಬಂತೂಂತ. ಹೀಗೇ ಮುಂದುವರೀತೂಂದ್ರೆ ಸದ್ಯದಲ್ಲೇ ಬರೋ ದೀಪಾವಳಿ ಹೊತ್ತಿಗೆ ನೀವು ದಿವಾಳಿ ಎದ್ದು ಹೋಗಿರ್ತೀರಿ ಅಷ್ಟೆ!''

ಪ್ರಾಣಿಭಾವ ತನ್ನ ಎಚ್ಚರಿಕೆಯನ್ನು ಮೂಲೆಗೆ ತಳ್ಳಿದುದರ ಫಲ ಇದು ಎಂಬುದನ್ನು ಎತ್ತಿ ತೋರಿಸಿದ ಸಂಜು.

''ಏಯ್ ಒಗ್ಗರಣೆ! ಸ್ವಲ್ಪ ಸುಮ್ನಿರ್ತೀಯ? ಮೊದ್ಲೇ ಅವ್ರು ಬೇಜಾರಲ್ಲಿದ್ದಾರೆ. ಇನ್ನು 'ಗಾಯದ ಮೇಲೆ ಬರೆ' ಅನ್ನೋ ಹಾಗೆ ಏನಾದ್ರು ವದರ್ತಾ ಇರ್ಬೇಡ. ನೀನು ಜಾಣ ಆಗಿದ್ರೆ, ಈ ಅಪಾಯದಿಂದ ಪಾರಾಗೋ ಉಪಾಯ ಹೇಳು'' ಪಮ್ಮಿ ಗದರಿದಳು.

''ಈಗಲೇ ಊರಿಗೆ ಬಾ ಅಂತ ಅವನಪ್ಪ ಕಳಿಸಿದ ಹಾಗೆ ಮೆಸೇಜ್ ಕಳಿಸಿದ್ರೆ?''

''ನಿನ್ ತಲೆ! ಅವನಪ್ಪನ ಮೊಬೈಲ್ ನಿನ್ನ ಹತ್ರ ಇದೆಯಾ?'' – ಸಂಜು ಹೇಳಿದ ಉಪಾಯವನ್ನ ಪ್ರಾಣಿ ತಳ್ಳಿ ಹಾಕಿದ.

''ಯಾವ್ದಾದ್ರೂ ಕಾಯಿನ್ ಫೋನ್‌ನಿಂದ ನಮ್ಮನೆ ಲ್ಯಾಂಡ್‌ಲೈನಿಗೆ ಫೋನಾಯಿಸಿ ಮಾತಾಡಿದ್ರೆ? ಕಾಲರ್ ಐ.ಡಿ. ಹೇಗೂ ಹಾಳಾಗಿದೆಯಲ್ಲ!''

''ಈ ಹಳೇ ಸಿನೆಮಾ ಮಾಡೆಲ್ ಉಪಾಯ ಬಿಟ್ಟು ಹೊಸದೇನಾದ್ರು ಇದ್ರೆ ಹೇಳು. ಏನಾದ್ರು 'ಸಾಲಿಡ್' ಆಗಿರೋ ಉಪಾಯ ಹೇಳೂಂದ್ರೆ, 'ಲಿಕ್ವಿಡ್' ಹಾಗೆ ಸೋರಿಹೋಗೋ ಉಪಾಯ ಹೇಳ್ತಾ ಇದ್ದಿ.''

''ಭಾವ, ನೀವು-ಅಕ್ಕ ನಾನು ಹೇಳಿದ ಹಾಗೇ ಮಾಡ್ತೀರಾದ್ರೆ, ನಿಜಕ್ಕೂ ಒಂದು ಸೂಪರ್ ಐಡಿಯ ಕೊಡ್ತೀನಿ'' ಎಂದು ಸಂಜು ಅವರಿಬ್ಬರಿಗೂ ಉಪಾಯ ಹೇಳಿಕೊಟ್ಟ.

ಮರುದಿನ ಮಧ್ಯಾಹ್ನ ನಿಸರ್ಗ ಊಟಕ್ಕೆ ಬಂದಾಗ ಅವನ ಎಲೆಯಲ್ಲಿ ಒಂದೇ ಒಂದು ಹಣ್ಣೂ ಇರಲಿಲ್ಲ.

''ಮಾರ್ಕೆಟ್ನಲ್ಲಿ ಇವತ್ತು ಯಾಕೋ ಹಣ್ಣೇ ಇರ್ಲಿಲ್ಲ ಕಣೋ ನಿಸರ್ಗ. ಅದಕ್ಕೇ ವೆರೈಟಿ ವೆರೈಟಿ ಹಸಿ ತರಕಾರಿಗಳನ್ನೇ ತಂದ್ಬಿಟ್ಟೆ'' ಎಂದು ಪ್ರಾಣಿ ಬಣ್ಣಿಸುತ್ತಿದ್ದಂತೆ ಪಮ್ಮಿ ಸೌಟುಗಟ್ಟಳೆ ಎರಡು ಮೂರು ಬಗೆ ಹೆಚ್ಚಿದ ತರಕಾರಿ ತುಂಡುಗಳನ್ನು ಬಡಿಸಿದಳು.

ನಿಸರ್ಗ ಊಟದೆಲೆಯ ನಡುವಿನಲ್ಲಿದ್ದ ಹಸಿರು ತುಂಡುಗಳನ್ನು ಬಾಯಿಗೆ ಹಾಕಿಕೊಂಡು 'ಕಚಕಚ' ಅಗಿದ. ಅದು ಯಾವ ತರಕಾರಿ ಎಂದು ಅವನಿಗೆ ತಿಳೀಲೇ ಇಲ್ಲ.

ನೀರು ಕುಡಿದು, ಮುಳ್ಳುಸೌತೆ ತಿಂದು ಚೇತರಿಸಿಕೊಂಡ ನಿಸರ್ಗನಿಗೆ ಇನ್ನೊಂದು ತರಕಾರಿಯ ತುಂಡುಗಳನ್ನು ತೋರಿಸಿ,

''ಇದು ದೇಹಕ್ಕೆ ತುಂಬಾ ಒಳ್ಳೇದು ನಿಸರ್ಗ. ಇದನ್ನು ತಿಂದ್ರೆ ಸಕ್ಕರೆ ಕಾಯಿಲೆ, ಉಪ್ಪಿನ ಕಾಯಿಲೆ ಯಾವ್ದೂ ಹತ್ರ ಸುಳಿಯಲ್ಲ'' ಎಂದು ಪ್ರಾಣಿ ವಿವರಿಸಿದ.

ಅದನ್ನು ಬಾಯಿಗೆ ಹಾಕಿಕೊಂಡ ನಿಸರ್ಗ ''ಥೂ ಕಹಿ... ಕಹಿ'' ಎಂದು ಉಗುಳತೊಡಗಿದ.

''ಮತ್ತೆ, ಹಾಗಲಕಾಯಿ ಸಿಹಿ ಇರುತ್ತಾ? ಇದನ್ನ ತಿಂದ್ರೆ ಹೊಟ್ಟೆಹುಳಗಳೆಲ್ಲ ಸತ್ತುಹೋಗಿ, ಆರೋಗ್ಯ ಕುದುರುತ್ತೆ. ಅಷ್ಟೂ ಗೊತ್ತಿಲ್ವ ನಿಮ್ಗೆ? ಎಲ್ಲಾ ಉಗುಳುತ್ತಾ



ಇದ್ದೀರಾ?... ಛೆ... ಛೆ... ನ್ಯಾಚುರಲ್ ಫುಡ್‌ನೆಲ್ಲಾ ವೇಸ್ಟ್ ಮಾಡ್ತಾ ಇದ್ದೀರಲ್ಲಾ ಮಿಸ್ಟರ್ ನಿಸರ್ಗ!'' ತರಾಟೆಗೆ ತೆಗೆದುಕೊಂಡ ಸಂಜು.

''ಇದೊಂದು ಸ್ಪೆಶಲ್ ಐಟಂ ಕಣೋ ನಿಸರ್ಗ. ಎಲ್ಲಾ ಮರ-ಗಿಡಗಳ ಎಲೆಗಳನ್ನೂ ಕಟ್ ಮಾಡಿ ಮಿಕ್ಸ್ ಮಾಡಿದ 'ಮಿಕ್ಸೆಡ್ ಲೀವ್ಸ್ ಕಟ್ಟಿಂಗ್ಸ್' ಕಣೋ.''

ಪ್ರಾಣಿಯ ಬಣ್ಣನೆ ಕೇಳುತ್ತಾ, ಹರಳೆಣ್ಣೆ ಕುಡಿದವನಂತೆ ಕೆಟ್ಟ ಮುಖ ಮಾಡಿಕೊಂಡು, ಬಾಯಲ್ಲಿ ಇದ್ದದ್ದನ್ನು ನುಂಗಲಾಗದೆ ನುಂಗಿದ ನಿಸರ್ಗ, ಎಲೆಯ ಬದಿಯಲ್ಲಿದ್ದ ಸಣ್ಣಗೆ ಹೆಚ್ಚಿದ ಹಸಿರು-ಕೆಂಪು ತರಕಾರಿಯನ್ನು ಬಾಯಿಗೆ ಹಾಕಿಕೊಂಡ. ಅದನ್ನು ಅಗಿಯುತ್ತಿದ್ದಂತೆ ಕಣ್ಣು-ಮೂಗಲ್ಲಿ ಜಲೋದ್ಭವವಾಗಿ 'ಕೆಹು ಕೆಹು' ಕೆಮ್ಮು ಅಟ್ಟಿಸಿಕೊಂಡು ಬಂತು. ಸಂಜು ತೆಂಗಿನ ಚಿಪ್ಪಿನಲ್ಲಿ ನೀರು ಕೊಟ್ಟು,

''ಏನಿದು ಮಿಸ್ಟರ್ ನಿಸರ್ಗ? ಇದು ನ್ಯಾಚುರಲ್ ಮೆಣಸಿನಕಾಯಿ! ಅಷ್ಟು ಪುಟ್ಟ ಗಿಣಿಯೇ ಇದನ್ನ ತಿನ್ನುತ್ತೆ, ನಿಮ್ಗೆ ಆಗಲ್ವ? ಸರಿ, ಹೋಗ್ಲಿಬಿಡಿ. ಈ ಮುಳ್ಳುಸೌತೆ ಪೀಸ್‌ನಾದ್ರೂ ತೊಗೊಳ್ಳಿ'' ಎಂದು ಉಪಚರಿಸಿದ.

''ಹಾಗೇನಿಲ್ಲ, ಹಸಿ ತರಕಾರಿ ಆದ್ರೂನೂ ಲಿಮಿಟ್ ಇರ್ಬೇಕು. ಯದ್ವಾತದ್ವಾ ತಿನ್ನಬಾರ್ದು. ಇವತ್ತು ತಿಂದಿದ್ದು ಜಾಸ್ತಿ ಆಯ್ತು. ಹೊಟ್ಟೇಲಿ ಜಾಗಾನೇ ಇಲ್ಲ'' ಎನ್ನುತ್ತಾ, ಎದ್ದುಹೋಗಿಯೇ ಬಿಟ್ಟ.

ಅಂಬಾಬಾಯಿ ತನ್ನ ಜೊತೆಯಲ್ಲಿದ್ದರೆ ತನಗೆ ಒಳ್ಳೊಳ್ಳೆ ಹಣ್ಣುಗಳು ಸಿಗಬಹುದೆಂದು ಲೆಕ್ಕಾಚಾರ ಹಾಕಿ, ರಾತ್ರಿ ಆಕೆಯೊಂದಿಗೇ ಫಲಾಹಾರ ಸ್ವೀಕರಿಸಲು ಹಾಜರಾದ ನಿಸರ್ಗ.

ಎರಡು ಎಲೆಗಳ ಮೇಲೂ ಅತಿಯಾಗಿ ಹಣ್ಣಾದ ಹಾಗೂ ಕೊಳೆತ ಹಣ್ಣುಗಳ ತುಂಡುಗಳು ಸುಂದರವಾಗಿ ಕಂಗೊಳಿಸುತ್ತಿದ್ದವು. ಈಗಲೂ ಎಡವಟ್ಟಾಯಿತಲ್ಲಾ ಎಂದು ಕಂಗಾಲಾದ ನಮ್ಮ 'ನ್ಯಾಚುರಲ್ ಕೋಡಂಗಿ'.

''ನೋಡಿ ಅತ್ತೆ, ಎಂಥಾ ಹಣ್ಣುಗಳನ್ನು ಇಟ್ಟಿದ್ದಾರೆ ನಿಮ್ಮ ಸೊಸೆ'' ಎಂದು ಚುಚ್ಚುಮದ್ದು ಕೊಟ್ಟ.

''ಏನೇ ಇದು ಅತಿರೇಕ ? ಇದನ್ನು ತಿನ್ನಕ್ಕಾಗುತ್ತ ?'' ಸೊಸೆ ಮೇಲೆ ರೇಗಿಬಿದ್ದಳು ಅಂಬಾಬಾಯಿ.

''ಯಾಕಾಗಲ್ಲ? ಇದು 'ನ್ಯಾಚುರಲ್' ಅಲ್ವಾ ? ಹಣ್ಣಾಗೋದು, ಕೊಳೆತುಹೋಗೋದು, ಒಣಗಿ ಹೋಗೋದು ಎಲ್ಲಾ ನ್ಯಾಚುರಲ್ ತಾನೆ ? ಇಂಥಾ ಆಹಾರಾನೇ ನೇಚರ್‌ನಲ್ಲಿರೋ ಪ್ರಾಣಿ-ಪಕ್ಷಿಗಳು ಆರಾಮವಾಗಿ ತಿಂತಾ ಇರೋವಾಗ, ನಿಮ್ಮಂಥ ನ್ಯಾಚುರಲ್ ಮನುಷ್ಯರಿಗೆ ಆಗಲ್ವ ? ಶೇಮ್... ಶೇಮ್...!'' ಪಮ್ಮಿ ತನ್ನ ಕೆಲಸವನ್ನು ಸಮರ್ಥಿಸಿಕೊಂಡು ಮಾತನಾಡಿದಳು.

''ಅಯ್ಯೋ, ಹುಳ !'' ಎಂದು ಕಿರುಚಿಕೊಂಡು ಒಂದು ಹಣ್ಣನ್ನು ಕೆಳಗೆ ಹಾಕಿದ ನಿಸರ್ಗ.

''ಅಷ್ಟು ಸಣ್ಣ ಹುಳಕ್ಕೆ ಇರೋ ಬುದ್ಧಿ ನಿಮ್ಗೆ ಇಲ್ವಲ್ಲ ಮಿಸ್ಟರ್ ನಿಸರ್ಗ. ಅದು ಹಣ್ಣಿನೊಳಗೇ ಕೂತ್ಕೊಂಡು ಎಷ್ಟು ಚೆನ್ನಾಗಿ ಹಣ್ಣನ್ನು ತಿನ್ನುತ್ತೆ, ನೋಡಿ. ನೀವು ನೋಡಿದ್ರ, ಹಣ್ಣನ್ನು ಎತ್ತಿಹಾಕಿಬಿಟ್ರಿ !'' ಸಂಜು 'ನಿಸರ್ಗ ವರ್ಸಸ್ ಹುಳ' ಸ್ಪರ್ಧೆಯಲ್ಲಿ, ಹುಳವೇ ಗೆದ್ದಂತೆ ಮಾತಾಡಿದ.

ನಿಸರ್ಗ ಫಲಾಹಾರ ಸಾಕೆಂದು ಎದ್ದ. ತಟ್ಟೆ ತುಂಬ ವಿವಿಧ ತರಕಾರಿಗಳ ತುಂಡುಗಳನ್ನು ತುಂಬಿಸಿಕೊಂಡು ಬಂದ ಪಮ್ಮಿ ನಿಸರ್ಗನನ್ನು ತಡೆದಳು.

''ಹೀಗೆ ಮಾಡಿದ್ರೆ ಹೇಗೆ ? ನಿಮಗೇಂತ ಸ್ಪೆಶಲ್ಲಾಗಿ ಹಸಿ ತರಕಾರಿ, ಹಣ್ಣು ಹಂಪ್ಲು ತೊಗೊಂಡು ಬಂದ್ರೆ, ತಿನ್ನಲ್ಲಾಂತೀರಲ್ಲ! ಈ ನುಗ್ಗೆ ದಂಟು, ಹಸಿ ಬೆಳ್ಳುಳ್ಳಿ, ಕೋಸಿನ ಪೀಸು, ಗರಿಕೆ ಹುಲ್ಲು, ಹೀರೇಕಾಯಿ ಸಿಪ್ಪೇನೆಲ್ಲ ತಿನ್ನೋರು ಯಾರು ?''

''ನಾನು ಬೆಳಿಗ್ಗೇನೆ ಬಡ್ಕೊಂಡೆ, ಹಾಗಲಕಾಯಿ ತಿನ್ನೀಂತ. ಕೇಳಿದ್ರ ? ಈಗ ನೋಡಿ, ಹೊಟ್ಟೆ ಹುಳ ಸಾಯಲಿಲ್ಲ, ನಿಮ್ಗೆ ಹಸಿವೂ ತಿರುಗಿ ಬರಲಿಲ್ಲ'' ಸಂಜು ಆಯುರ್ವೇದ ಪಂಡಿತರ ಪೋಸ್ ನೀಡಿದ.

''ಸಿಪ್ಪೆಗಳಲ್ಲಿ ಸತ್ವ ಜಾಸ್ತೀಂತ ಎಷ್ಟೊಂದು ತರದ ಸಿಪ್ಪೆಗಳನ್ನ ಒಟ್ಟುಮಾಡಿಕೊಂಡು ಬಂದ್ನಲೋ ನಾನು. ಆದಕ್ಕಾದ್ರೂ ಅವುಗಳನ್ನ ತಿನ್ನೋ'' ಪ್ರಾಣಿ ಅಂಗಲಾಚಿ ಬೇಡಿಕೊಂಡ.

''ಹೋಗ್ಲಿ ಬಿಡಿ, ಅದು ಬೇಡಾಂದ್ರೆ ಒಂದಿಷ್ಟು ಬತ್ತ, ಬೇಳೆಕಾಳುಗಳನ್ನಾದ್ರೂ ಹಾಕ್ತೀನಿ. ತಿಂದ್ಬಿಡಿ. ಇಲ್ಲಾಂದ್ರೆ ಮಧ್ಯರಾತ್ರಿ ಸಂಕಟ ಕಿತ್ತುಕೊಳ್ಳುತ್ತೆ'' ಪಮ್ಮಿ ಉಪಚರಿಸಿದಳು.

''ಇಲ್ಲ... ಇಲ್ಲ... ನನ್ಕೈಲಿ ತಿನ್ನಕ್ಕೆ ಸಾಧ್ಯಾನೇ ಇಲ್ಲ. ಒಂದು ಕಾಳು ಒಳಗೆ ಹೋದ್ರೂ ಹೊಟ್ಟೆ 'ಢಬ್' ಅಂತ ಒಡೆದುಹೋಗುತ್ತೆ, ಅಷ್ಟೊಂದು ತುಂಬಿಹೋಗಿದೆ'' ಎಂದವನೇ ನಿಸರ್ಗ ಎದ್ದು ಓಡಿಯೇಹೋದ.

ಎಲ್ಲರ ದೃಷ್ಟಿಯೂ ಈಗ ಅಂಬಾಬಾಯಿಯ ಮೇಲೆ ಬಿತ್ತು.

''ನಂಗೂ ಯಾಕೋ ಬಾಯಿರುಚಿನೇ ಕೆಟ್ಟುಹೋಗಿದೆ. ಹಸಿವೇನೇ ಇಲ್ಲ. ಸ್ವಾಮೀ... ದೇವ್ರೇ... ನೀನೇ ಗತಿ ನಮ್ಮಪ್ಪ... ತಿರುಪತಿ ತಿಮ್ಮಪ್ಪ'' ಎನ್ನುತ್ತಾ ಬಗ್ಗಿ, ಬೆನ್ನುನೋವು ಬಂದವಳಂತೆ ನಟಿಸುತ್ತಾ ಕೋಣೆಯೊಳಗೆ ಸೇರಿಕೊಂಡಳು.

ರಾತ್ರಿ ನಿದ್ರಾವಶನಾಗಿ ಸುಖಿಸುತ್ತಿದ್ದ ನಿಸರ್ಗನಿಗೆ, ತಾನೇ ಕೈಯ್ಯಾರೆ ಎಲೆಗಳಿಂದಲೇ ತಯಾರಿಸಿ ತಂದ ಅಂಗಿಯನ್ನು ಸಂಜು ಸಂಭ್ರಮದಿಂದ ತೊಡಿಸಿದ. ಮತ್ತೆ ಪ್ರಾಣಿ ಹಾಗೂ ಸಂಜು ಸೇರಿಕೊಂಡು, ಹಾಸಿಗೆ ಮೇಲೆ ಮಲಗಿದ್ದ ನಿಸರ್ಗನನ್ನು ಹೊರತೋಟದಲ್ಲಿದ್ದ ಕಲ್ಲುಬೆಂಚಿಗೆ ರವಾನಿಸಿ, ಒಳಗೆ ಬಂದು ಏನೂ ತಿಳಿಯದವರಂತೆ ಮಲಗಿಬಿಟ್ಟರು.

ಸಾಧಾರಣ ತಕರಾರುಗಳಿಗೆ ನಿಸರ್ಗನ ನಿದ್ರಾಭಂಗ ಮಾಡುವ ತಾಕತ್ತು ಇಲ್ಲದ್ದರಿಂದ, ಆತನಿಗೆ ಇಷ್ಟೆಲ್ಲಾ ನಡೆಯುವಾಗಲೂ ಎಚ್ಚರವಾಗಲೇ ಇಲ್ಲ. ಎಷ್ಟೋ ಹೊತ್ತಿನ ಬಳಿಕ ಗುಂಪು ಗುಂಪು ಸೈನಿಕ ಸೊಳ್ಳೆಗಳ ಗುಯ್ ಗುಯ್ ಸುನಾದ, ಹಿಂಡುಹಿಂಡು ಬೀದಿ ಶ್ವಾನಗಳ ಬೌಬೌ ರಾಗ, ಚಳಿಗಾಳಿಯ ರುಂರುಂ ನಾದಗಳು ಏನೋ ಮೋಡಿ ಮಾಡಿ ನಿಸರ್ಗನನ್ನು ಎಬ್ಬಿಸಿಯೇಬಿಟ್ಟವು.

ತಾನು ಭಿಕ್ಷುಕನಂತೆ ಕಲ್ಲುಬೆಂಚಿನ ಮೇಲೆ ಮಲಗಿದ್ದು ಕಂಡು ಗಾಬರಿಗೊಂಡ ನಿಸರ್ಗ, ಓಡೋಡಿ ಬಂದು ಬಾಗಿಲು ಬಡಿಯತೊಡಗಿದ. ಅವನಿಗಾದ ಗಾಬರಿಯಲ್ಲಿ ಅವನು ಬೆಲ್ ಮಾಡಬೇಕೆನ್ನುವುದನ್ನೂ ಮರೆತಿದ್ದ.

ಮನೆಮಂದಿಯೆಲ್ಲ ಒಬ್ಬೊಬ್ಬರಾಗಿ ಎದ್ದುಬಂದು ಹೊರಬಾಗಿಲ ಬಳಿ ಜಮಾಯಿಸಿದರು.

''ಯಾರು ?'' ಸಂಜು ಪ್ರಶ್ನಿಸಿದ.

''ನಾನು ... ನಾನು ... ಬಾಗಿಲು ತೆಗೀರಿ'' ನಿಸರ್ಗ ಬಡಬಡಿಸಿದ.

''ನಾನು ಅಂದ್ರೆ ಯಾರು ?'' ಪಮ್ಮಿ ಕೇಳಿದಳು.

''ನಾನು ಅಂದ್ರೆ ನಾನೇ ! ಬಾಗಿಲು ತೆಗೀರಿ.''

''ಹೆಸರೇ ಹೇಳಲ್ವಲ್ಲಪ್ಪ'' ಎಂದು ಗೊಣಗುತ್ತ ಬಾಗಿಲನ್ನು ತೆರೆಯಲು ಹೊರಟ ಪ್ರಾಣಿಯನ್ನು ಅಂಬಾಬಾಯಿ ತಡೆದಳು.

''ಹಾಗೆಲ್ಲ ಬಾಗಿಲು ತೆಗೀಬೇಡ್ವೋ. ರಾತ್ರಿ ಭೂತ ಬಂದು ಬಾಗಿಲು ಬಡಿಯುತ್ತೆ. ನಾನು ಬಡ್ಕೊಂಡ್ರೂ ನೀವೆಲ್ಲ ''ನಾಳೆ ಬಾ'' ಅಂತ ಬಾಗಿಲ ಮೇಲೆ ಬರೆಯಲ್ಲ. ಅದನ್ನ ನೋಡಿದ್ರೆ ಭೂತ ಹಾಗ್ದಾಗೇ ಹೋಗಿಬಿಡ್ತಿತ್ತು. ಹೀಗೆ ಬಂದು ಬಾಗಿಲು ಕಿತ್ತು ಬರೋ ಹಾಗೆ ಬಡೀತಿರಲಿಲ್ಲ.''

''ಅಯ್ಯೋ ನಾನು ಭೂತ ಅಲ್ಲ, ನಾನು ನಾನೇ ! ಬೇಗ ಬಾಗಿಲು ತೆಗೀರಿ'' ಎಂಬ ಕೂಗು ಕೇಳಿ,

''ನಾನು ಅಂದ್ರೆ ಯಾರು? ಅತ್ತೆ ಹೇಳೋ ಭೂತನೇನಾ ?'' ಸಂಜು ಹೆದರಿದಂತೆ ನಟಿಸಿದ.

''ಅಯ್ಯೋ ಭೂತ ಅಲ್ಲ, ನಾನು... ಅಂಬತ್ತೆ ತಮ್ಮನ ಮಗ ನಿಸರ್ಗ, ಬಾಗಿಲು ತೆಗೀರಪ್ಪೋ.'' ನಿಸರ್ಗ ಅಂಗಲಾಚಿ ಬೇಡಲು ಶುರು ಮಾಡಿದ.

''ಭೂತ ಸುಳ್ಳು ಹೇಳ್ತಿದೆ. ಬಾಗಿಲು ತೆರೀಬೇಡ'' ಎಂದು ಅಂಬಾಬಾಯಿ ತಡೆಯುತ್ತಿದ್ದರೂ,

''ಭೂತ ಹೇಗಿರುತ್ತೆ ನೋಡೋಣ'' ಎನ್ನುತ್ತ ಬಾಗಿಲು ತೆರೆದೇಬಿಟ್ಟ ಪ್ರಾಣಿ.

ರಭಸದಿಂದ ಒಳನುಗ್ಗಿದ ನಿಸರ್ಗನನ್ನು ಕಂಡು ಅಂಬತ್ತೆ ಹೆದರಿ 'ಕಿಟಾರ್' ಎಂದು ಕಿರುಚಿಕೊಂಡಳು.

''ಭೂತ, ಭೂತ. ಇದು ಚಾಪರ್ಕೆ ಭೂತ ! ಮೈಗೆ ಎಲೆ ಕಟ್ಕೊಂಡಿದೆ ನೋಡಿ. ಅನುಮಾನವೇ ಇಲ್ಲ ಇದು ಚಾಪರ್ಕೆ ಭೂತಾನೇ. ಬಾಗಿಲು ಯಾಕೆ ತೆಗೆದ್ಯೋ ? ಚಾಪರ್ಕೆ ಭೂತ ಒಳಗೇ ಬಂದ್ಬಿಟ್ತಲ್ಲೋ !''

ಅಂಬತ್ತೆಯ ಪ್ರಲಾಪ ಕೇಳಿ, ''ಅಂಬತ್ತೇ, ನಾನು ಅಂಬತ್ತೆ, ನಿಮ್ಮ ತಮ್ಮನ ಮಗ ನಿಸರ್ಗ. ಚಾಪರ್ಕೆ ಭೂತ ಅಲ್ಲ ಅಂಬತ್ತೆ'' ಎಂದು ಗೋಳಾಡಿದ ನಿಸರ್ಗ.

''ಥೂ ಅನಿಷ್ಟದವ್ನೇ ! ಈ ಎಲೆಗಳನ್ನೆಲ್ಲಾ ಯಾಕೆ ಸಿಕ್ಕಿಸಿಕೊಂಡು ಬಂದ್ಯೋ ? ಯಾಕೋ ಅತಿ ಆಯ್ತು ನಿಂದು.'' ಅಂಬತ್ತೆ ಗದರಿಕೊಂಡಳು.

''ನ್ಯಾಚುರಲ್ ಅಂತ ನಿಸರ್ಗ ಎಲೆ ಅಂಗೀನ ಹಾಕ್ಕೊಂಡ ಹಾಗೆ ಕಾಣುತ್ತೆ'' ಸಂಜು ಲೇವಡಿ ಮಾಡಿದ.

''ಅದ್ಸರಿ, ಆದ್ರೆ ನೀನ್ಯಾಕೆ ಹೊರಗೆ ಹೋಗಿ ಮಲಗಿದ್ದು ? ಮನೆ, ಹಾಸಿಗೆ ಎಲ್ಲಾ ನ್ಯಾಚುರಲ್ ಅಲ್ಲಾಂತಾನಾ ?'' ಪ್ರಾಣಿ ಮುಗ್ಧತೆಯನ್ನು ಮೆರೆದ.

''ಕಲ್ಲು ಬೆಂಚೇ ಹಾಸಿಗೆ, ಹುಣ್ಣಿಮೆ ಚಂದ್ರನೇ ಲೈಟು, ಎಲೆಯೇ ಅಂಗಿ, ಆಕಾಶವೇ ಹೊದಿಕೆ, ಆಹಾ ಎಷ್ಟು ನ್ಯಾಚುರಲ್ ! ನಿಸರ್ಗ, ರಿಯಲಿ ಯೂ ಆರ್ ವಂಡರ್‌ಫುಲ್ !'' ಸಂಜು ಕವಿಯಾದ.

ನಿಸರ್ಗನಿಗೆ ಕೋಪ ತಡೆಯಲಾಗಲಿಲ್ಲ. ''ನೀವೇ ಯಾರೋ ನಂಗೆ ಎಲೆ ಕಟ್ಟಿ ಹೊರಗೆ ಮಲಗಿಸಿದ್ದೀರಿ'' ಎಂದು ಹಾರಾಡಿ, ಆಕಾಶ-ಭೂಮಿ ಒಂದು ಮಾಡತೊಡಗಿದ.

ಪ್ರಾಣಿಯೂ ಸುಮ್ಮನಿರಲಿಲ್ಲ. ನಿಸರ್ಗನ ದಾಕ್ಷಿಣ್ಯರಹಿತ ಪ್ರವೃತ್ತಿಯಿಂದಾತ ರೋಸಿಹೋಗಿದ್ದ. ನೆಂಟನ ಹೆಸರಲ್ಲಿ ಬಂದ ಪೆಡಂಭೂತನೇ ಈತನೆಂದು ನಿರ್ಧರಿಸಿದ್ದ. ಆದ್ದರಿಂದ ನಿಸರ್ಗನ ಕೂಗಾಟವನ್ನು ಲೆಕ್ಕಿಸದೆ,

''ನಮ್ಗೇನು ಗ್ರಹಚಾರ ? ನೀನೇ ಏನೇನೋ ಅವತಾರ ಮಾಡಿಕೊಂಡು, ನಮ್ಮ ಮೇಲೆ ಗೂಬೆ ಕೂರಿಸ್ತೀಯ ? ವೆರಿ ಬ್ಯಾಡ್, ವೆರಿ ಬ್ಯಾಡ್ !'' ಎಂದು ಮೂದಲಿಸಿದ.

''ನೀವೇ ಬ್ಯಾಡ್ ! ನಿಮ್ಮ ಮನೆಯವ್ರೇ ಬ್ಯಾಡ್ ! ನಿಮ್ಮ ಸಹವಾಸಾನೇ ಬ್ಯಾಡ್ ! ನಾನು ಈಗಿಂದೀಗ್ಲೇ ಸಿಕ್ಕಿದ ಬಸ್ಸು ಹಿಡಿದು ಊರಿಗೆ ಹೋಗಿಬಿಡ್ತೀನಿ'' ಎಂದು ಎಗರಾಡಿ, ಬಿರ್ರನೇ ಹೋಗುತ್ತಿದ್ದ ನಿಸರ್ಗನಿಗೆ ಕೇಳುವಂತೆ ಪ್ರಾಣಿ ಕೂಗಿ ಹೇಳಿದ...

''ಬಸ್ಸು ಬೇಡ ನಿಸರ್ಗ.
ಅದು ಮ್ಯಾನ್‌ಮೇಡ್.
ಯಾವುದಾದ್ರೂ ಮರದ
ಬಿಳಲು ಸಿಗುತ್ತಾ ನೋಡು...!
ಗುಡ್ ಲಕ್ !''

ಸತ್ಯವತಿ ಹರಿಕೃಷ್ಣನ್
'ಕೌಸ್ತುಭ'
ಮೈದಾನ ರಸ್ತೆ, ಸುರತ್ಕಲ್
ಮಂಗಳೂರು - ೫೭೫ ೦೧೪





# ಹೀಗೊಂದು ಸಾಹಸೋದ್ಯಮ

ತನ್ನ ತಾಯಿಯಿಂದ ಬಳುವಳಿಯಾಗಿ ಪಡೆದ ನಾಲ್ಕು ಲಕ್ಷ ರೂಬೆಲ್‌ಗಳಲ್ಲಿ ಆಂಡ್ರೋ ಒಂದು ಪುಸ್ತಕದ ಅಂಗಡಿಯನ್ನು ತೆರೆಯಲು ನಿರ್ಧರಿಸಿದ. ಆ ಊರು ಅಜ್ಞಾನ ಹಾಗೂ ಪೂರ್ವಗ್ರಹದಲ್ಲಿ ಕೊಳೆಯುತ್ತಿದ್ದುದರಿಂದ ಅಂತಹ ಒಂದು ಪುಸ್ತಕಾಲಯ ಅತ್ಯಂತ ಜರೂರಾಗಿದ್ದಿತು. ವಯಸ್ಸಾದವರು ಸಾರ್ವಜನಿಕ ಶೌಚಾಲಯಗಳಿಗೆ ಭೇಟಿ ನೀಡುವುದು ಬಿಟ್ಟರೆ ಬೇರೇನೂ ಮಾಡುತ್ತಿರಲಿಲ್ಲ. ಸರ್ಕಾರಿ ನೌಕರರು ಬರೀ ಇಸ್ಪೀಟು ಆಡುತ್ತಾ ಕುಡಿತದಲ್ಲಿ ತೊಡಗಿದ್ದರೆ, ಹೆಂಗಸರು ಬರೀ ಹರಟೆ ಹೊಡೆಯುತ್ತಾ ಕಾಲ ಕಳೆಯುತ್ತಿದ್ದರು. ಯುವಕರು ಉಂಡಾಡಿ ಗುಂಡರಂತೆ, ಮದುವೆಯಾಗದ ಹುಡುಗಿಯರಿಗೆ ಬರೀ ಮದುವೆಯದೇ ಚಿಂತೆ, ಅದೂ ಇದೂ ಮೇಯುತ್ತಾ ಕಾಲ ಕಳೆಯುತ್ತಿದ್ದರು.

''ಒಳ್ಳೆಯ ಐಡಿಯಾ, ಹೆಚ್ಚು ಐಡಿಯಾಗಳು ಸಿಗುತ್ತವೆ, ಅದೇ ಬೇಕಾಗಿರೋದು'' ಎಂದು ಅವನು ಆಲೋಚಿಸಿದ. ಅಂಗಡಿಯೊಂದನ್ನು ಬಾಡಿಗೆಗೆ ಹಿಡಿದು, ಮಾಸ್ಕೊ ನಗರಕ್ಕೆ ಹೋಗಿ ಥಂಡಿಯಾಗಿ ಪುಸ್ತಕಗಳನ್ನು ತಂದ, ಹಳೆಯ ಮತ್ತು ಹೊಸ ಲೇಖಕರದ್ದು. ಅಷ್ಟೇ ಪಠ್ಯಪುಸ್ತಕಗಳನ್ನೂ ಹೊತ್ತು ತಂದು ಎಲ್ಲವನ್ನೂ ನೀಟಾಗಿ ಕಪಾಟಿನಲ್ಲಿ ಜೋಡಿಸಿದ.

ಆದರೆ ಮೊದಲ ಮೂರು ವಾರಗಳಲ್ಲಿ ಯಾವುದೇ ಗಿರಾಕಿಗಳು ಬರಲಿಲ್ಲ. ಆಂಡ್ರೂ ಕೌಂಟರ್ ಹಿಂದೆ ಕುಳಿತು ತನ್ನ ನೆಚ್ಚಿನ ಪುಸ್ತಕಗಳನ್ನು ಓದಿ ಉನ್ನತ ವಿಚಾರಗಳನ್ನು ಮನತುಂಬಿಕೊಂಡ. ಯಾವಾಗಲಾದರೂ ಮೀನು ಮತ್ತು ಇತರೆ ತಿನಿಸುಗಳನ್ನು ಕೊಳ್ಳುವ ಬಗ್ಗೆ ಯೋಚಿಸಿದಾಗ ಅವೆಲ್ಲ ಎಷ್ಟು ಲಘು ಆಲೋಚನೆ ಎಂದನ್ನಿಸುತ್ತಿತ್ತು.

ಪ್ರತಿ ದಿನ ಓರ್ವ ಮಹಿಳೆ ಚಳಿಯಲ್ಲಿ ನಡುಗುತ್ತ ಅವನ ಅಂಗಡಿಗೆ ನುಗ್ಗಿ ವೈನ್ ಅನ್ನು ಕೊಡಿ ಎಂದು ಕೇಳಿದಾಗ ''ನೀನು ಬಂದಿರುವುದು ಯಾವ ಅಂಗಡಿಗೆ ಅಂತ ಗೊತ್ತ ?'' ಎಂದು ಹೆಮ್ಮೆಯಿಂದ ಕೇಳುತ್ತಿದ್ದ.

ಯಾವಾಗಲಾದರೂ ಅವನ ಮಿತ್ರರು ಬಂದಾಗ, ಅವನು ನಿಗೂಢ ಮುಖಚರ್ಯೆಯಿಂದ ಯಾವುದೋ ಮೂಲೆಯಲ್ಲಿರುವ ಹಳೆಯ ಗ್ರಂಥವೊಂದನ್ನು ತೆಗೆದು ಧೂಳು ಕೊಡವಿ, ಆ ರೀತಿಯ ಮತ್ತಷ್ಟು ಪುಸ್ತಕಗಳು ಇನ್ನೂ ಇವೆ ಆದರೆ ತೆಗೆಯಲು ಸಾಧ್ಯವಿಲ್ಲ ಎಂದು ಹೇಳುತ್ತಿದ್ದ.

''ಹೌದಪ್ಪಾ, ಮುದುಕಪ್ಪ... ನೀನು ಇದನ್ನು ಓದಿದರೆ ನಿನ್ನ ತಲೆ ನಿಮಿರತ್ತೆ ನಿಜವಾಗಲೂ.''

ಮೂರು ವಾರಗಳ ನಂತರ ಮೊದಲನೇ ಗಿರಾಕಿ ಬಂದ. ಧಡೂತಿ ನೆರೆಗೂದಲ ಮನುಷ್ಯ, ನೋಡಕ್ಕೆ ಜಮೀನುದಾರನ ತರಹ ಇದ್ದ. ಬೇಕಾದ ಪುಸ್ತಕ ಕೇಳಿ, ''ಸ್ಲೇಟು, ಪೆನ್ಸಿಲ್ ಇದೆಯಾ'' ಎಂದು ವಿಚಾರಿಸಿದ.

''ನಾನು ಅವನ್ನು ಇಟ್ಟಿಲ್ಲ.''

''ಹೇ ಇಡಬೇಕಪ್ಪ, ಇಟ್ಟಿಲ್ಲ ಅಂದರೆ ... ಅದನ್ನು ತರಕ್ಕೆ ನಾನು ಮಾರ್ಕೆಟ್‌ಗೆ ಹೋಗಕ್ಕಾಗಲ್ಲ.''

''ಈಗ ನಾನು ಸ್ಲೇಟು ಪೆನ್ಸಿಲ್ ಅನ್ನು ಇಡಬೇಕು'' ಅಂತ ಆಂಡ್ರೋ ಆಲೋಚಿಸಿದ, ಆ ಗಿರಾಕಿ ಹೋದ ಮೇಲೆ. ''ಇಂತಹ ಜಾಗದಲ್ಲಿ ಯಾರೂ ಬಹಳ ಕಿರಿದಾಗಿ ಪ್ರಾವೀಣ್ಯ ಪಡೆಯಬಾರದು. ಶಿಕ್ಷಣಕ್ಕೆ ಸಂಬಂಧಿಸಿದ ಎಲ್ಲವನ್ನೂ ಮಾರಾಟ ಮಾಡಬೇಕು, ಒಂದಲ್ಲಾ ಒಂದು ಥರದಲ್ಲಿ.''

ಅವನು ಮಾಸ್ಕೋ ನಗರಕ್ಕೆ ಬರೆದಿದ್ದೆ ತಡ, ಒಂದು ತಿಂಗಳಲ್ಲಿ ಅವನ ತೋರು ಕಿಟಕಿಯ ತುಂಬಾ ಪೆನ್ನು ಪೆನ್ಸಿಲ್ಲು, ಎಕ್ಸರ್‌ಸೈಜ್ ಪುಸ್ತಕ, ಸ್ಲೇಟುಗಳು ಹಾಗೂ ಇತರೆ ಶಾಲಾ ಅಗತ್ಯಗಳು ತುಂಬಿದವು. ವಿದ್ಯಾರ್ಥಿ ವಿದ್ಯಾರ್ಥಿನಿಯರು ಆಗಾಗ ಅಂಗಡಿಗೆ ಬರಲಾರಂಭಿಸಿದರು, ಅದರಿಂದ ಒಳ್ಳೇ ಲಾಭವು ಬರಲಾರಂಭಿಸಿತು. ಒಂದು ದಿನ ಓರ್ವ ಮಧ್ಯ ವಯಸ್ಸಿನ ಹೆಂಗಸು ಅಂಗಡಿಗೆ ಧಾವಿಸುತ್ತಿದ್ದಂತೆ, ''ನಿಂಗೆ ಬೇಕಾದ್ದು ಇಲ್ಲಿಲ್ಲ'' ಅಂತ ಹೇಳಬೇಕೆನಿಸುವಷ್ಟರಲ್ಲಿ, ಆಕೆ ''ಒಂದು ಹತ್ತು ರೂಬೆಲ್ ಪೇಪರ್ ಹಾಗೂ ಎಂಟು ಸ್ಟಾಂಪ್‌ಗಳನ್ನು ಕೊಡಿ'' ಅಂತ ಕೇಳಿದಳು.

ಆನಂತರ ಆಂಡ್ರೋ ಅಂಚೆ ಹಾಗೂ ರಶೀದಿ ಸ್ಟಾಂಪ್‌ಗಳನ್ನು ಹಾಗೂ ಛಾಪಾಕಾಗದವನ್ನು ತಂದಿರಿಸಿದ. ಅಂಗಡಿ ತೆರೆದ ಎಂಟು ತಿಂಗಳ ನಂತರ ಪೆನ್ನುಗಳನ್ನು ಕೊಳ್ಳಲು ಬಂದ ಓರ್ವ ಮಹಿಳೆ ಶಾಲಾಮಕ್ಕಳ ಬ್ಯಾಗ್‌ಗಳು ಇದೆಯಾ ಎಂದು ಕೇಳಿದರು.

''ಇಲ್ಲಾ ಮೇಡಂ.''

''ಎಂಥಾ ಕೆಲಸ ಮಾಡಿದಿರಿ, ಹೋಗಲೀ ಇರೋ ಬೊಂಬೆಗಳನ್ನಾದರೂ ತೋರಿಸಿ ಕಡಿಮೆ ಬೆಲೆಗೆ.''

''ಬೊಂಬೆಗಳನ್ನು ಇಟ್ಟಿಲ್ಲಮ್ಮ'' ಅವನು ಹೇಳಿದ.

ಅವನು ಮಾಸ್ಕೋ ನಗರಕ್ಕೆ ಹೋಗಿ ಸ್ಕೂಲ್ ಬ್ಯಾಗುಗಳನ್ನು ಬೊಂಬೆಗಳು, ಡ್ರಮ್‌ಗಳು, ಮೌಥ್ ಆರ್ಗನ್, ಚೆಂಡುಗಳು ಇತ್ಯಾದಿಗಳನ್ನು ತಂದ.

''ಅದೆಲ್ಲಾ ನಿಷ್ಪ್ರಯೋಜಕ'' ಮಿತ್ರರಿಗೆ ಹೇಳಿದ. ''ಆದರೆ ನೋಡಿ ಪಾಠೋಪಕರಣ ಹಾಗೂ ಶೈಕ್ಷಣಿಕ ಬೊಂಬೆಗಳನ್ನು ತರುತ್ತೇನೆ. ನನ್ನ ಶೈಕ್ಷಣಿಕ ವಿಭಾಗ ತುಂಬಿ ಹೋಗುತ್ತೆ, ವಿಜ್ಞಾನದ್ದೂ ಸೇರಿ.''

ಅವನು ಎಲ್ಲಾ ತರಹದ ಕ್ರೀಡಾ ಸಾಮಗ್ರಿಗಳು, ತೀಕ್ಷ್ಣಮತಿಯರಿಗೆ ಬೇಕಾದ ಆಟದ ವಸ್ತುಗಳು ಎಲ್ಲವನ್ನೂ ತರಿಸಿದ. ಆ ದಾರಿಯಲ್ಲಿ ಓಡಾಡುವ ಊರಿನ ಜನ ಅಲ್ಲಿಯ ಬೈಸಿಕಲ್ಲುಗಳನ್ನು ನೋಡಿ ಆಶ್ಚರ್ಯಚಕಿತರಾದರು. ಒಂದು ದೊಡ್ಡದು ಮತ್ತೊಂದು ಚಿಕ್ಕದು. ವ್ಯಾಪಾರ ಅದ್ಭುತವಾಗಿ ಕುದುರಿತು. ಕ್ರಿಸ್‌ಮಸ್ ಅಲಂಕಾರ ಸಾಮಗ್ರಿಯನ್ನು ಮಾರುವುದಾಗಿ ಬೋರ್ಡು ಹಾಕಿದಾಗ ವ್ಯಾಪಾರ ಇನ್ನೂ ಜೋರಾಯಿತು.

''ಸ್ವಲ್ಪ ಆರೋಗ್ಯದ ಬಗ್ಗೆಯೂ ಏನಾದರೂ ಸಿಗತ್ತೆ ಅಂತ ಹಾಕೋಣವೆ ?'' ತನ್ನ ಮಿತ್ರರನ್ನು ಕೇಳಿದ. ಕೈ ಉಜ್ಜುತ್ತಾ ಹೇಳಿದ, ''ಮುಂದಿನ ಸಾರಿ ಹೋಗುವವರಿಗೂ ತಡಿಯಿರಿ. ಫಿಲ್ಟರ್‌ಗಳು, ವೈಜ್ಞಾನಿಕ ಗ್ಯಾಜೆಟ್‌ಗಳನ್ನು ತರ್ತೀನಿ. ಜನರಿಗೆ ಅದರ ಬಗ್ಗೆ ಹುಚ್ಚು ಹಿಡಿಯೋ ಹಾಗೆ

**ಆಂಟನ್ ಚೆಕಾಫ್**

ಆಗಬೇಕು. ವಿಜ್ಞಾನವನ್ನು ಯಾರೂ ನಿರ್ಲಕ್ಷಿಸಬಾರದು.''

ಸ್ವಲ್ಪ ಲಾಭ ಬಂದ ಮೇಲೆ ಮಾಸ್ಕೋ ನಗರಕ್ಕೆ ಹೋಗಿ ಐದು ಸಾವಿರ ರೂಬೆಲ್‌ಗೆ ವಿಭಿನ್ನ ರೀತಿಯ ವಸ್ತುಗಳನ್ನು ಕೊಂಡು ತಂದಿರಿಸಿದ.

ಅವುಗಳಲ್ಲಿ ಫಿಲ್ಟರ್‌ಗಳು, ಉತ್ಕೃಷ್ಟ ಲ್ಯಾಂಪ್‌ಗಳು, ಗಿಟಾರ್‌ಗಳೂ ಸೇರಿದ್ದವು. ಮಕ್ಕಳ ಒಳ ಉಡುಪುಗಳೂ, ಪರ್ಸ್‌ಗಳೂ, ಪ್ರಾಣಿ ಬೊಂಬೆಗಳೂ ಇಲ್ಲದಿರಲಿಲ್ಲ. ಐದು ನೂರು ರೂಬೆಲ್‌ಗೆ ಪಿಂಗಾಣಿ ಸೆಟ್‌ಗಳನ್ನು ತಂದ ಖುಷಿಯಿಂದ. ಏಕೆಂದರೆ ಸುಂದರವಾದ ವಸ್ತುಗಳು ಒಳ್ಳೆಯ ಅಭಿರುಚಿಯನ್ನು ನಡವಳಿಕೆಯನ್ನು ಉಂಟು ಮಾಡುತ್ತವೆ. ಅಲ್ಲಿಂದ ಊರಿಗೆ ಹಿಂತಿರುಗಿದಾಗ, ಎಲ್ಲಾ ವಸ್ತುಗಳನ್ನು ನೀಟಾಗಿ ಕಪಾಟಿನಲ್ಲಿ ಜೋಡಿಸಿದ. ಮೇಲಿನ ಕಪಾಟಿನಲ್ಲಿದ್ದುದನ್ನು ತೆಗೆಯಲು ಒಮ್ಮೆ ಹತ್ತಿದಾಗ ಏನೋ ಗಡಿಬಿಡಿಯಾಗಿ ಮೆಚ್ಚಿನ ಲೇಖಕನ ಹತ್ತು ಸಂಪುಟಗಳು ಒಂದರ ಮೇಲೊಂದು ಕೆಳಗೆ ಬಿದ್ದವು. ಒಂದು ಸಂಪುಟ ಅವನ ತಲೆಗೆ ತಗುಲಿತು. ಮತ್ತೊಂದು ಲ್ಯಾಂಪ್‌ಗಳ ಮೇಲೆ ಬಿದ್ದು ಗಾಜನ್ನು ಒಡೆಯಿತು.

''ಎಂಥಾ ದೊಡ್ಡ ಪುಸ್ತಕಗಳನ್ನು ಬರೀತಾರೆ'' ಅಂತ ಗೊಣಗಿದ. ಎಲ್ಲಾ ಪುಸ್ತಕಗಳನ್ನು ಕೈಗೆತ್ತಿಕೊಂಡು ಬಿಗಿಯಾಗಿ ಕಟ್ಟಿ ಕೌಂಟರ್ ಕೆಳಗಡೆ ಇಟ್ಟ. ಒಂದೆರಡು ದಿನಗಳ ನಂತರ, ಪಕ್ಕದ ಅಂಗಡಿಯ ವ್ಯಾಪಾರಿಗೆ ಏನೋ ಶಿಕ್ಷೆಯಾಗಿ ತನ್ನ ಅಂಗಡಿಯನ್ನೇ ಬಿಟ್ಟುಕೊಡಬೇಕಾಗಿ ಬಂತು. ಖುಷಿಯಿಂದ ಆಂಡ್ರೋ ಆ ಅಂಗಡಿಯನ್ನೂ ತೆಗೆದುಕೊಂಡುಬಿಟ್ಟ. ಮಧ್ಯದ ಗೋಡೆಯನ್ನು ಒಡೆದು, ಎರಡು ಅಂಗಡಿಗಳನ್ನೂ ಸೇರಿಸಿ ಮತ್ತಷ್ಟು ಸಾಮಾನುಗಳನ್ನು ತರಿಸಿದ. ಪಕ್ಕದ ಅಂಗಡಿಯಿಂದ ಚಹಾ ಸಕ್ಕರೆ ಮುಂತಾದುವನ್ನು ಕೊಳ್ಳುತ್ತಿದ್ದುದರಿಂದ ಆಂಡ್ರೋ ಆ ದಿನಸಿಯನ್ನು ಪೇರಿಸಲು ಹಿಂದೇಟು ಹಾಕಲಿಲ್ಲ.

ಈಗ ಅವನು ಊರಿನ ದೊಡ್ಡ ವ್ಯಾಪಾರಿಗಳಲ್ಲಿ ಒಬ್ಬನಾಗಿದ್ದಾನೆ. ಅವನಂತೂ ಪಿಂಗಾಣಿ, ತಂಬಾಕು, ಸೋಪು, ಬಟ್ಟೆ ಹೊಲಿಯುವ ಸಾಧನ, ಸಣ್ಣಪುಟ್ಟ ಉಡುಪುಗಳು, ಗಾಜಿನ ಸಾಮಾನುಗಳನ್ನು ಇಟ್ಟುಕೊಂಡು ವ್ಯಾಪಾರ ಮಾಡುತ್ತಾನೆ. ಒಂದು ವೈನ್ ವ್ಯಾಪಾರವನ್ನು ಆರಂಭಿಸಿ, ಕುಟುಂಬದವರಿಗೆ ಹಾಗೂ ಒಂಟಿಯಾಗಿ ಬಂದವರಿಗೆ ಪ್ರತ್ಯೇಕ ಕ್ಯಾಬಿನ್‌ಗಳನ್ನು ತೆರೆದನು.

ಒಂದು ಕಾಲದಲ್ಲಿ ಇಟ್ಟಿದ್ದ ಪುಸ್ತಕಗಳು ರಿಯಾಯಿತಿ ದರದಲ್ಲಿ ಮಾರಾಟವಾಗಿದ್ದವು.

ಕೆಲವೊಂದು ಸಮಾರಂಭಗಳಲ್ಲಿ ಆಂಡ್ರೋನ ಹಳೆಯ ಮಿತ್ರರು ಪ್ರಗತಿ, ಸಾಹಿತ್ಯ ಹಾಗೂ ಇತರ ಉನ್ನತ ವಿಚಾರಗಳ ಬಗ್ಗೆ ಮಾತನಾಡುತ್ತಾರೆ. ''ಇತ್ತೀಚಿನ ಯೂರೋಪಿಯನ್ ಹೆರಾಲ್ಡ್ ಓದಿದ್ದೀಯ'' ಅಂತಾ ಅವರು ಕೇಳುತ್ತಾರೆ. ''ಇಲ್ಲ ಓದಿಲ್ಲ'' ಅಂತಾ ಅವನು ಉತ್ತರಿಸುತ್ತಾನೆ, ತನ್ನ ಗಡಿಯಾರದ ಚೈನಿನ ಮೇಲೆ ಬೆರಳನ್ನಾಡಿಸುತ್ತಾ.

''ಅದರ ಬಗ್ಗೆ ನನಗೆ ಆಸಕ್ತಿ ಇಲ್ಲ; ಅದಕ್ಕಿಂತ ಹೆಚ್ಚು ಪ್ರಮುಖವಾದ ವಿಷಯಗಳ ಬಗ್ಗೆ ಯೋಚಿಸಬೇಕಾಗಿದೆ'' ಎಂದು ಹೇಳುತ್ತಾನೆ.

ಮೂಲ : **ಆಂಟನ್ ಚೆಕಾಫ್**
ಕನ್ನಡಕ್ಕೆ : **ಎಂ. ಎಸ್. ರಘುನಾಥ್**
ಹೆಚ್.ಐ.ಜಿ.-೪೦, ೬ನೇ ಮುಖ್ಯರಸ್ತೆ, ಕೆ.ಹೆಚ್.ಬಿ. ಕಾಲೋನಿ,
೨ನೇ ಹಂತ, ಬಸವೇಶ್ವರನಗರ, ಬೆಂಗಳೂರು - ೫೬೦ ೦೭೯

## ನೀಗದ ಬರ



ನನ್ನ ಅಮ್ಮೀಜಾನ್
ತನ್ನ ರೆಟ್ಟೆಯ ಬಲದಿಂದ
ತಟ್ಟಿದ ರೊಟ್ಟಿಯ ಗಾತ್ರದಲ್ಲಿರುವ
ಬೆಂಕಿಯಂತೆ ಆ
ಸೂರ್ಯನಿರುವಾಗ
ಅವನಿಗೆ ಸವಾಲ್
ಭೋಟುದ್ದ ಹೊಟ್ಟೆಯಲ್ಲಿ
ಹಸಿವೆಯೆಂಬ ಬೆಂಕಿಯಲ್ಲಿ
ಉರಿಯುತ್ತಿರುವಾಗ
ಡೊಳ್ಳು ಹೊಟ್ಟೆ ನೋಡಿ
ಅತ್ತವರೆಷ್ಟೋ
ಬೆನ್ನಿಗಂಟಿದ ಹೊಟ್ಟೆಯ ನೋಡಿ
ನಕ್ಕವರೆಷ್ಟೋ
ಎಣಿಕೆ ಮಾಡಲು ಶಕ್ತಿಯಿಲ್ಲ
ಕಣ್ಣಿಗೆ ಶಕ್ತಿಯಿದ್ದರೂ
ಶತ-ಶತಮಾನದ
ಗುಲಾಮಗಿರಿಯಿಂದ
ತಲೆ ಬಾಗಿತೋ ?
ಆದರೆ...
ಆಕಾಶದಲ್ಲಿ ಉರಿಯುವ
ಸೂರ್ಯನಿಗೆ
ನೋಡುತ್ತಿರುವಂತೆ
ಹರಿದು ತಿನ್ನುವ

ಹದ್ದು ಹಾರಿತು
ಸೂರ್ಯ ಕಾಣಲಿಲ್ಲ
ಹೊಟ್ಟೆಯಲ್ಲಿನ ಬೆಂಕಿಯೂ
ಶಮನವಾಗಲಿಲ್ಲ
ನನ್ನ ಕಣ್ಣ ಗುಡ್ಡೆ
ಸೂರ್ಯ ನುಂಗಿದನೊ
ಅಥವಾ ಸೂರ್ಯನ
ಕಣ್ಣಗುಡ್ಡೆ ಹದ್ದು
ಹರಿದು ತಿಂದಿತೋ
ತಿಳಿಯಲಿಲ್ಲ.
ಹಸಿದ ಹೊಟ್ಟೆಯಲ್ಲಿ
ಬೆಂಕಿ ನಂದಿಸುವ
ಅಗ್ನಿ ಶಾಮಕದಳ
ಇನ್ನೂ ಬರಲಿಲ್ಲ
ಹೊಟ್ಟೆಯ ಬರ
ನೀಗಲಿಲ್ಲ.

**ಎ. ಎಸ್. ಮಕಾನದಾರ**
ದ್ವಿತೀಯ ದರ್ಜೆ ಸಹಾಯಕ, ಪ್ರಧಾನ ದಿವಾಣಿ ನ್ಯಾಯಾಲಯ
(ಕಿರಿಯ ವಿಭಾಗ), ಗದಗ - ೫೮೨ ೧೦೧



ಇದು ಐತಿಹಾಸಿಕ! ಶಿಕ್ಷಣದಲ್ಲಿ ಕ್ರಾಂತಿ! ಬಡ ಮಕ್ಕಳಿಗೆ ವರದಾನ! ಇತ್ಯಾದಿ , ಇತ್ಯಾದಿ. ಇದು ಏಪ್ರಿಲ್ ತಿಂಗಳ ಪ್ರಾರಂಭದಲ್ಲಿ ಸುದ್ದಿ ಮಾಧ್ಯಮಗಳಲ್ಲಿ ಶಿಕ್ಷಣದ ಹಕ್ಕಿನ ಕಾಯ್ದೆ ಬಗ್ಗೆ ಬಂದ ಅತೀ ವೈಭವೀಕರಿಸಿದ ಶೀರ್ಷಿಕೆಗಳು. ಶಿಕ್ಷಣ ಒಂದು ಮೂಲಭೂತ ಹಕ್ಕಾಗಿ ಏಪ್ರಿಲ್ ಒಂದರಿಂದ ಜಾರಿಯಾದ ಹಿನ್ನೆಲೆಯಲ್ಲಿ ಆಳುವ ಕೇಂದ್ರಸರ್ಕಾರ ಜನರಲ್ಲಿ ಭ್ರಮೆಗಳನ್ನು ಹುಟ್ಟಿಸುವ ಮೂಲಕ ಮತ ಬ್ಯಾಂಕಿನ ರಾಜಕೀಯಕ್ಕೆ, ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತ್ರಿ ಕಾಯ್ದೆ ನಂತರ ಆಯ್ಕೆ ಮಾಡಿಕೊಂಡ ಮತ್ತೊಂದು ವಿಷಯವೇ ಶಿಕ್ಷಣದ ಹಕ್ಕು ಕಾಯ್ದೆ ೨೦೦೯.

ಹಿರಿಯ ಚಿಂತಕ ನೋಮ್ ಚೋಮ್‌ಸ್ಕಿ ಹೇಳುವಂತೆ ಪ್ರಜಾಪ್ರಭುತ್ವದಲ್ಲಿ ಇಂದಿನ ಆಳುವ ವರ್ಗ ಒಮ್ಮತವನ್ನು **'ಹುಟ್ಟುಹಾಕುತ್ತದೆ'**. ಶಿಕ್ಷಣದ ಹಕ್ಕಿನ ವಿಚಾರದಲ್ಲಿ ನಡೆಯುತ್ತಿರುವ ರಾಜಕೀಯವೂ ಕೂಡ ಇದಕ್ಕೆ ಅಪವಾದವಲ್ಲ. ಈ ಸಂದರ್ಭದಲ್ಲಿ ಶಿಕ್ಷಣದ ಹಕ್ಕಿನ ಹಿಂದಿರುವ ಸತ್ಯಾಸತ್ಯತೆಗಳನ್ನು ಜನರ ಮುಂದಿಡುವ ಮೂಲಕ ಒಂದು ಆರೋಗ್ಯಕರ ವಸ್ತುನಿಷ್ಠ ಚರ್ಚೆಗೆ ವೇದಿಕೆ ಒದಗಿಸುವ 'ಹೊಸತು' ಪತ್ರಿಕೆಯ ಕ್ರಮ ಸ್ವಾಗತಾರ್ಹ. ಈ



# ಪ್ರಗತಿಪರ ಮಾನವ ಹಕ್ಕುಗಳ ಯುಗದಲ್ಲೊಂದು ಪ್ರತಿಗಾಮಿ ಶಿಕ್ಷಣ ಕಾಯ್ದೆ

ಡಾ|| ನಿರಂಜನಾರಾಧ್ಯ ವಿ. ಪಿ.

ಹಿನ್ನೆಲೆಯಲ್ಲಿ, ಮೂಲಭೂತ ಹಕ್ಕಿನ ಕೆಲವು ಮೂಲಭೂತ ಅಂಶಗಳನ್ನು ಈ ಲೇಖನದ ಮೂಲಕ ಓದುಗರ ಅಭಿಪ್ರಾಯ ಮತ್ತು ಚರ್ಚೆಗೆ ಮುಂದಿಡುತ್ತಿದ್ದೇನೆ.

**"ಈ ದೇಶದ ಪ್ರತಿಯೊಬ್ಬ ನಾಗರಿಕನಿಗೂ ಜೀವಿಸುವ ಹಕ್ಕಿದೆ. ಜೀವಿಸುವ ಹಕ್ಕು ಒಂದು ಮೂಲಭೂತ ಹಕ್ಕು. ಗೌರವಾನ್ವಿತ ಜೀವನ ನಡೆಸಲು, ಪ್ರತಿಯೊಬ್ಬ ನಾಗರಿಕನಿಗೂ ಕನಿಷ್ಠ ಶಿಕ್ಷಣದ ಅವಶ್ಯಕತೆ ಇದೆ. ಆದ್ದರಿಂದಲೇ, ಶಿಕ್ಷಣ ಜೀವಿಸುವ ಹಕ್ಕಿನ ಅವಿಭಾಜ್ಯ ಅಂಗವಾಗಿದ್ದು, ಅದರಿಂದಲೇ ಹರಿದುಬರುತ್ತದೆ. ಜೀವಿಸುವ ಹಕ್ಕು ಮೂಲಭೂತ ಹಕ್ಕಾದರೆ, ಶಿಕ್ಷಣ ಪಡೆಯುವ ಹಕ್ಕು ಕೂಡ ಪ್ರತಿಯೊಬ್ಬ ನಾಗರಿಕನ ಮೂಲಭೂತ ಹಕ್ಕು."**

ಮೇಲಿನ ಖಂಡ ಸರ್ವೋಚ್ಚ ನ್ಯಾಯಾಲಯವು ೧೯೯೩ರಲ್ಲಿ ಉನ್ನಿಕೃಷ್ಣನ್‌ರವರ ಪ್ರಕರಣಕ್ಕೆ ಸಂಬಂಧಿಸಿದಂತೆ ನೀಡಿದ ಐತಿಹಾಸಿಕ ತೀರ್ಪಿನಿಂದ ಉದ್ಧೃತ. ಭಾರತದ ಶಾಲಾ ಶಿಕ್ಷಣದ ಇತಿಹಾಸದಲ್ಲಿ ಇದೊಂದು ಐತಿಹಾಸಿಕ ತೀರ್ಪಾಗಿದ್ದು, ಶಾಲಾ ಶಿಕ್ಷಣದ ಸಾರ್ವತ್ರೀಕರಣದಲ್ಲಿ ಒಂದು ಹೊಸ ಮೈಲಿಗಲ್ಲನ್ನು ಹುಟ್ಟುಹಾಕಿತು. ನ್ಯಾಯಾಲಯದ ಈ ತೀರ್ಪು ಮಕ್ಕಳಿಗೆ ಉಚಿತ ಮತ್ತು ಕಡ್ಡಾಯ ಶಿಕ್ಷಣವನ್ನು ಒಂದು ಮೂಲಭೂತ ಹಕ್ಕೆಂದು ಘೋಷಿಸಿ ೧೪ನೇ ವಯಸ್ಸಿನವರೆಗೆ ಅದನ್ನು ನೀಡುವ ಪೂರ್ಣ ಜವಾಬ್ದಾರಿಯು ಸರ್ಕಾರದ ಮೇಲಿದ್ದು ೧೪ ವರ್ಷದ ನಂತರ ರಾಜ್ಯದ ಆರ್ಥಿಕ ಇತಿಮಿತಿಗಳನ್ನು ಅವಲಂಬಿಸಿರುತ್ತದೆ ಎಂದು ಸ್ಪಷ್ಟ ಮಾತುಗಳಲ್ಲಿ ಮನದಟ್ಟು ಮಾಡಿಕೊಟ್ಟಿತು. ಈ ತೀರ್ಪು ಸ್ವಾತಂತ್ರ್ಯಾನಂತರದ ಭಾರತದಲ್ಲಿ ಸಂವಿಧಾನದ ಆಶಯವಾಗಿದ್ದ ಉಚಿತ ಮತ್ತು ಕಡ್ಡಾಯ ಶಿಕ್ಷಣದ ಆಶಯವನ್ನು ಈಡೇರಿಸಲು ಅಗತ್ಯ ರಾಜಕೀಯ ಇಚ್ಛಾಶಕ್ತಿಯನ್ನು ಪ್ರದರ್ಶಿಸದೆ ಅಸಡ್ಡೆ ತೋರಿದ ಆಳುವ ಸರ್ಕಾರಗಳಿಗೆ ಒಂದು ರೀತಿಯ ಗಂಭೀರ ಎಚ್ಚರಿಕೆಯೆಂದೇ ಅರ್ಥೈಸಬಹುದಾಗಿದೆ.

ಸರ್ವೋಚ್ಚ ನ್ಯಾಯಾಲಯದ ಈ ತೀರ್ಪನ್ನು ನುಂಗಲಾರದ ಬಿಸಿತುಪ್ಪವೆಂದೇ ಭಾವಿಸಿದ ಸರ್ಕಾರವು ಸಂವಿಧಾನಕ್ಕೆ ತಿದ್ದುಪಡಿ ಮಾಡುವ ನೆಪದಲ್ಲಿ ಐತಿಹಾಸಿಕ ತೀರ್ಪನ್ನು ತಿಳಿಗೊಳಿಸುವ ಎಲ್ಲ ಹುನ್ನಾರಗಳನ್ನು ಮಾಡಿತು. ಈ ಪ್ರಕ್ರಿಯೆಯ ಭಾಗವಾಗಿ ಕೇಂದ್ರ ಸರ್ಕಾರವು ಸಂವಿಧಾನಕ್ಕೆ ತಿದ್ದುಪಡಿ ತಂದು ಶಿಕ್ಷಣವನ್ನು ಒಂದು ಮೂಲಭೂತ ಹಕ್ಕನ್ನಾಗಿಸುವ ಕೆಲಸವನ್ನು ೧೯೯೭ರಲ್ಲಿ ಪ್ರಾರಂಭಿಸಿತು. ಅದರಂತೆ ಹುಟ್ಟಿನಿಂದ ೧೪ವರ್ಷದ ಮಕ್ಕಳಿಗೆ ಶಿಕ್ಷಣ ಮೂಲಭೂತ ಹಕ್ಕೆಂದು ಗೌರವಾನ್ವಿತ ಸರ್ವೋಚ್ಚ ನ್ಯಾಯಾಲಯ ನೀಡಿದ ತೀರ್ಪನ್ನು ತಿಳಿಗೊಳಿಸಿದ ಸರ್ಕಾರವು ಸಂವಿಧಾನದ ೮೬ನೇ ತಿದ್ದುಪಡಿ ಕಾಯ್ದೆ ೨೦೦೨ರ ಮೂಲಕ ಮೂಲಭೂತ ಹಕ್ಕನ್ನು ಕೇವಲ ೬ರಿಂದ ೧೪ ವರ್ಷದ ಮಕ್ಕಳಿಗೆ ಮಾತ್ರ ಸೀಮಿತಗೊಳಿಸಿತು. ಹುಟ್ಟಿನಿಂದ ಆರು ವರ್ಷದ ಮಕ್ಕಳನ್ನು ಮೂಲಭೂತ ಹಕ್ಕಿನ ಪರಿಧಿಯಿಂದ ಹೊರಗಿಟ್ಟು ಘನ ನ್ಯಾಯಾಲಯದ ತೀರ್ಪಿಗೆ ಅಪಚಾರ ಎಸಗಿತು.

ಸಂವಿಧಾನದ ೮೬ನೇ ತಿದ್ದುಪಡಿ ಕಾಯಿದೆ ಮೂಲಕ ಕೇಂದ್ರ ಸರ್ಕಾರವು ಮೂಲಭೂತ ಹಕ್ಕನ್ನು ತಿಳಿಗೊಳಿಸಿದ್ದು ಮಾತ್ರವಲ್ಲದೇ ಸಂವಿಧಾನಾತ್ಮಕವಾಗಿ ಸಿಗಬೇಕಾದ ಮೂಲಭೂತ ಹಕ್ಕನ್ನು ಶಾಸನಬದ್ಧ ಮೂಲಭೂತ ಹಕ್ಕಾಗಿ ಪರಿವರ್ತಿಸುವ ಮೂಲಕ ಈ ಹಕ್ಕನ್ನು ಸಂಸತ್ತು ರೂಪಿಸಬಹುದಾದ ಕಾಯಿದೆಯ ಮುಲಾಜಿಗೆ ನೂಕಿತು. ಬಹುಶಃ ಮೂಲ ಕಾಯ್ದೆಯಾದ ಸಂವಿಧಾನದಲ್ಲಿ ಇರಬೇಕಾದ ಮೂಲಭೂತ ಹಕ್ಕೊಂದನ್ನು ಆಳುವ ಸರ್ಕಾರಗಳು ರೂಪಿಸಬಹುದಾದ ಕಾನೂನಿನ ಮರ್ಜಿಗೆ ಒಳಪಡಿಸಿದ ಉದಾಹರಣೆಗಳು ಇಲ್ಲವೆಂದೇ ಹೇಳಬಹುದು. ಆದರೆ ಕೇಂದ್ರ ಸರ್ಕಾರವು ಮಕ್ಕಳ ಶಿಕ್ಷಣದ ಮೂಲಭೂತ ಹಕ್ಕನ್ನು ರಾಜ್ಯವು ಶಾಸನದ ಮೂಲಕ ತೀರ್ಮಾನಿಸುವ ರೀತಿಯಲ್ಲಿ ನೀಡುವುದಾಗಿ ಸಂವಿಧಾನದ ತಿದ್ದುಪಡಿ ಕಾಯಿದೆಯಲ್ಲಿ ಸೇರಿಸಿತು. ಸರ್ಕಾರದ ಈ ಕ್ರಮ ಈಗಾಗಲೇ ತಿಳಿಯಾದ ಮೂಲಭೂತ ಹಕ್ಕನ್ನು ಮತ್ತಷ್ಟು ತಿಳಿಗೊಳಿಸಿ **ಸರ್ವೋಚ್ಚ ನ್ಯಾಯಾಲಯದ ಐತಿಹಾಸಿಕ ತೀರ್ಪನ್ನು ಬಹಳ ಚಾಣಾಕ್ಷತೆಯಿಂದ ನೀರಸಗೊಳಿಸಿತು.**

ಕನಿಷ್ಠಪಕ್ಷ ಸಂವಿಧಾನದ ೮೬ನೇ ತಿದ್ದುಪಡಿ ಕಾಯ್ದೆಯಲ್ಲಿರುವಂತೆ ಆರರಿಂದ ಹದಿನಾಲ್ಕು ವರ್ಷದ ಮಕ್ಕಳಿಗಾದರೂ ಸಾಮಾಜಿಕ ನ್ಯಾಯ ಮತ್ತು ಸಮಾನತೆಯ ತತ್ವದ ಆಧಾರದ ಮೇಲೆ ಶಿಕ್ಷಣ ನೀಡಬಹುದೆಂದು ನಿರೀಕ್ಷಿಸಿದ್ದ ಕೋಟ್ಯಂತರ ಮಕ್ಕಳು ಮತ್ತು ಶಿಕ್ಷಣದ ಹಕ್ಕಿಗಾಗಿ ಕಾರ್ಯ ನಿರ್ವಹಿಸುತ್ತಿರುವ ಕಾರ್ಯಕರ್ತರಿಗೆ ನಿರಾಶೆಯಾಗುವ ರೀತಿಯಲ್ಲಿ ಕೇಂದ್ರ ಸರ್ಕಾರವು ಶಾಸನ ರೂಪಿಸುವ ಪ್ರಕ್ರಿಯೆಯನ್ನು ೨೦೦೩ರಲ್ಲಿ ಪ್ರಾರಂಭಿಸಿತು. ಸರ್ಕಾರದ ಈ ಕ್ರಮವನ್ನು ಮಾನವ ಹಕ್ಕುಗಳ ಚಳುವಳಿಗಳು ಪ್ರಬಲವಾಗಿ ವಿರೋಧಿಸುತ್ತಲೇ ಬಂದವು. ಈ ಚಳುವಳಿಗಳ ಒತ್ತಾಯವೇನಿತ್ತೆಂದರೆ ಎಲ್ಲ ಮಕ್ಕಳಿಗೆ ಸಮಾನ ಶಾಲಾ ಶಿಕ್ಷಣ ವ್ಯವಸ್ಥೆಯ ಆಧಾರದ ಮೇಲೆ ನೆರೆಹೊರೆ ಶಾಲೆಯ ತತ್ವದ ಮೇಲೆ ಸಮಾನ ಗುಣಮಟ್ಟದ ಶಿಕ್ಷಣವನ್ನು ಖಾತ್ರಿಗೊಳಿಸುವ ಶಾಸನವನ್ನು ರೂಪಿಸಬೇಕೆಂಬುದಾಗಿತ್ತು.

ಈ ಚಳುವಳಿಗಳ ಭಾಗವಾಗಿ ನಮ್ಮ ರಾಜ್ಯದಲ್ಲಿ ಶಾಲಾಭಿವೃದ್ಧಿ ಮತ್ತು ಮೇಲುಸ್ತುವಾರಿ ಸಮಿತಿಗಳ

ಸಮನ್ವಯ ವೇದಿಕೆ – ಕರ್ನಾಟಕ, ಬಾಲಕಾರ್ಮಿಕ ಪದ್ಧತಿ ವಿರೋಧಿ ಆಂದೋಲನ, ಮಕ್ಕಳ ಹಕ್ಕುಗಳ ಸಮನ್ವಯಗಳ ಜಂಟಿ ಕ್ರಿಯಾ ವೇದಿಕೆ – ಕರ್ನಾಟಕ ಹಾಗೂ ಮಕ್ಕಳ ಹಕ್ಕುಗಳಿಗಾಗಿ ಕೆಲಸ ನಿರ್ವಹಿಸುತ್ತಿರುವ ನೂರಾರು ಸಂಘಟನೆಗಳು ಈ ಹೋರಾಟದ ಮುಂಚೂಣಿಯಲ್ಲಿದ್ದವು. ಈ ಎಲ್ಲಾ ಸಂಘಟನೆಗಳ ಹೋರಾಟದ ಮೂಲ ಆಶಯವೆಂದರೆ ಸಂವಿಧಾನದ ಮತ್ತು ವಿಶ್ವಸಂಸ್ಥೆಯ ಮಕ್ಕಳ ಹಕ್ಕುಗಳ ಮೂಲ ಆಶಯದಂತೆ ಪ್ರತಿಯೊಬ್ಬ ಮಗುವಿಗೂ ೧೮ ವರ್ಷದವರೆಗೆ ಸಮಾನ ಗುಣಮಟ್ಟದ ಶಿಕ್ಷಣ ನೀಡಲು ಸರ್ಕಾರ ಸ್ಪಷ್ಟ ನೀತಿಯೊಂದನ್ನು ರೂಪಿಸಿ ಅಂತಹ ನೀತಿಯನ್ನು ಪರಿಣಾಮಕಾರಿಯಾಗಿ ಜಾರಿಗೊಳಿಸಲು ಜನಪರ ಮತ್ತು ಪ್ರಗತಿಪರ ಶಾಸನವೊಂದು ರೂಪಿಸಬೇಕೆಂಬುದಾಗಿತ್ತು.

ಈ ಎಲ್ಲ ಬೆಳವಣಿಗೆಗಳ ಹಿನ್ನೆಲೆಯಲ್ಲಿ, ಕೇಂದ್ರ ಸರ್ಕಾರವು ರೂಪಿಸಿ ಏಪ್ರಿಲ್ ಒಂದರಿಂದ ಜಾರಿಗೆ ತಂದಿರುವ **''ಉಚಿತ ಮತ್ತು ಕಡ್ಡಾಯ ಶಿಕ್ಷಣಕ್ಕಾಗಿ ಮಕ್ಕಳ ಹಕ್ಕು ಕಾಯಿದೆ ೨೦೦೯''** ದೇಶಾದ್ಯಂತ ವ್ಯಾಪಕ ವಿರೋಧ ಮತ್ತು ಚರ್ಚೆಗೆ ಒಳಪಟ್ಟಿದೆ. ಈ ಚರ್ಚೆಗೆ ಜನಪರ ಆಯಾಮ ನೀಡುವ ದೃಷ್ಟಿಯಿಂದ ಕಾಯ್ದೆಯಲ್ಲಿನ ಕೆಲವು ಮುಖ್ಯಾಂಶಗಳನ್ನು ಚರ್ಚಿಸಬೇಕಾಗಿದೆ.

ಮೊದಲನೆಯದಾಗಿ, ಈ ಕಾಯ್ದೆಯ ಶಿರೋನಾಮೆಯು ಬ್ರಿಟಿಷರ ಚಿಂತನೆಯ ಬಳುವಳಿಯಾಗಿದ್ದು ಮಾನವ ಹಕ್ಕುಗಳ ಇಂದಿನ ಯುಗದಲ್ಲಿ ಶಿಕ್ಷಣದ ಹಕ್ಕನ್ನು 'ಹಕ್ಕಿನ



ದೃಷ್ಟಿಕೋನ'ದಿಂದ ನೋಡಿ ಹಕ್ಕನ್ನು ಸಾಕಾರಗೊಳಿಸುವ ವಾತಾವರಣವನ್ನು ಸೃಷ್ಟಿಸುವ ಬದಲು. ಬಲಾತ್ಕಾರವಾಗಿ ಮಗುವಿನ ಸರ್ವತೋಮುಖ ಅಭಿವೃದ್ಧಿಗೆ ಸಹಾಯಕವಲ್ಲದ ಅಸಮಾನತೆಯಿಂದ ಕೂಡಿದ ಶಿಕ್ಷಣ ವ್ಯವಸ್ಥೆಗೆ ನೂಕಿ ನಂತರ ಮಕ್ಕಳನ್ನೇ ಬಲಿಪಶು ಮಾಡುವ ಟ್ರೂಯನ್ಸಿ ತತ್ವದ ಆಧಾರದ ಮೇಲೆ ಈ ಕಾಯಿದೆಯನ್ನು ರಚಿಸಲಾಗಿದೆ. ಸಹಜವಾಗಿ ಟ್ರೂಯನ್ಸಿ ತತ್ವದ ಆಧಾರದ ಮೇಲೆ ರೂಪಿಸಿಕೊಳ್ಳುವ ಕಾಯಿದೆಗಳು ಮೇಲ್ನೋಟಕ್ಕೆ ಜನಪರವೆಂದು ಕಂಡರೂ, ಆಂತರ್ಯದಲ್ಲಿ ಸಿಗಬೇಕಾದ ಹಕ್ಕು ಸಿಗದ ರೀತಿಯಲ್ಲಿ ಎಲ್ಲಾ ಹುನ್ನಾರಗಳನ್ನು ತನ್ನಲ್ಲಿ ಅಡಗಿಸಿಕೊಂಡಿರುತ್ತವೆ. ಸರಳವಾಗಿ ಹೇಳಬೇಕೆಂದರೆ, ಮೇಲ್ನೋಟಕ್ಕೆ ಶಿಕ್ಷಣ ಒದಗಿಸುವ ಮಾತನಾಡುತ್ತಲೇ ಪರೋಕ್ಷವಾಗಿ ಹಕ್ಕನ್ನು ಮೊಟಕುಗೊಳಿಸುವ ಅಥವಾ ಜಾರಿಯಾಗದ ರೀತಿಯಲ್ಲಿ ವೈರುಧ್ಯಗಳನ್ನು ಸೃಷ್ಟಿಸುವ ಎಲ್ಲ ಗುಣಗಳನ್ನು ಅಂತಹ ಕಾಯ್ದೆಗಳು ಹೊಂದಿರುತ್ತವೆ. ಈಗ ಜಾರಿಯಾಗಿರುವ ಶಿಕ್ಷಣ ಹಕ್ಕು ಕಾಯ್ದೆ ಇದಕ್ಕೆ ಹೊರತಾಗಿಲ್ಲ. ಸಂವಿಧಾನ ಮತ್ತು ಅಂತರ ರಾಷ್ಟ್ರೀಯ ಮಕ್ಕಳ ಹಕ್ಕುಗಳ ಒಡಂಬಡಿಕೆಗಳನ್ನು ಆಧರಿಸಿ **''ಹಕ್ಕಿನ ಪರಿಭಾಷೆ''**ಯನ್ನು ಪ್ರತಿಬಿಂಬಿಸಬೇಕಾಗಿದ್ದ ಈ ಕಾಯ್ದೆಯು **''ಕನಿಕರದ ಪರಿಭಾಷೆ''**ಯನ್ನು ಬಳಸಿರುವುದು ಮೂಲಭೂತ ಹಕ್ಕಿನ ಆಶಯಕ್ಕೆ ದ್ರೋಹ ಬಗೆದಿದೆ. ಉದಾಹರಣೆಗೆ, ಖಾಸಗಿ ಶಾಲೆಗಳಲ್ಲಿ ಶೇಕಡ ಇಪ್ಪತ್ತೈದರಷ್ಟು ಸ್ಥಾನಗಳನ್ನು ಮೀಸಲಿಡುವ ಅವಕಾಶವನ್ನು ಈ ಕಾಯ್ದೆಯು ಅವಕಾಶವಂಚಿತ ಮಕ್ಕಳ ಪಾಲಿಗೆ ಕ್ರಾಂತಿಯೆಂದೇ ಪ್ರತಿಬಿಂಬಿಸುತ್ತಿದೆ. ಆದರೆ ಖಾಸಗಿ ಶಾಲೆಗಳು ಈ ಅವಕಾಶದ ವಿರುದ್ಧ ಈಗಾಗಲೇ ನ್ಯಾಯಾಲಯದ ಮೆಟ್ಟಿಲು ಹತ್ತಿರುವುದು ಕಾಯ್ದೆಯಲ್ಲಿನ ಆಂತರಿಕ ವೈರುಧ್ಯಗಳನ್ನು ಎತ್ತಿತೋರಿಸುತ್ತದೆ.

ಎರಡನೆಯದಾಗಿ, ಶಿಕ್ಷಣ ಒದಗಿಸುವ ಜವಾಬ್ದಾರಿಯು ಸಂವಿಧಾನದ ಸಮವರ್ತಿ ಪಟ್ಟಿಯಲ್ಲಿದ್ದು, ರಾಜ್ಯ ಹಾಗೂ ಕೇಂದ್ರ ಸರ್ಕಾರಗಳೆರಡೂ ಶಾಸನ ರಚಿಸುವ ಪ್ರಕ್ರಿಯೆಯಲ್ಲಿ ಸಮಾನವಾಗಿ ಮತ್ತು ಪ್ರಜಾಸತ್ತಾತ್ಮಕವಾಗಿ ತೊಡಗಿಕೊಳ್ಳಬೇಕಾದ ಅವಶ್ಯಕತೆ ಇರುತ್ತದೆ. ಆದರೆ ಕೇಂದ್ರ ಸರ್ಕಾರವು ಈ ಕಾಯಿದೆಯನ್ನು ರೂಪಿಸುವ ಪ್ರಕ್ರಿಯೆಯಲ್ಲಿ ರಾಜ್ಯ ಸರ್ಕಾರಗಳನ್ನಾಗಲಿ ಅಥವಾ ಶಿಕ್ಷಣದ ಹಕ್ಕಿಗಾಗಿ ಹಲವಾರು ವರ್ಷಗಳಿಂದ ಕೆಲಸ ನಿರ್ವಹಿಸುತ್ತಿರುವ ಶಿಕ್ಷಕರ/ವಿದ್ಯಾರ್ಥಿ ಸಂಘಟನೆಗಳ ಕಾರ್ಯಕರ್ತರನ್ನಾಗಲಿ ಗಣನೆಗೆ ತೆಗೆದುಕೊಳ್ಳದೆ ಏಕಪಕ್ಷೀಯವಾಗಿ ರೂಪಿಸಿದೆ. ರಾಷ್ಟ್ರಾದ್ಯಂತ ಈ ಕಾಯ್ದೆಯ ಬಗ್ಗೆ ಚರ್ಚೆ ಮಾಡುವುದು ಹಾಗಿರಲಿ, ತಂತ್ರಜ್ಞಾನದ ಈ ಯುಗದಲ್ಲಿ ಕನಿಷ್ಠ ಈ ಕಾಯ್ದೆಯನ್ನು ಜನಪರ ಚರ್ಚೆಗಾಗಿ ಅಂತರ್ಜಾಲ ಮಾಧ್ಯಮದ ಮೂಲಕವಾದರೂ ಚರ್ಚೆಗೆ ಒಳಪಡಿಸುವ ಕನಿಷ್ಠ ಸೌಜನ್ಯವನ್ನು ತೋರದೇ ಇರುವುದು ಆಳುವ ಸರ್ಕಾರದ ಹಿಟ್ಲರ್ ಮನೋವೃತ್ತಿಯನ್ನು ಎತ್ತಿತೋರಿಸುತ್ತದೆ. ಇದು ಆಳುವ ವರ್ಗ ತನಗೆ ಬೇಕಾದ ರೀತಿಯಲ್ಲಿ ಶಿಕ್ಷಣ ನೀತಿಯನ್ನು ರೂಪಿಸಿಕೊಳ್ಳುವ ಹುನ್ನಾರವಲ್ಲದೆ ಮತ್ತೇನು ? ಈ ಧೋರಣೆಯಿಂದ ಬೇಸತ್ತಿರುವ ಅನೇಕ ರಾಜ್ಯಗಳು ಶಿಕ್ಷಣ ಹಕ್ಕು ಜಾರಿಯಾದ ಒಂದು ವಾರದಲ್ಲೇ ಕಾಯಿದೆಯನ್ನು ಜಾರಿಮಾಡಲು ಅಗತ್ಯ ಸಂಪನ್ಮೂಲವಿಲ್ಲವೆಂಬ ಕಾರಣವನ್ನು ಒಡ್ಡಿ ಕಾಯಿದೆಯನ್ನು ಸದ್ಯದಲ್ಲಿ ಮಾತ್ರವಲ್ಲ ಮುಂಬರುವ ದಿನಗಳಲ್ಲೂ ಜಾರಿಗೊಳಿಸಲು ಸಾಧ್ಯವಿಲ್ಲವೆಂಬ ಪತ್ರಗಳನ್ನು ಬರೆದಿರುವುದು ಈ ಕಾಯ್ದೆ ಎಷ್ಟರಮಟ್ಟಿಗೆ ಜಾರಿಯಾಗಬಹುದೆಂಬ ಪ್ರಶ್ನಾರ್ಥಕತೆಯನ್ನು ಎತ್ತುತ್ತದೆ.

ಈ ಮೂಲಕ ಅರವತ್ತೆರಡು ವರ್ಷಗಳ ನಂತರ ಶಿಕ್ಷಣವನ್ನು ಮೂಲಭೂತ ಹಕ್ಕನ್ನಾಗಿಸುವ ಪ್ರಕ್ರಿಯೆಯಲ್ಲಿ ಪ್ರಜಾಸತ್ತಾತ್ಮಕವಾಗಿ ರಾಷ್ಟ್ರೀಯ ಚರ್ಚೆಯ ಮೂಲಕ ಸಮಾನ ಶಾಲಾ ಶಿಕ್ಷಣ ತತ್ವದ ಮೇಲೆ ಒಂದು ರಾಷ್ಟ್ರೀಯ ಶಿಕ್ಷಣ ವ್ಯವಸ್ಥೆಯನ್ನು ಕಟ್ಟಿಕೊಳ್ಳಲು ಇದ್ದ ಅವಕಾಶಗಳಿಗೆ ಆಳುವ ಸರ್ಕಾರವು ಕಲ್ಲು ಹಾಕಿದೆ. ಈ ಪ್ರಕ್ರಿಯೆಯ ಮೂಲಕ ಇಂದಿನ ಶಿಕ್ಷಣ ವ್ಯವಸ್ಥೆಯಲ್ಲಿರುವ ಅಸಮಾನತೆ, ಶ್ರೇಣೀಕೃತ ವಿಭಜನೆ ಮತ್ತು ತಾರತಮ್ಯಗಳನ್ನು ಮುಂದುವರಿಸಿಕೊಂಡು ಹೋಗುವ ಮತ್ತು ತನ್ನ ಆಳ್ವಿಕೆಯ ಯಥಾಸ್ಥಿತಿಯನ್ನು ಕಾಪಾಡಿಕೊಳ್ಳಲು ಅನುವಾಗುವ ಒಂದು ಪ್ರತಿಗಾಮಿ ಕಾಯಿದೆಯನ್ನು ರೂಪಿಸಿ ಜಾರಿಗೊಳಿಸಿದೆ.

ಈ ಸಂದರ್ಭದಲ್ಲಿ ಬಹಳ ಹಿಂದೆ ಶಿಕ್ಷಣ ಆಯೋಗವು (ಕೊಠಾರಿ ಆಯೋಗ : ೧೯೬೪-೬೬) ನೀಡಿದ್ದ ಎಚ್ಚರಿಕೆಯ ಮಾತುಗಳನ್ನು ಸ್ಮರಿಸುವುದು ಅತ್ಯಂತ ಪ್ರಸ್ತುತವಾಗುತ್ತದೆ. ಆಯೋಗವು ಗಮನಿಸಿದ ಒಂದು ಪ್ರಮುಖ ಅಂಶವೆಂದರೆ, **''ಭಾರತದಲ್ಲಿ ಶಿಕ್ಷಣವು ವಿವಿಧ ಸಾಮಾಜಿಕ ವರ್ಗ ಮತ್ತು ಗುಂಪುಗಳ ನಡುವಿನ ಅಂತರವನ್ನು ಕಡಿಮೆಗೊಳಿಸಿ ಸಮಾನತೆಯ ಆಧಾರದ ಮೇಲೆ ಒಂದು ಹೊಸ ಸಮಾಜವನ್ನು ಸೃಷ್ಟಿಸುವ ಬದಲು, ಸಾಮಾಜಿಕ ವರ್ಗ ಮತ್ತು ಗುಂಪುಗಳ ನಡುವಿನ ಅಂತರವನ್ನು ಮತ್ತಷ್ಟು ಹೆಚ್ಚಿಸುವುದರ ಮೂಲಕ ವರ್ಗಾಧಾರಿತ ಗುಂಪುಗಳನ್ನು ಸೃಷ್ಟಿಸಿ ತನ್ಮೂಲಕ ಸಾಮಾಜಿಕ ಪ್ರತ್ಯೇಕತೆ ಮತ್ತು ತಾರತಮ್ಯ ಹೆಚ್ಚುವಂತೆ ಮಾಡುತ್ತಿದೆ.''**

ಆಯೋಗವು ಮುಂದುವರಿದು, **''ಇಂತಹ ಪ್ರಕ್ರಿಯೆ ಕೇವಲ ಬಡಮಕ್ಕಳಿಗೆ ಮಾತ್ರ ಮಾರಕವಾಗಿರದೆ ಎಲ್ಲಾ ಸವಲತ್ತುಗಳುಳ್ಳ ಶ್ರೀಮಂತ ವರ್ಗದಿಂದ ಬರುವ ಮಕ್ಕಳಿಗೂ ಮಾರಕವಾಗಲಿದೆ. ಮಕ್ಕಳನ್ನು ಪ್ರತ್ಯೇಕಿಸುವುದರ ಮೂಲಕ ಶ್ರೀಮಂತ ವರ್ಗದ ಜನರು ತಮ್ಮ ಮಕ್ಕಳು ಬಡವರ್ಗದಿಂದ ಬರುವ ಮಕ್ಕಳ ಜೊತೆ ಬೆರೆಯುವುದರ ಮೂಲಕ ಅಂತಹ ಮಕ್ಕಳಿಂದ ಕಲಿಯಬಹುದಾದ ಜೀವನದ ಅನುಭವಗಳನ್ನು ಕಲಿಯಲಾಗದಂತೆ ಮಾಡುತ್ತಿದ್ದಾರೆ. ಇದರ ಪರಿಣಾಮವಾಗಿ ಮೇಲ್ವರ್ಗದ ಮಕ್ಕಳಿಗೆ ಜೀವನದ ವಾಸ್ತವಿಕ ಅನುಭವಗಳ ಮತ್ತು ಕಥನಗಳ ಕೊರತೆಯಿಂದಾಗಿ ಅಂತಹ ಮಕ್ಕಳ ಬೆಳವಣಿಗೆ ಅಪಕ್ವ ಮತ್ತು ಅಪೂರ್ಣವಾಗುತ್ತದೆ''**ಯೆಂದು ಸಹ ಅಭಿಮತ ಪಟ್ಟಿತ್ತು.

ಈ ಅಸಮಾನತೆಯನ್ನು ತೊಡೆದುಹಾಕಲು ಆಯೋಗವು ನೆರೆಹೊರೆ ಶಾಲೆಯ ತತ್ವದ ಆಧಾರದ ಮೇಲೆ ಸಮಾನ ಶಾಲಾ ಶಿಕ್ಷಣದ ವ್ಯವಸ್ಥೆಯನ್ನು ಜಾರಿಗೊಳಿಸುವುದರ ಮೂಲಕ ಒಂದು ಬಲಿಷ್ಠ ರಾಷ್ಟ್ರೀಯ ಶಿಕ್ಷಣ ವ್ಯವಸ್ಥೆಯನ್ನು ಕಟ್ಟಿಕೊಳ್ಳಬೇಕೆಂದು ನಿಷ್ಠುರವಾದ ಮಾತುಗಳಲ್ಲಿ ಶಿಫಾರಸ್ಸು ಮಾಡಿತ್ತು.

ಆದರೆ, ಈ ಎಲ್ಲ ಶಿಫಾರಸ್ಸುಗಳನ್ನು ಗಾಳಿಗೆ ತೂರಿದ ಆಳುವ ಸರ್ಕಾರಗಳು ಅಸಮಾನತೆ ಮತ್ತು ಪ್ರತ್ಯೇಕತೆಗಳನ್ನು ಇಮ್ಮಡಿಗೊಳಿಸುವ ನಿಟ್ಟಿನಲ್ಲಿಯೇ ಶಿಕ್ಷಣ ನೀತಿಗಳನ್ನು ರೂಪಿಸಿ ಜಾರಿಗೊಳಿಸುತ್ತಾ ಬಂದವು. ಇಂದು ಶಿಕ್ಷಣದ ಮೂಲಕ ನಾವು ಭಾರತವನ್ನು ವಿಭಜಿಸಿದಷ್ಟು, ಈ ಹಿಂದೆ ಭಾರತವನ್ನು ಆಳಿದ ಯಾವುದೇ ದೇಶಗಳು/ ರಾಜವಂಶಗಳು ಇಷ್ಟು ದೊಡ್ಡ ಪ್ರಮಾಣದಲ್ಲಿ ನಮ್ಮನ್ನು ವಿಭಜಿಸಿದ ಉದಾಹರಣೆಗಳಿಲ್ಲ. ಇಂದು ಶಿಕ್ಷಣವೆಂದರೆ, ಅಸಮಾನತೆಯನ್ನು ಹುಟ್ಟುಹಾಕುವ, ವಿವಿಧ ವರ್ಗಗಳನ್ನು ಸೃಷ್ಟಿಸುವ, ಹೆಣ್ಣು-ಗಂಡಿನ ಮಧ್ಯೆ ತಾರತಮ್ಯ ಎಸಗುವ ಮತ್ತು ಸಾಮಾಜಿಕ ವರ್ಗಗಳ

ಮಧ್ಯೆ ಕಂದರವನ್ನು ಹೆಚ್ಚಿಸಿ ಒಡೆದು ಆಳುವ ನೀತಿಯನ್ನು ಜಾರಿಗೊಳಿಸಲು ಬಳಸಬಹುದಾದ ಒಂದು ಪ್ರಮುಖ ಸಾಧನವೆನ್ನುವಷ್ಟರಮಟ್ಟಿಗೆ ಆಳುವ ವರ್ಗಗಳು ಶಿಕ್ಷಣವನ್ನು ಬಳಸುತ್ತಿವೆ. ಇಂದಿನ ಶಿಕ್ಷಣ ವ್ಯವಸ್ಥೆಯಲ್ಲಿ ಏಳು ಪ್ರವರ್ಗಗಳಿವೆ. ಅಂತರರಾಷ್ಟ್ರೀಯ ಮಂಡಳಿಗಳಿಗೆ ನೋಂದಾಯಿಸಿಕೊಂಡ ಅಂತರರಾಷ್ಟ್ರೀಯ ಶಾಲೆಗಳು, ಸಿ.ಬಿ.ಎಸ್.ಇ./ಐ.ಸಿ.ಎಸ್.ಸಿ ಮಂಡಳಿಗಳಿಗೆ ನೋಂದಾಯಿಸಿಕೊಂಡಿರುವ ಶಾಲೆಗಳು, ರಾಜ್ಯ ಮಂಡಳಿಗಳಿಗೆ ನೋಂದಾಯಿಸಿಕೊಂಡಿರುವ ಪ್ರತಿಷ್ಠಿತ ಇಂಗ್ಲಿಷ್ ಮಾಧ್ಯಮದ ಶಾಲೆಗಳು, ಅನುದಾನಿತ ಶಾಲೆಗಳು, ಸರ್ಕಾರಿ ಶಾಲೆಗಳು, ಸ್ಥಳೀಯ ಸರ್ಕಾರದ ಶಾಲೆಗಳು, ಅನೌಪಚಾರಿಕ ಶಾಲೆಗಳು, ಟೆಂಟ್/ಸಂಚಾರಿ ಶಾಲೆಗಳು ಮತ್ತು ಕೊನೆಯದಾಗಿ ಶಿಕ್ಷಣ ಖಾತ್ರಿ ಯೋಜನೆಯ ಶಾಲೆಗಳು, ಹೀಗೆ ಭಾರತವನ್ನು ಸಮತಲ ಮತ್ತು ಲಂಬವಾಗಿ ವಿಭಜಿಸುವ ಅತ್ಯಂತ ಕ್ರೂರ ಶಿಕ್ಷಣ ವ್ಯವಸ್ಥೆ ನಮ್ಮದಾಗಿದೆ. ಈ ವ್ಯವಸ್ಥೆಯನ್ನು ಸರಿಪಡಿಸುವ ಯಾವುದೇ ಅಂಶಗಳು ಪ್ರಸ್ತುತ ಜಾರಿಯಲ್ಲಿ ಇರುವ ಶಿಕ್ಷಣ ಕಾಯ್ದೆಯಲ್ಲಿಲ್ಲ.

ಮೂರನೆಯದಾಗಿ, ೮ ವರ್ಷಗಳ ಉಚಿತ ಮತ್ತು ಕಡ್ಡಾಯ ಶಿಕ್ಷಣ ನೀಡಬೇಕೆಂಬ ಸರ್ಕಾರದ ಆಶಯವು ಇಂದಿನ ಸಾಮಾಜಿಕ, ಆರ್ಥಿಕ, ರಾಜಕೀಯ ಮತ್ತು ಸಾಂಸ್ಕೃತಿಕ ಪರಿಸ್ಥಿತಿಯನ್ನು ಮಾನದಂಡವಾಗಿ ತೆಗೆದುಕೊಂಡಿಲ್ಲ. ೮ ವರ್ಷಗಳ ಶಿಕ್ಷಣದ ಆಶಯವು ೬೦-೭೦ ವರ್ಷಗಳ ಹಿಂದೆ, ಅಂದಿನ ಸಾಮಾಜಿಕ,ಆರ್ಥಿಕ ಮತ್ತು ಸಾಂಸ್ಕೃತಿಕ ಬದುಕಿಗೆ ಮತ್ತು ಸನ್ನಿವೇಶಗಳಿಗೆ ಅನುಗುಣವಾಗಿತ್ತು. ಇಂದಿನ ಸಂದರ್ಭದಲ್ಲಿ ೮ ವರ್ಷಗಳ ಶಿಕ್ಷಣವು ಯಾವುದೇ ರೀತಿಯಲ್ಲಿಯೂ ಪ್ರಯೋಜನವಾಗುವುದಿಲ್ಲ. ಉಳಿದೆಲ್ಲಾ ವಿಚಾರಗಳಲ್ಲಿ ಆಳುವ ಸರ್ಕಾರಗಳು ಖಾಸಗೀಕರಣ, ಜಾಗತೀಕರಣ ಮತ್ತು ಉದಾರೀಕರಣದ ವಿಷಯಗಳನ್ನು ಉದ್ಧರಿಸುತ್ತಾ ಸ್ಪರ್ಧಾತ್ಮಕ ಯುಗಕ್ಕೆ ಅಣಿಗೊಳ್ಳಬೇಕೆಂದು ಬೊಂಬಡ ಬಜಾಯಿಸುತ್ತಲೇ ಮಕ್ಕಳ ಶಿಕ್ಷಣದ ವಿಚಾರದಲ್ಲಿ ದೇಶವನ್ನು ೭೦ ವರ್ಷ ಹಿಂದಕ್ಕೆ ದೂಡುವ ನೀತಿಯನ್ನು ಅನುಸರಿಸುತ್ತಿರುವುದು ವಿಪರ್ಯಾಸವೇ ಸರಿ. ದೇಶವನ್ನು ಹಿಂದಕ್ಕೆ ಕೊಂಡೊಯ್ಯುವ ಸಿದ್ಧಾಂತವನ್ನು ಹೊಂದಿದ್ದ ಬಲಪಂಥೀಯ ಶಕ್ತಿಗಳನ್ನು ಟೀಕಿಸುತ್ತಲೇ ಪ್ರಗತಿಪರರೆಂದು ಬಿಂಬಿಸಿ ಅಧಿಕಾರದ ಗದ್ದುಗೆಗೇರಿದ ಆಳುವ ಶಕ್ತಿಗಳ ಅಗೋಚರ ಮತ್ತು ಅಪಾಯಕಾರಿ ಧೋರಣೆ ಈ ಕಾಯ್ದೆಯ ಮೂಲಕ ಬಯಲಾಗಿದೆ.

ಕೊನೆಯದಾಗಿ, ಶಿಕ್ಷಣ ಕಾಯಿದೆಯು ಶಾಲಾ ಶಿಕ್ಷಣದ



# ಶಿಕ್ಷಣದ ಹಕ್ಕು ಕಾಯಿದೆ – ಒಂದು ರಾಜಕೀಯ ಟಿಪ್ಪಣಿ

ಕಾಂಗ್ರೆಸ್ ಪಕ್ಷ ಈ ಮಸೂದೆಯ ಮೂಲಕ ಉಳಿದ ಪಕ್ಷಗಳಿಗೆ ಒಂದು ಸವಾಲು ಎಸೆದಿದ್ದೇನೆ ಎಂದುಕೊಂಡಿದೆ. ಆದರೆ ವಾಸ್ತವದಲ್ಲಿ ಅದು ಅದರ ಸೈದ್ಧಾಂತಿಕ ದಿವಾಳಿತನವನ್ನು ಪ್ರಕಟಪಡಿಸಿದೆ. ಸಾಕಷ್ಟು ಹಣದ ಬೆಂಬಲವಿಲ್ಲದ್ದು ಒಂದೇ ಇದರ ಕೊರತೆಯಲ್ಲ. ಈಗಾಗಲೆ ರಾಜ್ಯಾಂಗದ ನಿರ್ದೇಶಕ ತತ್ವದಲ್ಲಿ ಅಡಕವಾಗಿರುವ ಕಡ್ಡಾಯ ಉಚಿತ ಪ್ರಾಥಮಿಕ ವಿದ್ಯಾಭ್ಯಾಸದ ಉದ್ದೇಶವನ್ನು ಇದು ಒಂದಿಷ್ಟೂ ಮುಂದುವರಿಸುವುದಿಲ್ಲ. ವಾಸ್ತವದಲ್ಲಿ ಅದನ್ನು ವಿಕೃತಗೊಳಿಸುತ್ತದೆ ಈ ಕಾಯಿದೆ. ಅವರೇ ಹೇಳುವ ಖಾಸಗಿ ಶಿಕ್ಷಣ ಕ್ಷೇತ್ರ ಕೇವಲ ಶೇಕಡ ೨ರಷ್ಟು ವಿದ್ಯಾರ್ಥಿಗಳನ್ನು ಮಾತ್ರ ಒಳಗೊಂಡಿದೆ ಎಂದರೆ ಅದರಲ್ಲಿ ಆಶ್ಚರ್ಯವೇನಿಲ್ಲ. ಅದು ಆಳುವ ವರ್ಗದವರ ಹಿಸ್ಸೆ. ಅದಷ್ಟೆ ಅವರ ಅಗತ್ಯ ಕೂಡ. ಈ ಶೇಕಡ ೨ರಷ್ಟು ವಲಯದಲ್ಲಿ ಶೇಕಡ ೨೫ರಷ್ಟು ಬಡ ಮಕ್ಕಳಿಗಾಗಿ ಮೀಸಲಾತಿ ಅಂದರೆ ಶೇಕಡ ೧.೭೫ರಷ್ಟು ಮಕ್ಕಳನ್ನು ಖಾಸಗಿ ಶಾಲೆಯಲ್ಲಿ ಪ್ರಥಮ ದರ್ಜೆಯಲ್ಲಿ ಮಾತ್ರ ಸೇರಿಸುವ ಈ ನಾಟಕ ಯಾರನ್ನೂ ದಂಗುಬಡಿಸದು. ಇದನ್ನು ಖಾಸಗಿ ವಲಯ ಇನ್ನೂ ಒಪ್ಪಿಕೊಂಡಿಲ್ಲ. ರಾಜ್ಯ ಸರ್ಕಾರಗಳು ಈ ಬಗ್ಗೆ ಮತ್ತೊಂದು ಕಾನೂನು, ನಿಯಮಾವಳಿಗಳನ್ನು ಮಾಡದೆ ಇದೂ ಕಾರ್ಯಗತವಾಗುವುದಿಲ್ಲ. ಇದಕ್ಕೆ ಯಾವ ಕಾಲಮಿತಿಯನ್ನೂ ವಿಧಿಸಲಾಗದು. ಕಾಂಗ್ರೆಸ್ ಪಕ್ಷ ಅಧಿಕಾರದಲ್ಲಿರುವ ರಾಜ್ಯ ಸರ್ಕಾರಗಳೆ ಸಾಕಷ್ಟು ಪ್ರತಿಕ್ರಿಯೆ ನೀಡಿಲ್ಲ.

ಬಡ ಮಕ್ಕಳೊಡನೆ ಸಿರಿವಂತರ ಮಕ್ಕಳು ಒಟ್ಟಾಗಿ ಕುಳಿತು ಕಲಿಯಲಾರರು, ಆಗದು ಎನ್ನುವ ಮಾತನ್ನು ಧೈರ್ಯವಾಗಿ ಬಹಿರಂಗವಾಗಿ ಹೇಳುವಷ್ಟು ಪ್ರತಿಗಾಮಿ ಶಕ್ತಿಗಳು ಪ್ರಬಲವಾಗಿವೆ ಇಂದು. ನ್ಯೂಯಾರ್ಕಿನ ವಾಲ್‌ಸ್ಟ್ರೀಟ್ ವಕೀಲ ಕಪಿಲ್ ಸಿಬಲ್ ಪ್ರಾಥಮಿಕ ವಿದ್ಯಾಭ್ಯಾಸವನ್ನು ರಾಷ್ಟ್ರೀಕರಣಗೊಳಿಸುವುದು ಸಾಧ್ಯವಿಲ್ಲ ಎಂದು ಸ್ಪಷ್ಟಪಡಿಸಿದ್ದಾರೆ. ಈಗಾಗಲೆ ಇರುವ ಸರ್ಕಾರಿ ಶಾಲೆಗಳಲ್ಲಿ ಪ್ರವೇಶ ಬಯಸಿದವರಿಗೆ ಪ್ರವೇಶ ನಿರಾಕರಿಸುವಂತಿಲ್ಲ. ಹೀಗಿರುವಾಗ ಈ ಕಾಯಿದೆಯಿಂದ ಪರಿಸ್ಥಿತಿಯಲ್ಲಿ ಯಾವುದೆ ತಕ್ಷಣದ ಪರಿಣಾಮವನ್ನು ನಿರೀಕ್ಷಿಸುವಂತಿಲ್ಲ. ಮತ್ತಷ್ಟು ಸರ್ಕಾರಿ ಶಾಲೆಗಳನ್ನು ತೆರೆದ ಮಾತ್ರಕ್ಕೆ ಬಾಲಕಾರ್ಮಿಕರ ಸಮಸ್ಯೆ ಪರಿಹಾರವಾಗುವುದಿಲ್ಲ. ಅವರ ಶಿಕ್ಷಣದ ಬಗ್ಗೆ ಯಾವುದೆ ಕಾಳಜಿ ವಹಿಸಲಾರದ ತಂದೆ-ತಾಯಿಯರು ಅಸಹಾಯಕರಾಗಿರುವಾಗ, ಈ ಬಾಲಕರನ್ನು ಸೆರೆಹಿಡಿದು ಶಾಲೆಗೆ ಸೇರಿಸಬೇಕೋ ಏನೋ! ಅಂದರೆ ಇದರ ಹಿಂದಿನ ದಯನೀಯ ಕಡುಬಡವರ ಸ್ಥಿತಿಯನ್ನು ಪ್ರಭಾವಿಸಿ, ಉತ್ತಮಪಡಿಸುವ ಆರ್ಥಿಕನೀತಿಯಿಲ್ಲದೆ, ಈ ಶಿಕ್ಷಣದ ಕಾಯಿದೆ ನಿಷ್ಪ್ರಯೋಜಕವಾಗುತ್ತದೆ. ಪ್ರಥಮ ದರ್ಜೆಗೆ ಬರುವುದಕ್ಕೆ ಮುಂಚೆಯೆ ಇಂಗ್ಲಿಷ್ ಕಲಿತು ಬರುವ ಮಕ್ಕಳು ಮತ್ತು 'ಓನಾಮ'ವನ್ನು ಆಗಷ್ಟೆ ಬರೆಯುವ ಮಕ್ಕಳೂ ಒಂದಿಗೆ ಓದುವ ಸನ್ನಿವೇಶವೇ ಅಸಹಜವಾದುದು. 'ಅಂಗನವಾಡಿ' ಎಂಬ ಶಿಶುವಿಹಾರ, ಪ್ರಿ-ಸ್ಕೂಲ್ ಕೆಜಿ ಕ್ರಮಗಳನ್ನು ಎಲ್ಲ ಮಕ್ಕಳಿಗೂ ದಕ್ಕುವಂತೆ ಮಾಡದೆ, ಈ ಕಾಯಿದೆ ಪ್ರಯೋಜನಕ್ಕೆ ಬರುವುದಿಲ್ಲ. ಸರ್ಕಾರಿ ಶಾಲೆಗಳಲ್ಲಿ ಮೊದಲ ದರ್ಜೆಯಲ್ಲೆ ಇಂಗ್ಲಿಷ್‌ಅನ್ನು ಒಂದು ಭಾಷೆಯಾಗಿ ಕಲಿಸುತ್ತಾ, ಮಾತೃಭಾಷೆಯನ್ನು ಮಾಧ್ಯಮವಾಗಿಸುವ ಪ್ರಯತ್ನ ಆಗದೆ ಈ ಕಾಯಿದೆಯ ಉದ್ದೇಶ ಸಾಧ್ಯವಾಗುವುದಿಲ್ಲ. ಶಾಲಾ ಕಟ್ಟಡಗಳು, ಮತ್ತಿತರ ಮೂಲಭೂತ ಸೌಕರ್ಯಗಳೇ ಅಲ್ಲದೆ, ಮೊದಲಿಗೆ ಅಲ್ಲಿಯ ಉಪಾಧ್ಯಾಯರು ಶಾಲೆಯ ಸನಿಹದಲ್ಲೇ ವಾಸಿಸಬೇಕು. ಒಂದು ಶಾಲೆಯ ಆಸುಪಾಸಿನ ಮಕ್ಕಳೆಲ್ಲ, ವರ್ಗಭೇದವಿಲ್ಲದೆ, ಕಡ್ಡಾಯವಾಗಿ ಆ ಶಾಲೆಗೆ ಸೇರಬೇಕು. ಇವು ಯಾವುವೂ ಸಮಾಜವಾದವಲ್ಲ. ಮುಂದುವರಿದ ಬಂಡವಳಿಗ ಬೂರ್ಷ್ವಾ ದೇಶಗಳಲ್ಲಿ ಹೀಗೆಯೆ ಇರುವುದು.

ವರ್ಷದಿಂದ ವರ್ಷಕ್ಕೆ ತೆರಿಗೆಯ ಸಂಗ್ರಹವನ್ನು ಕಡಿಮೆ ಮಾಡುತ್ತಾ, ಸಂಪತ್ತಿನ ಕೇಂದ್ರೀಕರಣವನ್ನು ಪೋಷಿಸುತ್ತಿರುವ ಸರ್ಕಾರಕ್ಕೆ ಈ ಮೇಲಿನ ಕಾರ್ಯಕ್ರಮಗಳನ್ನು ಕಾರ್ಯಗತಗೊಳಿಸಲು ಬೇಕಾದ ಹಿರಿಯ ಹಣದ ಮೊತ್ತ ಎಲ್ಲಿಂದ ಬರಬೇಕು ? ರಾಜ್ಯ ಸರ್ಕಾರಗಳು ವರ್ಷದಿಂದ ವರ್ಷಕ್ಕೆ ಕೇಂದ್ರಕ್ಕೆ ತಮ್ಮ ಆದಾಯದ ಬಾಬುಗಳನ್ನೆಲ್ಲಾ ಕಳೆದುಕೊಳ್ಳುತ್ತಿವೆ. ಹೀಗಾಗಿ ಪ್ರಾಥಮಿಕ ಕಡ್ಡಾಯ ಶಿಕ್ಷಣ ಕಾಯಿದೆ ಕೇವಲ ಪೊಳ್ಳು ಪ್ರಚಾರವಾಗಿದೆಯೇ ವಿನಾ ಈ ಬಗ್ಗೆ ಯಾವುದೇ ಮಹತ್ತರ ಪರಿವರ್ತನೆಯನ್ನು ನಿರೀಕ್ಷಿಸಬೇಕಾಗಿಲ್ಲ. ವಿರೋಧ ಪಕ್ಷಗಳಿಂದಲೂ ಇದಕ್ಕಿಂತ ಹೆಚ್ಚಿನದೇನನ್ನೂ ನಿರೀಕ್ಷಿಸಲಾಗದು. ದಶಕಗಳಷ್ಟು ಆಳಿದ ಎಡಪಕ್ಷಗಳೇ ಈ ಕೆಲಸ ಮಾಡಲಿಲ್ಲ. ಕೇರಳದಲ್ಲಿ ಮಾತ್ರ ಈ ಕುರಿತು ಸ್ವಲ್ಪ ಕೆಲಸ ಆಗಿದ್ದರೆ ಅದಕ್ಕೆ ಅಲ್ಲಿಯ ಪ್ರಜ್ಞಾವಂತ ಜನತಾ ಚಳುವಳಿಗಳೇ ಕಾರಣ. ಮಿಕ್ಕ ರಾಜ್ಯಗಳಲ್ಲೂ ಪ್ರಜ್ಞಾವಂತರು ಇಂಥದೆ ಚಳುವಳಿಗಳನ್ನು ತೀವ್ರಗತಿಯಲ್ಲಿ ಮುಂದುವರಿಸಬೇಕು.

ಕೆ. ಎಸ್. ಪಾರ್ಥಸಾರಥಿ

ಕ್ಷೇತ್ರದಲ್ಲಿ ಈಗಿರುವ ಅಸಮಾನತೆಯನ್ನು ತೊಡೆದುಹಾಕಿ ಸಮಾನ ಅವಕಾಶದ ಜೊತೆಗೆ ಶಿಕ್ಷಣದಲ್ಲಿ ಸಮತೆಯನ್ನು ತರುವ ನಿಟ್ಟಿನಲ್ಲಿ ರೂಪುಗೊಳ್ಳಬೇಕಿತ್ತು. ಎಲ್ಲರಿಗೂ ತಿಳಿದಿರುವಂತೆ ಇಂದು, ಒಂದೆಡೆ ಉಳ್ಳವರ ಪರವಾಗಿದ್ದು ದುಬಾರಿ ಶುಲ್ಕ ವಿಧಿಸಿ ಶಿಕ್ಷಣವನ್ನು ಒಂದು ಮಾರಾಟದ ಸರಕನ್ನಾಗಿಸಿ ವ್ಯಾಪಾರದ ಅಂಗಡಿಗಳಾಗಿರುವ ಖಾಸಗಿ ಶಾಲೆಗಳನ್ನು ಪ್ರೋತ್ಸಾಹಿಸುವ ನೀತಿ, ಮತ್ತೊಂದೆಡೆ ಶೋಷಿತ, ಹಿಂದುಳಿದ, ಅಲ್ಪಸಂಖ್ಯಾತ ಮತ್ತು ದಲಿತ ಮಕ್ಕಳಿಗೆ ಸರ್ಕಾರಿ ಶಾಲೆ, ಅನೌಪಚಾರಿಕ ಶಿಕ್ಷಣ ಕೇಂದ್ರ ಮತ್ತು ಸರ್ವ ಶಿಕ್ಷಣ ಅಭಿಯಾನದ ಅಡಿಯಲ್ಲಿ ರೂಪಿಸಿರುವ ಶಿಕ್ಷಣದ ಖಾತ್ರಿ ಯೋಜನೆಗಳ ಮೂಲಕ ಕಳಪೆ ಗುಣಮಟ್ಟದ ಶಿಕ್ಷಣವನ್ನು ಕಾನೂನುಬದ್ಧಗೊಳಿಸುವ ನೀತಿಯನ್ನು ಈ ಕಾಯ್ದೆಯು ತನ್ನ ಒಡಲಾಳದಲ್ಲಿರಿಸಿಕೊಂಡು ಭಾರತದ ಜನತೆಯನ್ನು ದಿಕ್ಕು ತಪ್ಪಿಸುವ ಮೂಲಕ ಬಹುಸಂಖ್ಯಾತ ಮಕ್ಕಳಿಗೆ ಘೋರ ಅಪಚಾರವೆಸಗಿದೆ.

ಈ ಕಾಯಿದೆ ಹಿಂದಿರುವ ಮುಖ್ಯ ಉದ್ದೇಶದ ತಾತ್ಪರ್ಯವನ್ನು ಹೇಳುವುದಾದರೆ ಅಸಮಾನತೆಯಿಂದ ಕೂಡಿದ ಶ್ರೇಣೀಕೃತ ಸಮಾಜವನ್ನು ಮುಂದುವರಿಸಿಕೊಂಡು ಹೋಗುವುದರ ಮೂಲಕ ಉಳ್ಳವರ ಕೈಗೊಂಬೆಯಾಗಿರುವ ಆಳುವ ಸರ್ಕಾರವು ಸಮಾಜವನ್ನು ಯಥಾಸ್ಥಿತಿಯಲ್ಲಿ ಮುಂದುವರಿಸಿಕೊಂಡು ಹೋಗುವ ಶಿಕ್ಷಣದ ಮೂಲಕ ನಿರಂತರ ಶೋಷಣೆಗೆ ನಡೆಸಿರುವ ರಾಜಕೀಯ ಹುನ್ನಾರವಾಗಿದೆ. ಸರ್ಕಾರದ ಈ ಕ್ರಮವು ನಮ್ಮ ಸಂವಿಧಾನ, ಸಾಮಾಜಿಕ ನ್ಯಾಯ, ಸಮಾನತೆ ಮತ್ತು ಸಮಾಜವಾದಿ ಸಿದ್ಧಾಂತಕ್ಕೆ ತದ್ವಿರುದ್ಧವಾಗಿದ್ದು ಸ್ವಾತಂತ್ರ್ಯ ಚಳುವಳಿಯ ಉತ್ಪನ್ನವಾದ ಸಂವಿಧಾನದ ಆಶಯಗಳನ್ನು ಬುಡಮೇಲು ಮಾಡಲು ಹೊರಟಿದೆ.

ಒಟ್ಟಾರೆ, ಸಮಾನತೆಯ ತಳಹದಿಯ ಮೇಲೆ ಬಲಿಷ್ಠ ನಾಡೊಂದನ್ನು ಕಟ್ಟಲು ಅಗತ್ಯವಾಗಿ ಬೇಕಾದ ಶೈಕ್ಷಣಿಕ ವ್ಯವಸ್ಥೆಯನ್ನು ರೂಪಿಸಿಕೊಳ್ಳಲು ನಮ್ಮ ರಾಜಕೀಯ ನಾಯಕತ್ವ ಸಂಪೂರ್ಣವಾಗಿ ಸೋತಿದೆ. ಬದಲಾಗಿ, ಅಸಮಾನತೆಯನ್ನು ಹೆಚ್ಚಿಸಲು ನೆರವಾಗಬಲ್ಲ ಖಾಸಗೀಕರಣ, ಸಾರ್ವಜನಿಕ-ಖಾಸಗಿ ಸಹಭಾಗಿತ್ವ ಮತ್ತು ಶಿಕ್ಷಣದ ವ್ಯಾಪಾರೀಕರಣಕ್ಕೆ ನೆರವಾಗಬಲ್ಲ ನೀತಿ ಮತ್ತು ಕ್ರಿಯಾಯೋಜನೆಗಳನ್ನು ರೂಪಿಸಿ, ಅನುಷ್ಠಾನಗೊಳಿಸಿ ದಿನೇ ದಿನೇ ಬೆಳೆಸಿ ನೀರೆರೆಯುತ್ತಿದೆ. ಮಾನವ ಹಕ್ಕುಗಳ ಇಂದಿನ ಯುಗದಲ್ಲಿ, ಶಿಕ್ಷಣದ ಮೂಲಭೂತ ಹಕ್ಕು ಒಂದು ಪಕ್ಷರಾಜಕೀಯದ ದಾಳವಾಗಿ ಯಶಸ್ವಿಯಾಗಿದ್ದು, ದೇಶದ ಮಾನವ ಹಕ್ಕು ಮತ್ತು ಮಕ್ಕಳ ಹಕ್ಕುಗಳ ಚಳುವಳಿಗಳ ಹೋರಾಟಕ್ಕೆ ದೊಡ್ಡ ಸೋಲಾಗಿದೆ. ಈ ವಿಷಯದಲ್ಲಿ ಮಕ್ಕಳ ಹಕ್ಕುಗಳ ಬಗ್ಗೆ ಕೆಲಸ ಮಾಡುತ್ತಿರುವ ಮತ್ತು ಶಿಕ್ಷಣದ ಸಾರ್ವತ್ರೀಕರಣಕ್ಕಾಗಿ ಶತಮಾನಗಳಿಂದ ಹೋರಾಟ ನಡೆಸುತ್ತಿರುವ ಎಲ್ಲಾ ಸಂಘ ಸಂಸ್ಥೆಗಳು ಆತ್ಮಾವಲೋಕನ ಮಾಡಿಕೊಂಡು ಹೋರಾಟದ ಹೊಸ ಹಾದಿಗಳನ್ನು ಕಂಡುಕೊಳ್ಳಬೇಕಾಗಿದೆ.

**ಡಾ|| ನಿರಂಜನಾರಾಧ್ಯ ವಿ. ಪಿ.**
ಫೆಲೋ, ಮಗು ಮತ್ತು ಕಾನೂನು ಕೇಂದ್ರ
ಭಾರತ ವಿಶ್ವವಿದ್ಯಾನಿಲಯದ ರಾಷ್ಟ್ರೀಯ ಕಾನೂನು ಶಾಲೆ, ಬೆಂಗಳೂರು.

## ಸಾದರ ಸ್ವೀಕಾರ

**ಬಾಂದುಗಲ್ಲು** (ಕವನ ಸಂಕಲನ) *ಟಿ. ಹೆಚ್. ಅಪ್ಪಾಜಿಗೌಡ*
**ಪುಟ : ೧೨೪** *ಬೆಲೆ : ರೂ. ೭೦*
**ಸಿಂಚು ಮಟ್ಟಿಗ್ರಾಫ್,** ಇ-೯೯, ೨ನೇ ಹಂತ, ಕೆ. ಹೆಚ್. ಬಿ. ಕಾಲೋನಿ, ಕುವೆಂಪು ನಗರ, ಮೈಸೂರು - ೨೩.

**ಕಿರಣ ತೋರಣ** (ಕಿರು ಲೇಖನಗಳು) *ಸಿ.ಪಿ.ಕೆ.*
**ಪುಟ : ೧೬೦** *ಬೆಲೆ : ರೂ. ೮೦*
**ನಾಗಾರ್ಜುನ ಎಂಟರ್‌ಪ್ರೈಸಸ್,** ನಂ. ೫೮, ಅಕ್ಕಮಹಾದೇವಿ ರಸ್ತೆ, ದಾವಣಗೆರೆ

**ವಚನ ವರ್ಧನ** (ವಚನಗಳು) *ಸಿ.ಪಿ.ಕೆ.*
**ಪುಟ : ೯೮** *ಬೆಲೆ : ರೂ. ೭೫*
**ಚಿತ್ರಭಾನು ಪ್ರಕಾಶನ,** ೨೨೬೫/೧೯, 'ಭಾರತಿ' ೬ನೇ ಅಡ್ಡರಸ್ತೆ, ೪ನೇ ಮುಖ್ಯರಸ್ತೆ, ವಿನಾಯಕನಗರ, ಮೈಸೂರು - ೫೭೦ ೦೧೨

**ಪ್ರಭಾವನೆ** (ಬಿಡಿಬರಹಗಳು) *ಡಾ|| ಸಿ.ಪಿ.ಕೆ.*
**ಪುಟ : ೧೯೨** *ಬೆಲೆ : ರೂ. ೭೦*
**ಲಕ್ಷ್ಮಿ ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸ್,** ನಂ. ೩೪೧, ಕಾಳಮ್ಮನ ದೇವಸ್ಥಾನದ ಬೀದಿ, ಮೈಸೂರು - ೫೭೦ ೦೦೧

**ನಾಕುತಂತಿ** (ಒಂದು ಟಿಪ್ಪಣಿ) *ಡಾ|| ಜಿ. ಕೃಷ್ಣಪ್ಪ*
**ಪುಟ : ೧೬** *ಬೆಲೆ : ರೂ. ೧೦*

**ಹಾಡು ಹಕ್ಕಿ ಅಂಬಿಕಾತನಯದತ್ತ** (ವಿಮರ್ಶೆ) *ಡಾ|| ಜಿ. ಕೃಷ್ಣಪ್ಪ*
**ಪುಟ : ೧೫೨** *ಬೆಲೆ : ರೂ. ೭೫*
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
ಕಾಮಧೇನು ಪುಸ್ತಕ ಭವನ, ನಂ. ೫/೧ ನಾಗಪ್ಪ ಬೀದಿ, ಶೇಷಾದ್ರಿಪುರ, ಬೆಂಗಳೂರು - ೫೬೦ ೦೨೦

**ಸ್ನೇಹಸಾಗರದ ಮುತ್ತು ರತ್ನಗಳು** ([illegible])
ಸಂ : [illegible]
ಪುಟ : [illegible] ಬೆಲೆ : ರೂ. [illegible]
[illegible]

**ಗೋಮುಖ ವ್ಯಾಘ್ರಗಳಿಂದ ನಾಡನ್ನು ರಕ್ಷಿಸೋಣ**
**ಪುಟ : ೫೨** *ಬೆಲೆ : ರೂ. ೨೦*
**ಕರ್ನಾಟಕ ಕೋಮು ಸೌಹಾರ್ದ ವೇದಿಕೆ,** ಪ್ರಜ್ವಲ್ ನಿಲಯ, ೨ನೇ ಅಡ್ಡರಸ್ತೆ, ಬಾಪೂಜಿ ನಿಲಯ, ಶಿವಮೊಗ್ಗ

**ಮಳೆ ಹನಿ ಮುತ್ತು** (ಕವಿತೆಗಳು) *ಸಾ. ದಯಾ*
**ಪುಟ : ೬೦** *ಬೆಲೆ : ರೂ. ೬೦*
**ಮುಂಬೈ ಚುಕ್ಕಿ ಸಂಕುಲ,** ಸಿ. ೩೯, ಸಾಯಿ ಸಂಗಮ್ ಕೋ-ಆಪರೇಟಿವ್ ಹೌಸಿಂಗ್ ಸೊಸೈಟಿ, ಹಳೇ ದೊಂಬಿವಿಲಿ, ಆರ್.ಬಿ.ಐ. ಕ್ವಾರ್ಟರ್ಸ್ ಸಮೀಪ, ದೊಂಬಿವಲಿ (ಪಶ್ಚಿಮ), ಠಾಣೆ - ೪೨೧ ೨೦೨

**ಬಸವಣ್ಣನವರು ಮತ್ತು ಗುರುನಾನಕರು**
*ಪೂಜ್ಯ ಶ್ರೀ ಮಡಿವಾಳ ಸ್ವಾಮಿಗಳು*
**ಪುಟ : ೩೦** *ಬೆಲೆ : ರೂ. ೨೦*

**ಮಹಾದೇವಿ ಅಕ್ಕನ ಯೋಗಾಂಗ ತ್ರಿವಿಧಿಯಲ್ಲಿ ಶಿವಯೋಗ**
*ವ್ಹಿ. ಜಿ. ಶೀಲವಂತರ*
**ಪುಟ : ೨೨೪** *ಬೆಲೆ : ರೂ. ೧೫೦*

**ಲಿಂಗಾಯತ ಧರ್ಮ : ಇತಿಹಾಸ ಮತ್ತು ದರ್ಶನ**
*ಅನು : ಸಿದ್ಧಲಿಂಗ ದೇಸಾಯಿ*
**ಪುಟ : ೮೦** *ಬೆಲೆ : ರೂ. ೬೦*

**ಬೆಳಗಾವಿ ಜಿಲ್ಲೆಯ ಲಿಂಗಾಯತ ವಾಡೆಗಳು**
*ಡಾ|| ಸಂತೋಷ ಹಾನಗಲ್*
**ಪುಟ : ೧೬೦** *ಬೆಲೆ : ರೂ. ೧೫೦*

**ಪಾರದ ಮಲ್ಲಪ್ಪನವರು** *ಮರಾಠಿ ಮೂಲ : ನಾ. ರಾ. ಬಾಮಣಗಾಂವಕರ;*
*ಅನು : ಬಿ. ಎಸ್. ಗವಿಮಠ*
**ಪುಟ : ೧೬೪** *ಬೆಲೆ : ರೂ. ೧೫೦*
ಮೇಲಿನ ಐದು ಪುಸ್ತಕಗಳ ಪ್ರಕಾಶಕರು
ಶರಣ ಸಾಹಿತ್ಯ ಅಕಾಡೆಮಿ, ರಾಜಗುರು ಸಂಸ್ಥಾನ ಕಲ್ಮಠ, ಚೆನ್ನಮ್ಮನ ಕಿತ್ತೂರು.

**ಕವಿಶೈಲದಲ್ಲಿ ಆರು : ಬೆಳಗು ಬೈಗು**
*ಡಾ|| ಅಶೋಕ ನರೋಡೆ*
**ಪುಟ : ೧೬೦** *ಬೆಲೆ : ರೂ. ೧೦೦*
**ಅಪೂರ್ವ ಪ್ರಕಾಶನ,** ಬಸವ ನಗರ ಮಹಾಲಿಂಗಪುರ - ೫೮೭ ೩೧೨

**ವಾತ್ಸಲ್ಯಪಥ** (ಕವನ ಸಂಕಲನ) *ಡಾ|| ಅಶೋಕ ನರೋಡೆ*
**ಪುಟ : ೧೬೦** *ಬೆಲೆ : ರೂ. ೧೨೦*
**ಸಚ್ಚಿನ್ ಪಬ್ಲಿಷರ್ಸ್,** ೬೨೪, ೯ನೇ 'ಡಿ' ಮುಖ್ಯರಸ್ತೆ, ಹಂಪಿನಗರ, ಬೆಂಗಳೂರು - ೫೬೦ ೧೦೪

**ಕರುನಾಡಿನಲ್ಲಿ ಕನ್ನಡಿಗನ ತಿರುಗಾಟ** (ಪ್ರವಾಸ ಕಥನ)
*ಡಾ|| ಅಶೋಕ ನರೋಡೆ*
**ಪುಟ : ೧೨೦** *ಬೆಲೆ : ರೂ. ೭೫*
**ಕಾಲ ಪ್ರಕಾಶನ,** ೨೩/ಎ ೨ನೇ ಮಹಡಿ, ೧೧ನೇ ಅಡ್ಡರಸ್ತೆ ೧, 'ಎನ್' ಬ್ಲಾಕ್, ರಾಜಾಜಿನಗರ, ಬೆಂಗಳೂರು - ೧೦

**ಆಧುನಿಕ ವಚನಕಾರರು** (ವ್ಯಕ್ತಿಚಿತ್ರ)
*ಡಾ|| ಅಶೋಕ ನರೋಡೆ*
**ಪುಟ : ೨೩೩** *ಬೆಲೆ : ರೂ. ೨೦೦*
**ಶ್ರೀ ಗುರುಚನ್ನಬಸವೇಶ್ವರ ಗ್ರಂಥಮಾಲೆ,** ಜಂಗಮಲಿಂಗ ಕ್ಷೇತ್ರ, ಮೋಟಗಿ ಮಠ, ಅಥಣಿ - ೫೯೧ ೦೩೪

**ಕೆಳವರ್ಗದ ಪ್ರತಿಭಟನೆ : ಸಬಾಲ್ಟರ್ನ್ ಚರಿತ್ರೆ**
*ವಿಜಯ್ ಪೂಣಚ್ಚ ತಂಬಂಡ*
**ಪುಟ : ೮೭** *ಬೆಲೆ : ರೂ. ೬೦*
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ವಿದ್ಯಾರಣ್ಯ - ೫೮೩ ೨೭೬

**ಮಹಿಳೆಯರೇ ಮತ್ತು ಮಹಿಳೆಯರೇ...**
*ಜಯಪ್ರಕಾಶ ಮಾವಿನಕುಳಿ*
**ಪುಟ : ೬೪** *ಬೆಲೆ : ರೂ. ೪೫*
ಸ್ಫಟಿಕ ಪ್ರಕಾಶನ, ಮಾವಿನಕುಳಿ ಮನೆ ಮೂಡುಬಿದಿರೆ - ೫೭೪೯೯೭

# ಕಡ್ಡಾಯ ಮತ್ತು ಉಚಿತ ಶಿಕ್ಷಣ: ಮಕ್ಕಳ ಮೂಲಭೂತ ಹಕ್ಕು



*ಕಳೆದ ಒಂದು ದಶಕದಲ್ಲಿ ಸಾವಿರಾರು ಕೋಟಿ ರೂಪಾಯಿಗಳನ್ನು ವ್ಯಯಿಸಿದ್ದಾಗ್ಲೂ, ಪ್ರಾಥಮಿಕ ಅಕ್ಷರಸ್ಥರ ಹೆಚ್ಚಳವು ಯಾವ ಉತ್ತಮಿಕೆಯನ್ನೂ ಕಂಡಿಲ್ಲ.*

*- ಸಂಡೆ ಅಬ್ಸರ್ವರ್, ಏಪ್ರಿಲ್ ೨-೮, ೨೦೦೦*

*ನೂರರಲ್ಲಿ ಎಪ್ಪತ್ತು ಮಕ್ಕಳು ನಮ್ಮ ದೇಶದಲ್ಲಿ ಮೊದಲನೆಯ ತರಗತಿಯಲ್ಲಿ ದಾಖಲಾಗುತ್ತಾರೆ. ಅಲ್ಲೇನೋ ನ್ಯೂನತೆ ಇರಬೇಕು. ಅವರಲ್ಲಿ ಅರ್ಧಕ್ಕಿಂತ ಹೆಚ್ಚು ಮಕ್ಕಳು ಪ್ರಾಥಮಿಕ ಶಾಲೆಯಲ್ಲಿ ಅಭ್ಯಾಸ ಮುಗಿಯುವ ಮೊದಲೇ ಹೊರಹೋಗಿರುತ್ತಾರೆ.*

*- ಔಟ್‌ಲುಕ್, ಏಪ್ರಿಲ್ ೧೦, ೨೦೦೦*

ಸ್ವಾತಂತ್ರ್ಯಾನಂತರದ ಆರಂಭಿಕ ಕಾಲದಲ್ಲಿ ಶಾಲಾ ಶಿಕ್ಷಣವನ್ನು ನಿರ್ಲಕ್ಷಿಸಿದ ಒಂದು ದೊಡ್ಡ ತಪ್ಪು ನಮ್ಮನ್ನು ಇನ್ನೂ ಕಾಡುತ್ತಿದೆ. ಆಗ ಪ್ರತಿ ಹಳ್ಳಿಯಲ್ಲೂ ಒಂದೊಂದು ಶಾಲೆಯನ್ನು ಕಟ್ಟಿದ್ದರೆ ಈಗ ಮಕ್ಕಳ ವಿದ್ಯಾಭ್ಯಾಸದ ಸಮಸ್ಯೆ ಇಷ್ಟು ಅಗಾಧವಾಗುತ್ತಿರಲಿಲ್ಲ. ೬೦ ವರ್ಷಗಳ ಹಿಂದೆ ಶಾಸನವಾಗಬೇಕಿದ್ದ ಕಡ್ಡಾಯ ಮತ್ತು ಉಚಿತ ಶಿಕ್ಷಣ ಕೊನೆಗೆ ೨೦೧೦ರಲ್ಲಾದರೂ ಆಯಿತಲ್ಲ ಎನ್ನುವುದೇ ಸಮಾಧಾನ. ಆದರೆ ಈ ಶಾಸನ ಫಲಪ್ರದವಾಗಿ ಜಾರಿಯಾಗಬೇಕಾದರೆ ಹಲವು 'ರೆ'ಗಳು ಅಡ್ಡಬರುತ್ತವೆ. ಮೂಲಭೂತವಾಗಿ ೨-೩ ಷರತ್ತುಗಳು ನಿಜವಾಗಬೇಕಾಗಿವೆ. ಮೊಟ್ಟಮೊದಲು ಒಂದು ಕಿಲೊಮೀಟರ್ ದೂರದಲ್ಲಿ ಶಾಲೆಗಳು ಅಂದರೆ ನೈಬರ್‌ಹುಡ್ ಶಾಲೆಗಳು ಉದಯವಾಗಬೇಕು. ಎರಡನೆಯದಾಗಿ ಪ್ರತಿ ೩೦ ವಿದ್ಯಾರ್ಥಿಗಳಿಗೆ ಒಬ್ಬ ಶಿಕ್ಷಕನಂತೆ ನೇಮಕವಾಗಬೇಕು. ಮೂರನೆಯದು ವೃತ್ತಿಪರ ಶಿಕ್ಷಕರು ತಮ್ಮ ದೇಶದ ಉನ್ನತಿಯನ್ನು ಮನಸ್ಸಿನಲ್ಲಿ ಇಟ್ಟುಕೊಂಡು ಮನಃಪೂರ್ವಕವಾಗಿ ಕೆಲಸ ಮಾಡಬೇಕು. ಈ ಶಾಸನ ಸಾರ್ಥಕತೆ ಪಡೆಯಬೇಕಾದರೆ ಈ ಮೂರು ಷರತ್ತುಗಳು ಈಡೇರಬೇಕಾಗುತ್ತವೆ. ಈ ಮೂರರಲ್ಲಿ ಯಾವುದೊಂದು ಸೋತರೂ ಶಾಸನ ಊರ್ಜಿತವಾಗುವುದಿಲ್ಲ. ಮಕ್ಕಳ ಹಕ್ಕು ಕಾಗದದ ಮೇಲೆ ಉಳಿಯುತ್ತದೆ.

ಕಡ್ಡಾಯ ಶಿಕ್ಷಣ ಸಾಧ್ಯವಾಗಬೇಕಾದರೆ ಎಷ್ಟು ಹೊಸ ಶಾಲೆಗಳನ್ನು ತಕ್ಷಣ ಕಟ್ಟಬೇಕು ಎನ್ನುವುದರ ಬಗ್ಗೆ ನಿಖರವಾದ ಮಾಹಿತಿ ಇಲ್ಲ. ದೇಶದಾದ್ಯಂತ ತೆಗೆದುಕೊಂಡರೆ ಇದು ಲಕ್ಷಗಟ್ಟಲೆ ಆಗಬಹುದು. ಆದರೆ ಎಷ್ಟು ಶಿಕ್ಷಕರ ಅವಶ್ಯಕತೆ ಇದೆ ಎನ್ನುವುದರ ಬಗ್ಗೆ ಈಗ ಮಾಹಿತಿ ಇದೆ. ಕಡ್ಡಾಯ ಶಿಕ್ಷಣ ಪರಿಣಾಮಕಾರಿಯಾಗಿ ಜಾರಿಯಾಗಬೇಕಾದರೆ ೧೩ ಲಕ್ಷ ಶಿಕ್ಷಕರ ಅವಶ್ಯಕತೆ ಇದೆ. ಇದರಲ್ಲಿ ೭ ಲಕ್ಷ ಈಗ ಕೆಲಸ ಮಾಡುತ್ತಿದ್ದಾರೆ. ಅಂದರೆ ಉಳಿದ ೬ ಲಕ್ಷ ಶಿಕ್ಷಕರ ನೇಮಕವಾಗಬೇಕು. ಇದನ್ನು ಕೇಂದ್ರ ಮಾನವ ಸಂಪನ್ಮೂಲ ಅಭಿವೃದ್ಧಿ ಸಚಿವ ಕಪಿಲ್ ಸಿಬಲ್ ಅವರೆ ಟಿವಿ ಸಂದರ್ಶನದಲ್ಲಿ ಒಪ್ಪಿಕೊಂಡಿದ್ದಾರೆ. ದೇಶದಲ್ಲಿ ೬ ಲಕ್ಷ ಶಿಕ್ಷಕರ ಅವಶ್ಯಕತೆ ಇದ್ದಾಗಲೂ ಹಿಂದಿನ ಮಂತ್ರಿಗಳು ಏನು ಮಾಡುತ್ತಿದ್ದರು ? ಅರ್ಜುನ್ ಸಿಂಗ್ ಏನು ಮಾಡುತ್ತಿದ್ದರು ? ಒಬ್ಬರಲ್ಲ ಇಬ್ಬರಲ್ಲ ೬ ಲಕ್ಷ ಶಿಕ್ಷಕರ ಅವಶ್ಯಕತೆ ಇದ್ದಾಗಲೂ ರಾಜ್ಯ ಸರ್ಕಾರಗಳು ಏನು ಮಾಡುತ್ತಿದ್ದವು ? ನೇಮಕಾತಿಗೆ ಲಂಚ, ವರ್ಗಾವಣೆಗೆ ಲಂಚ ಹೀಗೆ ಸುಲಿಗೆಗಾಗೆ ಬರುವ ಮಂತ್ರಿಗಳು ಮಕ್ಕಳ ವಿದ್ಯಾಭ್ಯಾಸದ ಬಗ್ಗೆ ಏನು ಗಮನಹರಿಸಬಲ್ಲರು ? ಈಗಲೂ ಈ ಲಂಚಕೋರರು ಶಿಕ್ಷಕರ ನೇಮಕಾತಿಯಲ್ಲಿ ಸುಲಿಗೆ ಮಾಡಲು ಅಡ್ಡಬರುವುದಿಲ್ಲ ಎಂಬುದಕ್ಕೆ ಯಾರಿಂದಲೂ ಆಶ್ವಾಸನೆ ಸಿಗುವುದಿಲ್ಲ. ಉತ್ತರ ಪ್ರದೇಶದ ಮುಖ್ಯಮಂತ್ರಿ ಮಾಯಾವತಿಯವರು ಕಡ್ಡಾಯ ಶಿಕ್ಷಣದ ಕಾಯಿದೆಯನ್ನು ಜಾರಿಮಾಡಲು ಹಣವಿಲ್ಲ ಎಂದಿದ್ದಾರೆ. ನಿಜ. ಮಾಯಾವತಿಯವರಿಗೆ ಕಾಲು ತುಳಿತಕ್ಕೆ ಸಿಕ್ಕಿ ಸತ್ತವರಿಗೆ ಪರಿಹಾರ ಕೊಡಲು, ಕಡ್ಡಾಯ ಶಿಕ್ಷಣದ ಕಾಯಿದೆಯನ್ನು ಜಾರಿ ಮಾಡಲು ಹಣವಿಲ್ಲ. ತಮ್ಮ ಪ್ರತಿಮೆಗಳನ್ನು ಸ್ಥಾಪಿಸಲು ಮತ್ತು ಅವುಗಳಿಗೆ ಕಾವಲು ಹಾಕಿ ರಕ್ಷಣೆ ಮಾಡುವವರಿಗೆ ಸಂಬಳವನ್ನು ಕೊಡಲು ಹಣವಿದೆ. ಆದರೆ ಕಡ್ಡಾಯ ಶಿಕ್ಷಣದ ಕಾಯಿದೆಯನ್ನು ಜಾರಿಮಾಡಲು ಹಣವಿಲ್ಲ! ಮಾಯಾವತಿಯವರು ೨೦೦೦ದಿಂದ ೩೦೦೦ ಕೋಟಿ ಹಣವನ್ನು ಪ್ರತಿಮೆಗಳ ಮೇಲೆ ಸುರಿದಿದ್ದಾರೆ. ಅದೇ ಹಣವನ್ನು ಕಡ್ಡಾಯ ಶಿಕ್ಷಣಕ್ಕಾಗಿ ಬಳಸಿದ್ದರೆ ಎಷ್ಟು ಮಕ್ಕಳನ್ನು ಶಾಲೆಗೆ ತರಬಹುದಿತ್ತು ಎನ್ನುವುದನ್ನು ಓದುಗರು ವಿಶ್ಲೇಷಣೆ ಮಾಡಲಿ. ನಮ್ಮ ಸಾಮಾಜಿಕ ಆದ್ಯತೆಗಳೇನು ಎಂದು ತಿಳಿಯದ, ಅಥವಾ ತಿಳಿದುಕೊಳ್ಳಲು ಪ್ರಯತ್ನವೂ ಪಡದ ಜನ ಅಧಿಕಾರ ಹಿಡಿದಿದ್ದಾರೆ ಎನ್ನುವುದು ಈಗ ಸ್ಪಷ್ಟವಾಗುತ್ತದೆ. ಈ ನಡುವೆ ಮಕ್ಕಳನ್ನು ಕೇಳುವವರಾರು ? ಅವರ ಬಿಸಿಯೂಟಕ್ಕೆಂದು ಕೊಡುವ ಹಣವನ್ನು ಕದ್ದು ಮಕ್ಕಳಿಗೆ ಹುಳುಗಳಿರುವ ಊಟ ಕೊಡುವ ರಾಜಕಾರಣಿಗಳಿಂದ ಏನಾದರೂ ದೇಶ ಮುಂದುವರಿಸುವ ಕೆಲಸ ನಡೆಯುತ್ತದೆ ಎಂದು ನಂಬಲು ಸಾಧ್ಯವೆ ? ಈ ದೇಶದ ಬೆಳವಣಿಗೆಗೆ ಪ್ರತಿ ಮಕ್ಕಳ ವಿದ್ಯಾಭ್ಯಾಸ ಅತಿ ಮುಖ್ಯ. ಆದರೂ ರಾಜ್ಯ ಸರ್ಕಾರಗಳು ಮೂಕರಾಗಿ ಕುಳಿತಿದ್ದವು. ಈಗಲೂ ಎಲ್ಲ ರಾಜ್ಯಗಳು ಮನಸ್ಸು ಮಾಡಿದರೆ ೬ ಲಕ್ಷ ಶಿಕ್ಷಕರನ್ನು ಮುಂದಿನ ತಿಂಗಳುಗಳಲ್ಲಿ ನೇಮಿಸಿಬಿಡಬಹುದು; ಅಂದರೆ ಶಿಕ್ಷಕರಿಗೆ ಬೇಕಾದ ತರಬೇತಿ ಇಲ್ಲದಿದ್ದರೂ ಪದವಿ ಇರುವವರನ್ನು ನೇಮಿಸಿಕೊಂಡು ೫ ವರ್ಷದೊಳಗೆ ಅವರಿಗೆ ತರಬೇತಿ ಪಡೆದುಕೊಳ್ಳಲು ಅವಕಾಶ ಕೊಡಲಾಗುತ್ತದೆ ಎನ್ನುತ್ತಾರೆ ಕಪಿಲ್ ಸಿಬಲ್. ೫ ವರ್ಷ ಜಾಸ್ತಿಯಾಗುತ್ತದೆ. ೩ ವರ್ಷದೊಳಗೆ ಅವರು ತರಬೇತಿ




ಎನ್. ಎಸ್. ರಘುನಾಥ್

ಪಡೆದುಕೊಳ್ಳಬೇಕು. ಕಾರಣ ೫ ವರ್ಷಗಳು ತರಬೇತಿ ಇಲ್ಲದೆ ಪಾಠ ಮಾಡುವ ಶಿಕ್ಷಕರು ಸುಲಭ ರೀತಿಗೆ ಒಗ್ಗಿಕೊಂಡು ಬದಲಾವಣೆಗೆ ಅವರಲ್ಲಿ ವಿರೋಧ ಬೆಳೆದು ಕೊಳ್ಳುತ್ತದೆ. ನಿರೀಕ್ಷೆಯ ಮಟ್ಟದಲ್ಲಿ ವಿದ್ಯಾಭ್ಯಾಸ ಮಕ್ಕಳಿಗೆ ಸಿಗುವುದಿಲ್ಲ. ಆದುದರಿಂದ ಅಂಥವರಿಗೆ ೩ ವರ್ಷಮಾತ್ರ ಸಾಕು. ಆದರೆ ಇವರಿಗೆ ತರಬೇತಿ ಕೊಡುವವರು ಯಾರು? ಇದು ಬಹು ಮುಖ್ಯವಾದ ಪ್ರಶ್ನೆ. ಎನ್‌ಸಿಇಆರ್‌ಟಿ ಈ ವಿಚಾರದಲ್ಲಿ ಸಂಪೂರ್ಣ ಸೋತು ರಾಷ್ಟ್ರದ ನಂಬಿಕೆ ಕಳೆದುಕೊಂಡಿದೆ. ಈ ಸಂಸ್ಥೆಯಲ್ಲಿ ಇಂಥ ಬೃಹತ್ ಪ್ರಮಾಣದಲ್ಲಿ ತರಬೇತಿ ಮಾಡಲು ಸಾಕಷ್ಟು ಶಿಕ್ಷಕರೇ ಇಲ್ಲ. ಹೀಗಾಗಿ ಹೊರದೇಶದಿಂದ ಈ ಸಂಸ್ಥೆಗೆ ಇಂಗ್ಲಿಷ್ ಕಲಿಯಲು ಬಂದಿರುವವರಿಗೂ ಸರಿಯಾದ ಅನುಭವವಿಲ್ಲದ ಬಾಡಿಗೆ ಶಿಕ್ಷಕರಿಂದ ಶಿಕ್ಷಣ ನೀಡ ಲಾಗುತ್ತಿದೆ. ಈ ರೀತಿಯ ತರಬೇತಿಯ ಗುಣಮಟ್ಟ ಹೇಗಿರುತ್ತದೆ ಎನ್ನುವುದನ್ನು ಸಾರ್ವಜನಿಕರು ಪ್ರಶ್ನೆ ಮಾಡಬೇಕು. ೮೦ರ ದಶಕದಿಂದ ಈ ಸಂಸ್ಥೆ ಪ್ರಾಥಮಿಕ ಶಿಕ್ಷಣವನ್ನು ಎಲ್ಲ ಮಕ್ಕಳಿಗೆ ತಲುಪಿಸಲು ಆರಂಭಿಸಿದ 'ಕನಿಷ್ಠ ಮಟ್ಟದ ಕಲಿಕೆ', 'ಕಪ್ಪು ಹಲಗೆ ಚಳವಳಿ', ಸಂಪೂರ್ಣವಾಗಿ ವಿಫಲವಾಗಿವೆ. 'ಸರ್ವ ಶಿಕ್ಷಾ ಅಭಿಯಾನ' ಖರ್ಚು ಮಾಡಿರುವ ಹಣಕ್ಕೆ ತಕ್ಕಂತೆ ಪ್ರತಿಫಲ ದೊರೆತಿಲ್ಲ. ಮೇಲೆ ದೇಶದ ಎರಡು ವಾರಪತ್ರಿಕೆಗಳಲ್ಲಿ ಬಂದ ವರದಿಯಿಂದ ಉಲ್ಲೇಖಿಸಿರುವ ವಾಕ್ಯಗಳು ಈ ಎನ್‌ಸಿಇಆರ್‌ಟಿ ಕಾರ್ಯಕ್ರಮಗಳನ್ನು ಆಧರಿಸಿಯೆ ಬರೆದವು. ಅದರ ಈ ಕೀರ್ತಿ ಹಿಂದಿನ ನಿರ್ದೇಶಕರು ಗಳಾದ ಎ. ಕೆ. ಶರ್ಮ, ಜೆ. ಎಸ್. ರಜಪೂತ್ ಮತ್ತು ಕೃಷ್ಣಕುಮಾರ್ ಅವರುಗಳಿಗೆ ತಲುಪುತ್ತದೆ. ರಾಜ್ಯ ಸರ್ಕಾರ ನಡೆಸುತ್ತಿರುವ ಡಯಟ್ ಮತ್ತು ಡಿಎಸ್‌ಇಆರ್‌ಟಿಗಳು ಯಾವ ಮಟ್ಟದಲ್ಲಿ ಕೆಲಸ ಮಾಡುತ್ತಿವೆ ಎನ್ನುವುದು ಎಲ್ಲರಿಗೂ ತಿಳಿದಿರುವ ವಿಷಯ. ಇವುಗಳಿಂದ ಹೆಚ್ಚಿನದನ್ನು ನಿರೀಕ್ಷೆ ಮಾಡುವುದು ತಪ್ಪು ಆಶಾವಾದವೇ ಆಗಬಹುದು. ವಾಸ್ತವ ವಿರುದ್ಧವಾಗಿರುತ್ತದೆ. ಅವಶ್ಯ ತರಬೇತಿ ಇರುವ ಶಿಕ್ಷಕರು ಇಲ್ಲದಿದ್ದರೆ ಮಕ್ಕಳ ವಿದ್ಯಾಭ್ಯಾಸದ ಮೂಲಭೂತ ಹಕ್ಕಿಗೆ ಧಕ್ಕೆ ಮುಂದುವರಿಯುತ್ತದೆ. ಇಂಗ್ಲಿಷ್ ಭಾಷೆ ಹೇಳಿಕೊಡುವ ಶಿಕ್ಷಕರನ್ನು ವಿಶ್ವವಿದ್ಯಾಲಯಗಳು ತಯಾರು ಮಾಡುತ್ತಿಲ್ಲ. ಮಾಡುವ ಯಾವ ಕಾರ್ಯಕ್ರಮವನ್ನೂ ಅವು ರೂಪಿಸುತ್ತಿಲ್ಲ. ಹಾಗೆ ರೂಪಿಸುವ ಪ್ರಾಧ್ಯಾಪಕರೂ ಇಂಗ್ಲಿಷ್ ವಿಭಾಗಗಳಲ್ಲಿ ಕಾಣುತ್ತಿಲ್ಲ. ಹೀಗಾಗಿ ಅಷ್ಟು ಇಂಗ್ಲಿಷ್ ಶಿಕ್ಷಕರು ಸಿಗುವುದೂ ಕಷ್ಟ.

ಇನ್ನೊಂದು ಬಹು ಮುಖ್ಯ ಸಮಸ್ಯೆ ಎಂದರೆ ಶಾಲೆ ಗಳಲ್ಲಿ ಕುಡಿಯುವ ನೀರು, ಶೌಚಾಲಯಗಳೇ ಇರುವುದಿಲ್ಲ. ಈ ಕಾರಣಕ್ಕಾಗಿಯೆ ಪೋಷಕರು ಹೆಣ್ಣುಮಕ್ಕಳನ್ನು ಶಾಲೆಯಿಂದ ಹಿಂದಕ್ಕೆ ಕರೆಸಿಕೊಳ್ಳುತ್ತಾರೆ. ಆದುದರಿಂದ ಕುಡಿಯುವ ನೀರಿನ ಹಾಗೂ ಶೌಚಾಲಯಗಳ ಸೌಕರ್ಯ ಗಳನ್ನು ಒದಗಿಸಿಕೊಳ್ಳಲು ೩ ವರ್ಷ ಅವಕಾಶ ಕೊಡ ಲಾಗುತ್ತದೆ ಎನ್ನುತ್ತಾರೆ ಕಪಿಲ್ ಸಿಬಲ್. ಈ ೩ ವರ್ಷ ಗಳಲ್ಲಿ ಎಷ್ಟು ಜನ ಹೆಣ್ಣುಮಕ್ಕಳು ಶಾಲೆಬಿಟ್ಟು ಹೋಗುತ್ತಾರೆ ಎನ್ನುವುದನ್ನು ಅವರು ಗಮನಿಸುತ್ತಿಲ್ಲ. ಶಾಲೆಗೆ ಸೇರುವ ವಿದ್ಯಾರ್ಥಿಗಳಲ್ಲಿ ೧೫ ಮಿಲಿಯನ್ ಮಾತ್ರ ಕಾಲೇಜು ತಲುಪುತ್ತಾರೆ; ಉಳಿದ ೨೦೦. ಮಿಲಿಯನ್ ಕಾಲೇಜು ತಲುಪುವುದೇ ಇಲ್ಲ. ಎನ್ನುವ ಅಂಶ ಕಪಿಲ್ ಸಿಬಲ್ ಅವರ ಜೊತೆಯ ಚರ್ಚೆಯಲ್ಲಿ ಪ್ರಕಟವಾಯಿತು. ಅವರೇ ಹೇಳುತ್ತಿರುವಂತೆ ಇದು ೮೮%. ಇಷ್ಟು ಪ್ರಮಾಣ ದಲ್ಲಿ ನಮ್ಮ ದೇಶದ ಮಾನವ ಸಂಪನ್ಮೂಲ ಸೋರಿ ಹೋಗುತ್ತಿದ್ದರೂ ಹಿಂದಿನ ಯಾವ ಕೇಂದ್ರ ಅಥವಾ ರಾಜ್ಯ ಸರ್ಕಾರಗಳೂ ಏನನ್ನೂ ಮಾಡದೆ ತಮ್ಮ ಮಂತ್ರಿ ಪದವಿಯನ್ನು ಗಿಟ್ಟಿಸುವುದು, ಹೊಸ ಕಾರುಗಳು, ಹೊಸ ರೆಸಾರ್ಟ್‌ಗಳನ್ನು ಹುಡುಕುವುದು, ಲೂಟಿ ಮಾಡಬಹುದಾದ ಗಣಿಗಳನ್ನು ಹುಡುಕುವುದು ಇದರಲ್ಲೇ ಕಳೆದಿದ್ದಾರೆ ಎನ್ನುವುದು ಸ್ಪಷ್ಟವಾಗುತ್ತದೆ. ಇದು ನಮ್ಮ ಮುಗ್ಧ ಮಕ್ಕಳಿಗೆ



ಈ ಸರ್ಕಾರಗಳು ಮಾಡಿರುವ ದ್ರೋಹ ಎಂದೇ ಪರಿಗಣಿಸಬೇಕಾಗುತ್ತದೆ.

ಮೂರನೆಯದಾಗಿ, ಪ್ರತಿ ಕ್ಷೇತ್ರದಲ್ಲೂ ಒಂದು ಸಮಿತಿಯನ್ನು ರಚಿಸಿ ಆ ಕ್ಷೇತ್ರದಲ್ಲಿ ಶಾಲೆಗೆ ಹೋಗದೆ ಮನೆಯಲ್ಲಿರುವ, ಬೀದಿಯಲ್ಲಿರುವ ಮಕ್ಕಳನ್ನು ಶಾಲೆಗೆ ಸೇರಿಸುವ ಕೆಲಸ ತತ್‌ಕ್ಷಣ ಆಗಬೇಕು. ಇದಕ್ಕೆ ಕಾಯಿದೆಯಲ್ಲೆ ಅವಕಾಶವಿದೆ. ಇದರ ಜೊತೆಗೆ ಈಗ ಫೀಜು ಕಟ್ಟಿಲ್ಲ, ಸಮವಸ್ತ್ರ ಹೊಲಿಸಿಕೊಳ್ಳಲು ಶಕ್ತಿಯಿಲ್ಲ, ಶಾಲೆಗೆ ಸರಿಯಾಗಿ ಬರುತ್ತಿಲ್ಲ, ಇತ್ಯಾದಿ ಕಾರಣಗಳಿಂದ ಶಾಲೆಗಳಿಂದ ಹೊರಗಟ್ಟಿರುವ ಮಕ್ಕಳನ್ನು ಮೊದಲು ವಾಪಸ್ ಶಾಲೆಗೆ ಸೇರಿಸುವ ಕೆಲಸ ಅಷ್ಟೇ ತ್ವರಿತವಾಗಿ ನಡೆಯ ಬೇಕು. ಅವರನ್ನು ಶಾಲೆಗೆ ವಾಪಸ್ ಸೇರಿಸಿಕೊಳ್ಳಲು ತಿರಸ್ಕರಿಸುವ ಶಾಲೆಗಳ ಮೇಲೆ ಒಂದು ಲಕ್ಷ ಜುಲ್ಮಾನೆ ಮತ್ತು ಮಾನ್ಯತೆ ರದ್ದುಮಾಡುವ ಶಿಕ್ಷೆಯನ್ನು ಶಾಸನದಲ್ಲಿ ಸೂಚಿಸಲಾಗಿದೆ. ಯಾವ ಮುಲಾಜಿಲ್ಲದೆ ಕಾನೂನು ಕ್ರಮ ಜರುಗಿಸಬೇಕು. ಹಾಗಲ್ಲದೆ ಎನ್‌ಸಿಟಿಇ, ಬಿಎಡ್ ಕಾಲೇಜು ಗಳನ್ನು ರೆಗ್ಯುಲೇಟ್ ಮಾಡದೆ ಬಿಟ್ಟಿರುವಂತೆ ಮಾಡಿದರೆ ಶಾಸನಕ್ಕೆ ಯಾವ ಬೆಲೆಯೂ ಬರುವುದಿಲ್ಲ. ಯಾರ ಒತ್ತಡಕ್ಕೂ ಮಣಿಯದೆ ಕಾನೂನು ಜಾರಿಯಾಗಬೇಕು. ಅದನ್ನು ಮಾಡುವಂತಹ ಪ್ರಾಮಾಣಿಕ ಅಧಿಕಾರಿಗಳನ್ನು ಸರಿಯಾದ ಸ್ಥಾನಕ್ಕೆ ತರಬೇಕು. ಇದು ನಡೆಯದಿದ್ದಲ್ಲಿ ಕಾಯಿದೆಯಿಂದ ಬಡ ಮಕ್ಕಳಿಗೆ ಯಾವ ಲಾಭವೂ ಆಗುವುದಿಲ್ಲ. ಇದರ ಉಸ್ತುವಾರಿ ನೋಡಿಕೊಳ್ಳಲು ಕ್ಷೇತ್ರದ ನಾಗರಿಕರಿಂದ ರಚಿತವಾದ ಸಮಿತಿಯೊಂದನ್ನು ರಚಿಸಿಕೊಳ್ಳಬೇಕಾಗುತ್ತದೆ. ಇದರಲ್ಲಿ ೫೦% ಮಹಿಳೆಯರು ಇರಬೇಕು. ಈ ಸಮಿತಿಯನ್ನು ನೇಮಿಸಲು ವಿಶ್ವವಿದ್ಯಾಲಯ ಗಳು ಮುಂದಾಳತ್ವ ವಹಿಸುವ ಜವಾಬ್ದಾರಿ ಇದೆ. ವಿಶ್ವವಿದ್ಯಾಲಯದ ಕುಲಪತಿಗಳು ಇದನ್ನು ಗಂಭೀರವಾಗಿ ಪರಿಗಣಿಸಿ ಸಮಿತಿಗಳನ್ನು ತತ್‌ಕ್ಷಣ ರಚಿಸಿ ಶಾಲಾ ಆಡಳಿತ ವರ್ಗದ ಮೇಲೆ ಒತ್ತಡ ಹೇರಬೇಕು. ಈ ಸಮಿತಿಗಳು ಕೊಡುವ ವರದಿಯನ್ನು ಪರಿಶೀಲಿಸಿ ಅಧಿಕಾರಿಗಳು ಸಮಯ ಹಾಳುಮಾಡದೆ ಕ್ರಮ ಜರುಗಿಸಬೇಕು.

ಈ ವಿಚಾರದಲ್ಲಿ ಟಿವಿಯಲ್ಲಿ ಬಹಳ ಚರ್ಚೆ ನಡೆಯುತ್ತಿದೆ. ಬಡ ಸಂಸಾರದಿಂದ ಬರುವ ಮಕ್ಕಳಲ್ಲಿ ಹುಟ್ಟಿನಿಂದಲೇ ಇರುವ ಬೌದ್ಧಿಕ ಪ್ರತಿಭೆಯನ್ನು ಅವರ ಆರ್ಥಿಕ ಬಡತನದ ಜೊತೆ ಸಮಗೊಳಿಸಿ ಅಳೆಯುವ ಅಭಿಪ್ರಾಯಗಳು ಈ ಚರ್ಚೆಗಳಲ್ಲಿ ಕೇಳಿಬರುತ್ತಿವೆ. ಫ್ರೆಡ್ರಿಕ್ ನೀಚೆಯ ಕೆಲ ತತ್ವಗಳನ್ನು ಮತ್ತೂ ವಿಕೃತಗೊಳಿಸಿ ಮಾತನಾಡುವ ವ್ಯಕ್ತಿಗಳ ಮನುಷ್ಯತ್ವದ ಗುಣಗಳಲ್ಲಿ ಕೊರತೆ ಇದೆ ಎಂದೇ ಹೇಳಬೇಕಾಗುತ್ತದೆ. ಸಾಹಿತ್ಯದಲ್ಲಿ ನೊಬೆಲ್ ಪಾರಿತೋಷಕ ಪಡೆದ ಅಲ್ಜೀರಿಯಾದ ಕಾದಂಬರಿಕಾರ ಆಲ್‌ಬೆರ್ ಕಾಮು ಒಬ್ಬ ಮನೆಗೆಲಸದವಳ ಮಗ; ಅದೇ ಪಾರಿತೋಷಕಕ್ಕೆ ಅರ್ಹನಾಗುವ ಕೆಲಸ ಮಾಡಿದ ಡಿ. ಎಚ್. ಲಾರೆನ್ಸ್ ನಾಟಿಂಗ್‌ಹ್ಯಾಮ್‌ಶೈರ್‌ನ ಒಬ್ಬ ಗಣಿ ಕೂಲಿಕಾರನ ಮಗ. ಮಹಾರಾಷ್ಟ್ರದ ಕೇಂದ್ರ ಸಾಹಿತ್ಯ ಅಕಾಡೆಮಿ ವಿಜೇತ ಶರಣಕುಮಾರ್ ಲಿಂಬಾಳೆ ಯವರ ಹಿನ್ನೆಲೆ ಏನು ಎಂಬುದು ಎಲ್ಲರಿಗೂ ತಿಳಿದಿರುವ ವಿಷಯ. ಡಿಕಿನ್ಸ್, ದಾಸ್ತೋವ್‌ಸ್ಕಿ, ಕಾರ್ಲ್ ಮಾರ್ಕ್ಸ್, ಮೇರಿ ಕ್ಯೂರಿ ಇತ್ಯಾದಿಯವರ ಹಿನ್ನೆಲೆಯನ್ನು ನೋಡಿದರೆ ಹುಟ್ಟಿಗೂ ಪ್ರತಿಭೆಗೂ ಯಾವ ಸಂಬಂಧವಿಲ್ಲ ಎನ್ನುವುದು ಸ್ಪಷ್ಟವಾಗುತ್ತದೆ. ಶ್ರೀಮಂತ ಸಿನಿಮಾ ನಟನ ಮಕ್ಕಳಾದ

ಮಾತ್ರಕ್ಕೆ ಅವರು ಉತ್ತಮ ಎಂದು ಹೇಳುವುದು ಅವಿದ್ಯಾವಂತ ಫ್ಯಾಸಿಸ್ಟ್ ಧೋರಣೆಯ ಕೊಳೆತ ಪ್ರತಿರೂಪ ಎಂದೇ ಪರಿಗಣಿಸಬೇಕಾಗುತ್ತದೆ. ಮಕ್ಕಳಿಗೆ ವಿದ್ಯಾಭ್ಯಾಸ ಮೂಲಭೂತ ಹಕ್ಕು ಎನ್ನುವ ಶಾಸನ ಇಂಥ ಅಮಾನವೀಯ ಧೋರಣೆಗಳನ್ನು ತೊಡೆದುಹಾಕುವ ಉದ್ದೇಶಕ್ಕಾಗಿಯೆ ಇದೆ ಎಂದು ನಂಬಿದ್ದೇನೆ.

ಇನ್ನು ಈ ಕಾಯಿದೆಯಲ್ಲಿ ಇರುವ ಕೆಲವು ದೋಷಗಳನ್ನು ಪರಿಶೀಲಿಸೋಣ. ಒಂದರಿಂದ ಆರನೇ ವಯಸ್ಸಿನ ವರೆಗೆ ಮಕ್ಕಳ ವಿದ್ಯಾಭ್ಯಾಸದ ಬಗ್ಗೆ ಈ ಕಾಯಿದೆ ಏನನ್ನೂ ಹೇಳುವುದಿಲ್ಲ. ಈ ವಯಸ್ಸು ಮಕ್ಕಳ ಗ್ರಹಣ ಶಕ್ತಿ, ಮೋಟಾರ್ ಬೆಳವಣಿಗೆ ಮತ್ತು ಭಾಷೆ ಪಡೆದುಕೊಳ್ಳುವ ವಯಸ್ಸು. ಈ ವಯಸ್ಸಿನಲ್ಲಿ ಈ ಬೆಳವಣಿಗೆಗಳಿಗೆ ಸರಿಯಾದ ಪೋಷಣೆ ದೊರೆಯದಿದ್ದಲ್ಲಿ ಜೀವನ ದುದ್ದಕ್ಕೂ ಅವರ ಸೃಜನಶೀಲತೆಗೆ ಅಪಾಯವಾಗಬಹುದು. ಮತ್ತು ಮೊದಲ ಭಾಷೆ ಪಡೆದುಕೊಳ್ಳುವ ಪ್ರಕ್ರಿಯೆ ತಾಯಿಯ ಗರ್ಭದಲ್ಲೆ ಆರಂಭವಾಗಿರುತ್ತದೆ ಎನ್ನುವುದು ಈಗ ಭಾಷಾವಿಜ್ಞಾನಿಗಳು ಮತ್ತು ಶಿಕ್ಷಣತಜ್ಞರು ಗಂಭೀರವಾಗಿ ಪರಿಗಣಿಸುತ್ತಿರುವ ವಿಷಯವಾಗಿದೆ. ಇದು ಗ್ರಹಣಶಕ್ತಿ ಭಾಷಾಶಾಸ್ತ್ರಜ್ಞರು ಮತ್ತು ವೇದನಾ ವಿಜ್ಞಾನಿಗಳು ಗಂಭೀರವಾಗಿ ತೆಗೆದುಕೊಳ್ಳುವ ಸಂಶೋಧನೆಯ ವಿಷಯವಾಗಿದೆ. ಆರಂಭದ ವರ್ಷಗಳಲ್ಲಿ ಇದರ ಬೆಳವಣಿಗೆಗೆ ಸರಿಯಾದ ಪೋಷಣೆ ಬೇಕಾಗುತ್ತದೆ. ಮೂಲಭೂತ ಹಕ್ಕಿನ ಕಾಯಿದೆ ಈ ಅಂಶವನ್ನು ಗೌಣವಾಗಿ ಪರಿಗಣಿಸಿ ಅವರನ್ನು ಹಕ್ಕಿನಿಂದ ಹೊರಗಿಟ್ಟಿದೆ. ಇದು ಸರಿ ಹೋಗದಿದ್ದಲ್ಲಿ, ಅಂದರೆ ಇದಕ್ಕೆ ತಿದ್ದುಪಡಿ ಬರದಿದ್ದಲ್ಲಿ ಅವರು ತಮ್ಮ ಹಕ್ಕಿನಿಂದ ಅರ್ಧ ವಂಚಿತರಾಗಿದ್ದಾರೆ ಎಂದೇ ಪರಿಗಣಿಸಬೇಕಾಗುತ್ತದೆ. ಹಾಗೆಯೆ ಈ ಹಕ್ಕು ೧೦ನೇ ತರಗತಿಯವರೆಗೂ ಮುಂದುವರಿದಿದ್ದರೆ ಮಕ್ಕಳಿಗೆ ಯಾವುದೋ ಒಂದು ಹುದ್ದೆ ಗಳಿಸಲು ಅವಕಾಶವಾಗುತ್ತಿತ್ತು.

ಇಲ್ಲಿ ಒಂದು ವಿಷಯವನ್ನು ಗಮನಿಸಬೇಕು. ಖಾಸಗಿ ಶಾಲೆಗಳಲ್ಲಿ ಕೇವಲ ೨೫% ಮಕ್ಕಳನ್ನು ಸೇರಿಸಿಕೊಂಡು ಅವರ ಫೀಸನ್ನು ಸರ್ಕಾರದಿಂದ ಪಡೆಯಬೇಕೆಂದು ನಿಯಮವಿದೆ. ಆದರೆ ೭೫% ಅನ್ನು ಅವರಿಗೆ ಬಿಟ್ಟಿರುವುದು ವಿದ್ಯಾಭ್ಯಾಸದ ಮಟ್ಟದಲ್ಲಿ ತಾರತಮ್ಯವನ್ನು ಮುಂದುವರಿಸಿದಂತಾಗುತ್ತದೆ. ಹತ್ತನೆ ತರಗತಿಯವರೆಗೂ ಶಾಲಾ ವಿದ್ಯಾಭ್ಯಾಸ ಸರ್ಕಾರದ ಹಿಡಿತದಲ್ಲಿರಬೇಕು. ಆದರೆ ಅಮೆರಿಕ ಸರ್ಕಾರವನ್ನು ಒಲೈಸುತ್ತ ಅವರ ಕೃಪೆಯಿಂದ ನಡೆಯುತ್ತಿರುವ ಕಾರ್ಪೊರೇಟ್ ಸೆಕ್ಟರ್‌ಗಳನ್ನು ಪೋಷಿಸುತ್ತ ನಡೆದಿರುವ ಸರ್ಕಾರದ ಬೆಂಬಲ ಖಾಸಗಿಯವರ ಕಡೆಗೆ ಇರುತ್ತದೆ. ಇದು ಶಾಸನದಲ್ಲಿರುವ ಒಂದು ಪ್ರಮುಖ ದೋಷ.

ಇದಕ್ಕೆಲ್ಲ ಕೇಂದ್ರ ಸರ್ಕಾರ ಒದಗಿಸಿರುವ ಒಟ್ಟು ಹಣ ೩೭೮೦ ಕೋಟಿ. ಇದು ದ್ವಿಗುಣ, ತ್ರಿಗುಣವಾಗಲಿ. ಅದಕ್ಕಿಂತಲೂ ಹೆಚ್ಚಾಗಲಿ. ಈ ದೇಶದ ಸಂಪತ್ತು, ಸಂಪನ್ಮೂಲ ಇರುವುದೇ ಈ ದೇಶದ ಪ್ರಜೆಗಳ ಬೆಳವಣಿಗೆಗಾಗಿ, ಕ್ರಿಮಿನಲ್ ರಾಜಕಾರಣಿಗಳ ರಕ್ಷಣೆಗಲ್ಲ. ಜೈಲಿನಲ್ಲಿರಬೇಕಾದ ಈ ಕೆಲವು ರಾಜಕಾರಣಿಗಳನ್ನು ಅವರ ವಿರೋಧಿಗಳಿಂದ, ಕಾನೂನಿನಿಂದ ಕಾಪಾಡಲು ಕೊಳ್ಳುತ್ತಿರುವ ಆಯುಧಗಳ ಮೇಲೆ ಮಾಡುತ್ತಿರುವ ದುರ್ವ್ಯಯವನ್ನು ನಿಲ್ಲಿಸಿದರೆ ಸಾವಿರಾರು ಶಾಲೆಗಳನ್ನು ಕಟ್ಟಬಹುದು. ನಮ್ಮ ರಾಜ್ಯದಲ್ಲಿ ಖಜಾನೆಯಲ್ಲಿ ಹಣ ಇರುವುದು ಮಠಗಳ, ಮಠಾಧಿಪತಿಗಳ ಉದ್ಧಾರಕ್ಕಾಗಿ ಅಲ್ಲ. ಮಠಾಧಿಪತಿಗಳು ಏನು ಮಾಡುತ್ತಿದ್ದಾರೆ ಎನ್ನುವುದನ್ನು ಚಂದ್ರಸ್ವಾಮಿ, ನಿತ್ಯಾನಂದ, ಇಚ್ಛಾದಾರಿ, ಬ್ರಹ್ಮಚಾರಿ ಇತ್ಯಾದಿ ದುರಾಚಾರಿಗಳು ತಮ್ಮ ತಮ್ಮ ಕೃತಿಯಲ್ಲಿ ನಮಗೆ ನೇರವಾಗಿಯೆ ತಿಳಿಸಿದ್ದಾರೆ. ''ವೀರಶೈವ ಮಠಗಳಿಂದ ಸರ್ಕಾರಕ್ಕೆ ಆನೆಬಲ'' ಎನ್ನುತ್ತ ಯಡಿಯೂರಪ್ಪನವರು ಅಧಿಕಾರದಲ್ಲಿ ಉಳಿಯುವ ಏಕೈಕ ಉದ್ದೇಶದಿಂದಾಗಿ ಸಿದ್ಧಗಂಗಾ ಮಠ, ತರಳಬಾಳು ಮಠ, ಸಿರಿಗೆರೆ ಮಠ, ಕಾಗಿನೆಲೆ, ಮೂರುಸಾವಿರ ಮಠ, ಹೀಗೆ ಸಾವಿರಾರು ಮಠಗಳನ್ನು ಸುತ್ತುತ್ತ ಅವುಗಳಿಗೆ ಹಣವನ್ನು ತಮ್ಮ ಸ್ವಂತ ಜಾಗಿರಿಯಿಂದ ಕೊಡುವಂತೆ ದಾನಮಾಡುತ್ತಿದ್ದಾರೆ. ಇವರು ಮಠಗಳಿಗೆ ಕೋಟಿಗಟ್ಟಲೆ ಕೊಟ್ಟು ಅವರ ಮೂಲಕ ಮಕ್ಕಳ ವಿದ್ಯಾಭ್ಯಾಸಕ್ಕೆ ಪ್ರೋತ್ಸಾಹ ಮಾಡುವುದರ ಬದಲು ಅದನ್ನು ನೇರವಾಗಿ ಸರ್ಕಾರಿ ಶಾಲೆಗಳ ಮೂಲಕ ಮಾಡಿದರೆ ಇಡೀ ಸಮಾಜಕ್ಕೇ ಅದರ ಲಾಭ ತಲುಪುತ್ತದೆ. ಮಠದಲ್ಲಾದರೆ ಅವರು ಆಯ್ದುಕೊಳ್ಳುವ ಮಕ್ಕಳಿಗೆ ಮಾತ್ರ ತಲುಪುತ್ತದೆ. ಸಾರ್ವಜನಿಕರ ತೆರಿಗೆ ಹಣ ಕೆಲವು ಮಠಗಳಿಗೆ ಮಾತ್ರ ತಲುಪುವುದು ಯಡಿಯೂರಪ್ಪನವರಿಗೆ ಲಾಭವಾಗಬಹುದು. ಸಾರ್ವಜನಿಕರಿಗಲ್ಲ. ಈ ವಿದ್ಯಾಭ್ಯಾಸದ ಹಕ್ಕು ಸಂಸತ್ತಿನಲ್ಲಿ ಮಂಡಿಸಿದ್ದಾಗಿನಿಂದ ಈವರೆಗೂ ನಮ್ಮ ಮಂತ್ರಿಮಂಡಲದ ಸದಸ್ಯರು ಇದನ್ನು ಹೇಗೆ ಮಕ್ಕಳಿಗೆ ತಲುಪಿಸುವ ಯೋಚನೆ ಮಾಡುತ್ತಿದ್ದಾರೆ, ಎಷ್ಟು ಹಣ ಇದಕ್ಕಾಗಿ ಮೀಸಲಾಗಿ ಇಟ್ಟಿದ್ದಾರೆ, ಯಾರು ಯಾರನ್ನು ಇದಕ್ಕೆ ಜವಾಬ್ದಾರರನ್ನಾಗಿ ಮಾಡುತ್ತಾರೆ, ಶಾಸನವನ್ನು ಉಲ್ಲಂಘಿಸುವವರಿಗೆ ಏನು ಕ್ರಮ ತೆಗೆದುಕೊಳ್ಳುತ್ತಾರೆ ಎನ್ನುವುದರ ಬಗ್ಗೆ ಯಾವ ಮಾತನ್ನೂ ಆಡುತ್ತಿಲ್ಲ. ಆದರೆ ಈಗ ಯಡಿಯೂರಪ್ಪನವರು ಕೇಂದ್ರಕ್ಕೆ ತಾವು ಈ ಕಡ್ಡಾಯ ಶಿಕ್ಷಣಕ್ಕೆ ತಗಲುವ ವೆಚ್ಚದಲ್ಲಿ ಕೇವಲ ೧೦% ಮಾತ್ರ ವಹಿಸಲು ಸಾಧ್ಯ ಎಂದು ಪತ್ರ ಬರೆದಿದ್ದಾರೆ. ಈ ಸರ್ಕಾರ ಮಠಗಳಿಗೆ ಕೊಟ್ಟಿರುವ ಹಣವನ್ನು ಮತ್ತು ಕೃಷ್ಣದೇವರಾಯನ ಪಟ್ಟಾಭಿಷೇಕದ ಪುನರ್‌ಸೃಷ್ಟಿಗೆ ವ್ಯಯಮಾಡಿದ ಹಣ ಎಲ್ಲ ಸೇರಿದರೆ ಸುಮಾರು ೬೦೦ ಕೋಟಿಯಷ್ಟು ಆಗಬಹುದು. ಇದೇ ಹಣದಲ್ಲಿ ಒಂದು ಕಿಲೊಮೀಟರ್ ಅಂತರದಲ್ಲಿ ಎಷ್ಟು ನೈಬರ್‌ಹುಡ್ ಶಾಲೆಗಳನ್ನು ನಿರ್ಮಿಸಬಹುದಿತ್ತು? ಇದರಿಂದ ಎಷ್ಟು ಲಕ್ಷ ವಿದ್ಯಾರ್ಥಿಗಳನ್ನು ಶಾಲೆಗೆ ತರಬಹುದಿತ್ತು? ಈ ಬಗ್ಗೆ ನಮ್ಮ ಸರ್ಕಾರ ಚಿಂತನೆ ಮಾಡುತ್ತಿದೆಯೆ? ಮಕ್ಕಳ ಭವಿಷ್ಯದ ಜೊತೆ ಚೆಲ್ಲಾಟವಾಡುವ ಇಂತಹ ಮಂತ್ರಿಗಳು ಯಾವ ಸಿದ್ಧಾಂತಗಳ ಮೇಲೆ ಸರ್ಕಾರ ನಡೆಸುತ್ತಿದ್ದಾರೆ? ಸಾರ್ವಜನಿಕರು ಇಂಥ ಧೋರಣೆಯ ವಿರುದ್ಧ ಸಿಡಿದೇಳಬೇಕು. ಬೇರೆ ಮಾರ್ಗವೇ ಇಲ್ಲ.

ಈ ಶಾಸನದ ೨೦೦೯ರ ಮೂಲ ಪ್ರತಿಯಲ್ಲಿ ಕಡ್ಡಾಯ ಶಿಕ್ಷಣದ ಸಂಪೂರ್ಣ ವೆಚ್ಚವನ್ನು ಕೇಂದ್ರ ಸರ್ಕಾರವೇ ಭರಿಸಬೇಕು ಎಂದಿತ್ತು. ಜೊತೆಗೆ ಈ ಕಾರ್ಯಕ್ರಮವನ್ನು ಸರಿಯಾದ ರೀತಿಯಲ್ಲಿ ಜಾರಿಗೊಳಿಸಿ ನಿಯಂತ್ರಿಸುವ ಜವಾಬ್ದಾರಿಯನ್ನು ಒಂದು ಹೊಸ ಆಯುಕ್ತರ ಕಛೇರಿಯನ್ನು ಸೃಷ್ಟಿಸಿ ಅವರಿಗೆ ವಹಿಸುವ ಯೋಜನೆ ಇತ್ತು. ಆದರೆ ಅದು ಮುಂದಿನ ವರ್ಷಗಳಲ್ಲಿ ಬಂದ ತಿದ್ದುಪಡಿಗಳಲ್ಲಿ ಬದಲಾಗಿ ರಾಜ್ಯ ಸರ್ಕಾರಗಳು ವೆಚ್ಚವನ್ನು ಹಂಚಿಕೊಳ್ಳಬೇಕೆಂದಾಯಿತು. ಹೊಸ ಆಯುಕ್ತರ ಕಛೇರಿಯನ್ನು ಸೃಷ್ಟಿಸಿ ಅವರಿಗೆ ವಹಿಸುವ ಯೋಜನೆಯನ್ನು ಕೈಬಿಡಲಾಯಿತು. ರಾಜ್ಯ ಸರ್ಕಾರಗಳ ಜೊತೆ ಚರ್ಚೆಮಾಡಿ ಈ ತೀರ್ಮಾನಕ್ಕೆ ಬರಲಾಯಿತೆ ಅಥವಾ ಕೇಂದ್ರ ಸರ್ಕಾರ ಏಕಮುಖವಾಗಿ ಈ ಬದಲಾವಣೆಗಳನ್ನು ಮಾಡಿತೆ ಎಂಬುದರ ಬಗ್ಗೆ ನಮಗೆ ಮಾಹಿತಿ ಇಲ್ಲ. ಆದರೆ ಈ ಬದಲಾವಣೆಗಳು ಆಗದಿದ್ದರೆ ಶಾಸನ ಇನ್ನೂ ಬಿಗಿಯಾಗಿರುತ್ತಿತ್ತು.

ಎನ್. ಎಸ್. ರಘುನಾಥ್
'ಯಾಶ್ಕ್', ಎ-೧೧-೦೨, ಆಯಿಶ್ ಬಡಾವಣೆ
ಬೋಗಾದಿ ೨ನೇ ಹಂತ, ಮೈಸೂರು - ೫೭೦ ೦೨೬

ಸುದ್ದಿ ಚಿತ್ರ



ನವಕರ್ನಾಟಕ ಪ್ರಕಟಿಸಿರುವ ಡಾ|| ಜಿ. ಎನ್. ಉಪಾಧ್ಯ ರಚಿಸಿರುವ 'ಶಂಕರ ಮೊಕಾಶಿ ಪುಣೇಕರ' ಕೃತಿಯನ್ನು ತಾರೀಕು ೭.೩.೨೦೧೦ರಂದು ಮುಂಬೈಯಲ್ಲಿ ಅನಾವರಣಗೊಳಿಸಲಾಯಿತು. ಡಾ|| ಹಂಪನಾ ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು. ಮುಂಬೈ ವಿಶ್ವವಿದ್ಯಾಲಯದ ಕನ್ನಡ ವಿಭಾಗ ಮತ್ತು ಮೈಸೂರು ಅಸೋಸಿಯೇಷನ್ ಆಶ್ರಯದಲ್ಲಿ ನಡೆದ ಸಮಾರಂಭದಲ್ಲಿ ಕೃತಿಯ ಲೇಖಕರು, ಕಮಲಾ ಹಂಪನಾ, ಎ. ರಾಮಭದ್ರ, ನಾರಾಯಣ ನವಿಲೇಕರ್ – ಮುಂತಾದವರು, ಸಾಹಿತ್ಯಾಸಕ್ತರು ಭಾಗವಹಿಸಿದ್ದರು.

ಹೊಸ ಓದು



## ಅಭಿಜ್ಞಾನ

ಡಾ|| ಕುಮಾರಚಲ್ಯ
**ಪುಟ : xiv + ೧೩೮**
**ಬೆಲೆ : ರೂ. ೯೦**
**ಕನ್ನಡ ಸಂಘ,** ಕ್ರೈಸ್ಟ್ ಯೂನಿವರ್ಸಿಟಿ, ಹೊಸೂರು ರಸ್ತೆ, ಬೆಂಗಳೂರು - ೫೬೦ ೦೨೯

ಕನ್ನಡ ಸಾಹಿತಿಗಳನೇಕರ ಸಾಹಿತ್ಯ ಕೃತಿಗಳನ್ನು ಆಯ್ದುಕೊಂಡು ವಿಮರ್ಶೆ ಮಾಡಿರುವ ಲೇಖನಗಳ ಸಂಕಲನವಿದು. ವಿಮರ್ಶೆ ಎಂದರೆ ಹೊಗಳಿಕೆ ಅಥವಾ ತೆಗಳಿಕೆಯಲ್ಲ; ಅದೊಂದು ಆರೋಗ್ಯಕರ ತುಲನೆ ಮಾತ್ರ ಎನ್ನುವ ನೆಲೆಯಲ್ಲಿ ಈ ಲೇಖನಗಳಿವೆ. ಸಾಹಿತ್ಯಿಕ ಸಮಾರಂಭಗಳು, ಸಮ್ಮೇಳನಗಳು ನಡೆಯುವಲ್ಲಿ ಆಸಕ್ತಿಯಿಂದ ಭಾಗವಹಿಸಿ ತಮ್ಮ ಉಪನ್ಯಾಸಗಳನ್ನು ನೀಡುವ ಡಾ|| ಕುಮಾರಚಲ್ಯರು ಹಳೆಗನ್ನಡ, ಆಧುನಿಕ ಹಾಗೂ ಪ್ರಚಲಿತ ಬರವಣಿಗೆಗಳ ಬಗ್ಗೆಯೂ ಏಕಕಾಲದಲ್ಲಿ ವ್ಯಾಖ್ಯಾನ ನೀಡಬಲ್ಲರು. ಚಲ್ಯರು ವಿಮರ್ಶೆಗೆ ಆಯ್ಕೆಮಾಡಿದ ಕೃತಿಗಳ ಕಾಲಮಾನದ ಹರಹು ಸುಮಾರು ಒಂದು ಶತಮಾನದಷ್ಟು ಈಚಿನದು. ಈ ಕಾಲಘಟ್ಟದಲ್ಲಿ ಸಾಮಾಜಿಕ ಹಾಗೂ ಸಾಹಿತ್ಯಿಕವಾಗಿ ಪಲ್ಲಟಗೊಂಡ ಜೀವನಕ್ರಮಗಳು, ಇಂದು ಎದುರಿಸುತ್ತಿರುವ ಸಂಘರ್ಷಗಳು ಇವನ್ನೆಲ್ಲ ನಾವು ಗುರುತಿಸಬಹುದು.



## ಕನ್ನಡದೊಳ್ ಭಾವಿಸಿದ ಜನಪದಂ (ಕರ್ನಾಟಕ ಚರಿತ್ರೆ ಮತ್ತು ಸಂಸ್ಕೃತಿ-ಸಂಶೋಧನಾ ಲೇಖನಗಳು)

ಸಂಪಾದಕರು : ವಸು ಎಂ. ವಿ.
**ಪುಟ : xii + ೪೪೦**
**ಬೆಲೆ : ರೂ. ೩೭೫**
**ಚಿಂತನ ಪುಸ್ತಕ,** ನಂ. ೧೮೬೩, ೧೧ನೇ ಮುಖ್ಯರಸ್ತೆ, ೩೮ನೇ ಅಡ್ಡರಸ್ತೆ, ೪ನೇ 'ಟಿ' ಬ್ಲಾಕ್, ಜಯನಗರ, ಬೆಂಗಳೂರು - ೫೬೦ ೦೪೧

ಕನ್ನಡನಾಡು ಪ್ರಾರಂಭದಿಂದಲೇ ಸಂಸ್ಕೃತಿ ಮತ್ತು ರಾಜಕೀಯದ ಹೆಜ್ಜೆ ಮೂಡಿಸಿ ಬೆಳೆದುಬಂದಿದೆ. ಆ ಚರಿತ್ರೆಯನ್ನು ಕುರಿತ ಆಹ್ವಾನಿತ ಬರಹಗಳ ಸಂಪಾದಿತ ಕೃತಿ ಇದು. ವಿವಿಧ ಲೇಖಕರು ತಮ್ಮ ಅಪಾರವಾದ ಓದಿನ ಫಲವಾಗಿ ಕನ್ನಡದ ಬಗ್ಗೆ ಹೆಮ್ಮೆಪಟ್ಟುಕೊಳ್ಳುವಂತೆ ವಿಷಯ ನಿರೂಪಣೆ ಮಾಡಿದ್ದಾರೆ. ಹೆಚ್ಚಿನ ಲೇಖಕರೆಲ್ಲ ವಿಶ್ವವಿದ್ಯಾಲಯಗಳಲ್ಲಿ ಕನ್ನಡ ವಿಭಾಗ ಮತ್ತು ಚರಿತ್ರೆಯ ವಿಭಾಗಗಳಲ್ಲಿ ಜವಾಬ್ದಾರಿಯುತ ಸ್ಥಾನಗಳಲ್ಲಿದ್ದು ಈ ಬೃಹತ್ ಕೃತಿಯನ್ನು ರೂಪಿಸಲು ನೆರವಾಗಿದ್ದಾರೆ. ಹಾಗಾಗಿ ಈ ಲೇಖನಗಳಿಗೆ ಹೆಚ್ಚಿನ ಮೌಲ್ಯವಿದೆ. ಕನ್ನಡನಾಡಿನ ನೆಲ-ಜಲ- ಆಡಳಿತಕ್ಕೆ ಇಷ್ಟೊಂದು ವಿಶಾಲ ವ್ಯಾಪ್ತಿ ಇರುವುದು ಈ ಕೃತಿಯಿಂದ ಮನದಟ್ಟಾಗುತ್ತದೆ. ಚರಿತ್ರೆಯ ಹಾಗೂ ಕನ್ನಡದ ಅಧ್ಯಯನ ಮಾಡುವ ವಿದ್ಯಾರ್ಥಿಗಳಿಗೆ ಉಪಯುಕ್ತ ಆಕರ ಗ್ರಂಥವಿದು.

## ಗಲ್ಲೆಬಾನಿ (ಖಂಡಕಾವ್ಯ)

ಕೆ. ಬಿ. ಸಿದ್ದಯ್ಯ
**ಪುಟ : xii + ೪೮** **ಬೆಲೆ : ರೂ. ೪೦**
**ನಮ್ಮ ಪ್ರಕಾಶನ,** ಬಿಳಿಗೆರೆ, ತಿಪಟೂರು ತಾಲೂಕು, ತುಮಕೂರು ಜಿಲ್ಲೆ - ೫೭೨ ೧೧೪

ಈ ಪದ್ಯವು ಖಂಡಕಾವ್ಯವೆಂದು ಇದನ್ನು ರಚಿಸಿರುವ ಶ್ರೀ ಕೆ. ಬಿ. ಸಿದ್ದಯ್ಯನವರು ಪರಿಚಯಿಸಿದ್ದಾರೆ. ಪ್ರಾರಂಭದಿಂದ – ಕೊನೆಯವರೆಗೆ ಎಲ್ಲೂ ನಿಲುಗಡೆಯಿಲ್ಲದೆ ಅಖಂಡವಾಗಿ ಹರಿದುಬಂದಿದ್ದರೂ ಒಂದು ಜನವರ್ಗದ ಅಸಹನೀಯ ಬದುಕಿನ ಮಹಾಕಾವ್ಯದ ಒಂದು ತುಣುಕು ಇದೆಂದು ಭಾಸವಾಗುತ್ತದೆ. ದಮನಿಸಲ್ಪಟ್ಟ ಮಾತುಗಳು, ಈಡೇರಲಾಗದ ಬಯಕೆಗಳು, ತುಡಿತಗಳು ಎಲ್ಲ ಬೆರೆತು ನಮ್ಮ ಕಣ್ಮುಂದೆ ನಾ ಮುಂದು - ತಾ ಮುಂದು ಎಂಬಂತೆ ಪರಿಚಯಿಸಿಕೊಳ್ಳಲು ಹಾತೊರೆಯುತ್ತಿವೆ. ನಮಗೆ ಗುರುತು ಹತ್ತಲೊಲ್ಲದು. ಏಕೆಂದರೆ ನಮಗೂ ಕಣ್ಣಿಲ್ಲ, ಅವುಗಳಿಗೂ ದೇಹವಿಲ್ಲ! ಇವನ್ನೆಲ್ಲ ಕಣ್ಣಿದ್ದವರು ಕಾಣಬೇಕೆಂದೂ, ಕಣ್ಣಿಲ್ಲದವರು ಕಣ್ಣುಗಳನ್ನು ಧರಿಸಿ ಕಾಣಬೇಕೆಂದೂ ಈ ಕಾವ್ಯದಲ್ಲಿ ವಿನಂತಿ ಇದೆ. ಸಿದ್ಧ ಮಾದರಿಯ ಕಾವ್ಯವನ್ನಾಸ್ವಾದಿಸಿ ಆನಂದ ಪಡೆಯುವವರಿಗೆ ಈ ಕಾವ್ಯ, ''ನೀನು ನಿರೀಕ್ಷಿಸಿದ ಕಾವ್ಯ ನಾನಲ್ಲ, ನಾನಿರುವಂತೆಯೇ ಒಪ್ಪಿಕೋ'' ಎನ್ನುವ ಸವಾಲು ಹಾಕುತ್ತದೆ. ''ಗಲ್ಲೆಬಾನಿ'' ಎಂಬುದು ಪಾದರಕ್ಷೆಗಳನ್ನು ಹೊಲೆಯುವ ಚಮ್ಮಾರರು ಚರ್ಮ ಹದಮಾಡಲು ನೀರನ್ನಿರಿಸಿಕೊಳ್ಳುವ ಮಣ್ಣಿನ ಪಾತ್ರೆ. ಕಾಯಕ ಗೌರವದಿಂದ ತಮ್ಮ ಕೃತಿಗೆ ಇದನ್ನು ಶೀರ್ಷಿಕೆಯನ್ನಾಗಿಸಿದ್ದಾರೆ.



## ಡಿ. ಆರ್. ನಾಗರಾಜ

ಡಾ|| ವಿ. ಚಂದ್ರಶೇಖರ ನಂಗಲಿ
**ಪುಟ : ೯೬** **ಬೆಲೆ : ರೂ. ೬೦**
**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ ೫೧೫೯, ಬೆಂಗಳೂರು - ೫೬೦ ೦೦೧

ಡಿ. ಆರ್. ನಾಗರಾಜ – ಅಮೃತಕ್ಕೆ ಹಾರಿದ ಗರುಡ ಹಾಗೂ ಅವರ ಕೃತಿ ''ಅಲ್ಲಮ ಪ್ರಭು ಮತ್ತು ಶೈವ ಪ್ರತಿಭೆ'' ಎಂದರೆ ಅದೊಂದು ನಿಃಶಬ್ದ ಸಾಗರದಲ್ಲಿ ಶಬ್ದಯಾನದ ಟೈಟಾನಿಕ್ – ಎಂಬಂತಹ ಉಪಮೆಗಳೊಂದಿಗೆ ಡಿ.ಆರ್.ಎನ್. ಮತ್ತು ಅವರ ಬರಹಗಳನ್ನು ಡಾ|| ಚಂದ್ರಶೇಖರ ನಂಗಲಿ ವಿಶ್ಲೇಷಿಸಿದ್ದಾರೆ. ಬದುಕಿನ ಅತ್ಯಲ್ಪ ಕಾಲದಲ್ಲೇ ವಿಮರ್ಶಾಕ್ಷೇತ್ರದಲ್ಲಿ ಬಲವಾಗಿ ಕಾಲೂರಿದ ಡಿ.ಆರ್.ಎನ್. ಅಮೃತಕ್ಕಾಗಿ ಹಾರಿದ್ದು ಬಲು ಎತ್ತರಕ್ಕೆ – ಎಷ್ಟೆಂದರೆ ಭೂಮಿಗೆ ಮತ್ತೆ ಹಿಂತಿರುಗಿ ಬರಲಾರದಷ್ಟು! ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಮರಣೋತ್ತರವಾಗಿ ಅವರಿಗೆ ಲಭಿಸಿದ್ದು, ನವಕರ್ನಾಟಕ ಸಾಹಿತ್ಯ ಸಂಪದ ಮಾಲೆಯಲ್ಲಿ ಈ ಕೃತಿ ಸೇರ್ಪಡೆಯಾಗಿದೆ. ಹರಿತವಾದ ವಿಮರ್ಶೆಯನ್ನು ಹರಿಯಬಿಡುತ್ತಿದ್ದ ಡಿ. ಆರ್. ನಾಗರಾಜ ಅವರ ಕೆಲವು ವೈರುದ್ಧ್ಯಗಳನ್ನು ಅರ್ಥೈಸುವುದು ಬಲು ಕಷ್ಟ. ನಂಗಲಿಯವರು ಪುಸ್ತಕದ ಪ್ರಾರಂಭದ ಮಾತಿನಲ್ಲಿ ಡಿ.ಆರ್.ಎನ್. ಅವರದ್ದು 'ಸೂರ್ಯಗತಿ'ಯ ಬರವಣಿಗೆ ಹಾಗೂ ತನ್ನದು 'ಚಂದ್ರಗತಿ'ಯದ್ದು ಎಂದಿದ್ದಾರೆ. ನಿಜ, ಸೂರ್ಯನ ಪ್ರಖರತೆಯನ್ನು ಅರಿತು, ಅರ್ಥೈಸಿ ಮತ್ತೆ ನಮಗೆ ಪರಿಚಯಿಸಿದ್ದಾರೆ. ಡಿ.ಆರ್.ಎನ್. ಕೃತಿಗಳ ಓದಿಗೆ ಇದೊಂದು ಉತ್ತಮ ಪ್ರವೇಶಿಕೆಯಾಗಿದ್ದು, ಮೊದಲು ಇದನ್ನೋದಿಕೊಂಡರೆ ಡಿ.ಆರ್.ಎನ್. ಅರ್ಥವಾಗಬಲ್ಲರು.



## ಒಡಲ ಬೆಂಕಿ (ಕನ್ನಡ ಕವಿಗಳು ಕಂಡಂತೆ ಹಸಿವು)

ಸಂಪಾದಕರು : ವಿಠ್ಠಲ ಭಂಡಾರಿ
**ಪುಟ : ೮೮ + ೪** **ಬೆಲೆ : ರೂ. ೩೦**
**ಚಿಂತನ ಪುಸ್ತಕ,** ನಂ. ೧೮೬೩, ೧೧ನೇ ಮುಖ್ಯರಸ್ತೆ, ೩೮ನೇ ಅಡ್ಡರಸ್ತೆ, ೪ನೇ 'ಟಿ' ಬ್ಲಾಕ್, ಜಯನಗರ, ಬೆಂಗಳೂರು - ೫೬೦ ೦೪೧

''ಒಲೆಯೊಳಗೆ ಬೆಕ್ಕು, ಒಡಲೊಳಗೆ ಬೆಂಕಿ'' ಇದು ಹಸಿದ ಬಡವನ ಮನೆಯ ದಾರುಣ ಚಿತ್ರಣ ನೀಡುವ, ಆರ್. ವಿ. ಭಂಡಾರಿಯವರ ಕವನದ ಒಂದು ಸಾಲು. ಹಸಿವಿನ ತೀವ್ರತೆಯನ್ನು ಹೆಚ್ಚು ಬಡವರಿರುವ ನಮ್ಮ ದೇಶದಲ್ಲಿ ಹೊಸದಾಗಿ ಪರಿಚಯಿಸುವ ಮೊದಲೇ ಜನ ಅದನ್ನು ಅನುಭವಿಸಿದ್ದಾರೆ. ವರ್ಣನೆಗಿಂತಲೂ ಭೀಕರತೆ ಮತ್ತು ಆಳ ಹಸಿವಿಗಿದೆ. ಬಡವನಿಗೆ ಹೊಟ್ಟೆ ಹಸಿವು ಸಂಗಾತಿ ಹಾಗೂ ಶ್ರೀಮಂತನಿಗೆ ಗೇಟಿನಾಚೆಯ ಅಪರಿಚಿತ ಅತಿಥಿ. 'ಗರೀಬಿ ಹಟಾವ್', 'ರೋಟಿ, ಕಪಡಾ, ಮಕಾನ್' ಇವೆಲ್ಲ ಘೋಷಣೆಗಳು ಸ್ವಾತಂತ್ರ್ಯಾನಂತರದ ಉತ್ಸಾಹದ ಸ್ಯಾಂಪಲ್ ಮಾತ್ರ. ಅದನ್ನೆಲ್ಲ ದಾಟಿ ಹಸಿವು ಈಗ ಜಾಗತಿಕ ಸಮಸ್ಯೆಯ ಸ್ವರೂಪ ಪಡೆದಿದ್ದು ಅನ್ನಕ್ಕಾಗಿ ಎಲ್ಲೆಡೆ ಹಾಹಾಕಾರವೆದ್ದಿದೆ. ಕೆಳವರ್ಗದ ಜನ ಹೊಟ್ಟೆಪಾಡಿಗೆ ಪಡುವ ಬವಣೆಯನ್ನು ಕೃತಿಯ ಸಂಪಾದಕ ಶ್ರೀ ವಿಠ್ಠಲ ಭಂಡಾರಿ ಸ್ವತಃ ಕಣ್ಣಾರೆ ಕಂಡ ಘಟನೆಗಳ ಮೂಲಕ ಪ್ರಸ್ತಾಪಿಸಿದ್ದಾರೆ. ಇತರ ಕವಿ-ಸಾಹಿತಿಗಳಿಂದಲೂ ಈ ಬಗ್ಗೆ ಸಾಕಷ್ಟು ಸಾಹಿತ್ಯ ನಿರ್ಮಾಣವೂ ಆಗಿದೆ. ಕೆಲವು ಆಯ್ದ ಕವನಗಳನ್ನು ಈ ಪುಸ್ತಕದಲ್ಲಿ ಸಂಗ್ರಹಿಸಲಾಗಿದೆ.

– ಇಂದಿರಾಕುಮಾರಿ
೩೪/೧೧, ೨ನೇ ಕ್ರಾಸ್, ಬಾಂಬೆ ಡೈಯಿಂಗ್ ಸಮೀಪ, ಯಶವಂತಪುರ, ಬೆಂಗಳೂರು - ೨೨

# ವೀರಶೈವ: ಧಾರ್ಮಿಕ ಆಯಾಮ



**ಮಠಾಧಿಪತಿಗಳೂ, ಪೀಠಾಧಿಪತಿಗಳೂ, 'ಜನಮನ್ನಣೆಯ ಗೀಳು', 'ದಕ್ಷಿಣಾ ದಾಕ್ಷಿಣ್ಯ'ಕ್ಕೆ ಕಟ್ಟುಬಿದ್ದು ಧಾರ್ಮಿಕವಲ್ಲದ ಪರಿಭಾಷೆ ಬಳಸುತ್ತಿರುವದು ಅಚ್ಚರಿ ಹುಟ್ಟಿಸುವಂತಹದಾಗಿದ್ದರೂ ಅಚ್ಚರಿ ಹುಟ್ಟಿಸದಷ್ಟು ರೂಢಿಯಾಗಿಬಿಟ್ಟಿದೆ. ಇದಕ್ಕೆ ಪೂರಕವಾಗಿ ಬುದ್ಧಿಜೀವಿಗಳು, ಸಮಾಜೋದ್ಧಾರಕರು, ವೈಚಾರಿಕರು, ರಾಜಕಾರಣಿಗಳು ತಮ್ಮದೇ ಆದ ಪರಿಭಾಷೆಯನ್ನು ಧಾರ್ಮಿಕ ಪರಿಭಾಷೆಯೆಂದು ತಮ್ಮ ಹಿತಾಸಕ್ತಿಗೆ ಅನುಗುಣವಾಗಿ ಚಾಮರ ಬೀಸುತ್ತಿರುವುದು ಖೇದಕರ. ಇದೆಲ್ಲ ವೀರಶೈವ ಧರ್ಮದ ಅಧೋಗತಿ ಎಂಬುದರಲ್ಲಿ ಸಂದೇಹ ಬರದಿದ್ದರೆ ಆಶ್ಚರ್ಯ !**

---

ವಿಜಯ ಮಠ

**ಪು**ರ ನಿರ್ಮಾಣಕ್ಕಿಂತ ಮುಂಚೆ 'ಜಾತಿ'ಗಳು ಬುಡಕಟ್ಟುಗಳೇ ಆಗಿದ್ದವು. ಸದ್ಯದ ಬುಡಕಟ್ಟುಗಳಂತೆ ಮೂಲತಃ ಅಲೆಮಾರಿಗಳಾದ ಈ ಬುಡಕಟ್ಟುಗಳು ಎದಿರುಬದಿರು ಆದಾಗೊಮ್ಮೆ ಸಂಘರ್ಷ, ಅಸ್ತಿತ್ವ ಉಳಿಸಿಕೊಳ್ಳಲು ಪಲಾಯನ, ಸೋತ ಬುಡಕಟ್ಟುಗಳ ಮೇಲೆ ದಬ್ಬಾಳಿಕೆ, ದೌರ್ಜನ್ಯ, ಅವಹೇಳನ, ಮಹಿಳೆ ಮತ್ತು ಮಕ್ಕಳ ಮೇಲೆ ಅತ್ಯಾಚಾರ ಎಲ್ಲವೂ ಸಾಮಾನ್ಯವಾಗಿತ್ತು. ಈ ಬುಡಕಟ್ಟುಗಳು ನಿರ್ದಿಷ್ಟ ಕಸುಬುಗಳನ್ನು ಆಯ್ದುಕೊಂಡಾಗ ಬೇರೆ ಬುಡಕಟ್ಟುಗಳ ಜತೆಯ ನಡವಳಿಕೆ ಮಿದುವಾಗುವದು ಕನಿಷ್ಠ ನಾಟಕೀಯಕ್ಕಾದರೂ ಅನಿವಾರ್ಯವಾಯಿತು. ಪರಸ್ಪರರ ಕಸುಬಿನ ಉತ್ಪನ್ನಗಳ ವಿನಿಮಯಕ್ಕಾಗಿ ಸಾಮೀಪ್ಯವೂ, ಹೀಗೇ ಹತ್ತಿರವಾಗುತ್ತಲೇ ಸಹಬಾಳ್ವೆಯ ಅವಶ್ಯಕತೆಯೂ 'ಪುರ ನಿರ್ಮಾಣ'ಕ್ಕೆ ಹಿನ್ನೆಲೆಯನ್ನೊದಗಿಸಿತು. ಪುರ ನಿರ್ಮಾಣಕ್ಕೆ ವಿಶ್ವಕರ್ಮರ ಕಸುಬೂ, ಕೊಡುಗೆಯೂ ಅತ್ಯವಶ್ಯವಾಗಿತ್ತು.

ಇದೆಲ್ಲ ಬೆಳವಣಿಗೆಯ ಜತೆಗೆ ಸ್ವಂತಿಕೆಯ ಸಂಸ್ಕೃತಿಯ ಸಂಚಲನವೂ ಈ ಬುಡಕಟ್ಟುಗಳ ಉತ್ಕ್ರಾಂತಿ ಪಥದಲ್ಲಿತ್ತು. ಆದಾಗಲೇ ತಮ್ಮ ಕೌಟುಂಬಿಕ ಮತ್ತು ಸಾಮಾಜಿಕ ಸನ್ನಡತೆಯ ಸಂಹಿತೆಗಳನ್ನು ಕಂಡುಕೊಂಡಾಗಿತ್ತು. ನಿರ್ದಿಷ್ಟ ಗೋತ್ರೀಯರು, ಅಂದರೆ ನಿರ್ದಿಷ್ಟ ಬುಡಕಟ್ಟುಗಳು ನಿರ್ದಿಷ್ಟ ಗೃಹ್ಯಸೂತ್ರ, ಧರ್ಮಸೂತ್ರಗಳನ್ನು ಅಳವಡಿಸಿಕೊಂಡಿದ್ದರು. ಗೃಹ್ಯಸೂತ್ರಗಳು, ಧರ್ಮಸೂತ್ರಗಳು ಕುಲಾಚಾರ, ಧಾರ್ಮಿಕ ಧಾರಣೆಯ, ಕೌಟುಂಬಿಕ ಆಚರಣೆಯ ನಿಯಮಗಳನ್ನು ವಿಧಿಸುತ್ತವೆಯೇ ಹೊರತು 'ಪರತತ್ವ'ದ ವಿಚಾರ ಇಲ್ಲಿ ಗೌಣವೆಂಬುದನ್ನು ಗಮನಿಸಬೇಕು. 'ಪರತತ್ವ'ದ ಚಿಂತನ, ಚರ್ಚೆ ಆತ್ಯಂತಿಕ ಬೌದ್ಧಿಕ ವಲಯದಲ್ಲಿ ಅಥವಾ 'ವಿಜ್ಞಾನವಾದಿ'ಗಳಲ್ಲಿ ಮಾತ್ರವಿತ್ತು ಎನ್ನಬಹುದು. ಅವರನ್ನು ಋಷಿ, ಮುನಿಗಳೆಂದು ಕರೆಯಬಹುದು. ಅವರೇ ತಮ್ಮ ಕುಲಗಳಿಗೆ ಗೋತ್ರಗಳೂ ಅಹುದು. ಅವರು ರೂಪಿಸಿದ ಸಿದ್ಧಾಂತಗಳು ಶಾಸ್ತ್ರೀಯ ಸಿದ್ಧಾಂತಗಳೇ (ಹೈಪೋಥಿಸಿಸ್) ಅನ್ನಿಸುವಷ್ಟು ವೈಜ್ಞಾನಿಕತ್ವದ ಸಾಮೀಪ್ಯ ಹೊಂದಿದ್ದವು.

ಈ 'ಗೋತ್ರೀಯ'ರು ತಮ್ಮ ಬುಡಕಟ್ಟು ಸ್ವಾರ್ಥವನ್ನೇನೂ ಬಿಟ್ಟಿರಲಿಲ್ಲ. ಇಹ-ಪರದ ತಾಂತ್ರಿಕ ಧಾರಣೆಗಳಿಗೆ ಸಂಬಂಧಿಸಿದಂತೆ ತಾಂತ್ರಿಕ ಸನ್ನದು ರೂಪಿಸಿದ್ದರು. ಅದಕ್ಕೆಂತಲೇ 'ಸಂಕಲ್ಪ' ಧಾರಣೆಯಲ್ಲಿ ಕಾಲ-ದೇಶಾದಿಗಳನ್ನು ಹೇಳಿ 'ಗೋತ್ರ' ನಾಮ ಸ್ಪಷ್ಟಪಡಿಸಬೇಕಾಗುತ್ತದೆ. 'ನಿರ್ಣಯ ಸಿಂಧು' ತಮ್ಮ 'ಗೋತ್ರ' ಮಾರ್ಗಗಳನ್ನು ಅನುಸರಿಸಬೇಕೆಂದೂ, ಬೇರೆಯವರು ಸಾಧನಾ ಪ್ರವೃತ್ತರಾದರೂ ಅದರ ಫಲ ನಿರ್ದಿಷ್ಟ 'ಗೋತ್ರ'ಗಳಿಗೇ ಸಲ್ಲುತ್ತದೆಂದು ನಿರ್ದೇಶಿಸುತ್ತದೆ. ಬೇರೆಯವರು ಅನುಸರಿಸದಿರಲು 'ಕೀಲಕ'ಗಳನ್ನೂ ರೂಪಿಸಿದರು.

ಪುರ ನಿರ್ಮಾಣ ಪೂರ್ಣಗೊಂಡ ನಂತರ ಶ್ರಮವಿಭಜನೆಗನುಗುಣವಾಗಿ ಚಾತುರ್ವರ್ಣ್ಯ ವಿಭಾಜನಗೊಂಡು ನಂತರದವರು 'ಪುರ'ದಲ್ಲಿ ಸ್ಥಳಾವಕಾಶವಿಲ್ಲದ ಕಾರಣ 'ಪಂಚಮ'ರೆನಿಸಿದರು. ಪುರಪ್ರವೇಶ ಅವಕಾಶವಂಚಿತರಾದ ವೀರಶೈವರು 'ವೀರಶೈವ ಪಂಚಮ'ರೆನಿಸಿದರು (ಕಾಡು ಸಿದ್ಧರು, ಬುಡಗಾ ಜಂಗಮರು... ಇತ್ಯಾದಿ). ತೀರ ಇತ್ತೀಚೆಗೆ 'ಪುರ'ದಲ್ಲೂ ಸಂಕರತ್ವದಿಂದ 'ಪಂಚಮ ಸಾಲು'ಗಳು ಸೃಷ್ಟಿಯಾದವು. ವಿವಿಧ ಜಾತಿಯ ಹೆಸರುಗಳು ಅವರಲ್ಲಿ ಕಾಣಿಸಿಕೊಳ್ಳುವುದು ಈ ಪ್ರಕ್ರಿಯೆಗೆ ಪುಷ್ಟಿಯನ್ನೊದಗಿಸುತ್ತದೆ. ಇಷ್ಟಿದ್ದರೂ ಜಾತಿಯ ಕಲ್ಪನೆ ಭದ್ರವಾಗಿಯೇ ಉಳಿಯಿತು.

**ವೀರಶೈವ/ಲಿಂಗಾಯತ**

ಇತಿಹಾಸದಲ್ಲಿ ವಾಮವಾದಿಗಳೆಂದು ಗುರುತಿಸಲ್ಪಟ್ಟ ಶೈವಪರ ಮತಗಳಲ್ಲಿ 'ವೀರಶೈವ'ವೂ ಒಂದು. ಇವರು ಲಿಂಗವನ್ನು ಆಯತ ಮಾಡಿಕೊಂಡ ತಾಂತ್ರಿಕ ವರ್ಗದವರು. ಇವರು ಅನುಸರಿಸುವ ಸದ್ಯೋಜಾತಾದಿ ತಂತ್ರಗಳನ್ನು ಲಾಕುಳಾದಿ ತಂತ್ರಗಳೆಂದೇ ಅಥವಾ ತಂತ್ರವೈಶಿಷ್ಟ್ಯ ವಿಶೇಷಣಗಳೆಂದೇ ಕರೆಯಲ್ಪಟ್ಟಿರಬೇಕು. ಬೆಟ್ಟ-ಕಾಡುಗಳಲ್ಲಿ ತಾಂತ್ರಿಕ ಕೋಟೆಗಳನ್ನು ಕಟ್ಟಿಕೊಂಡು ಪುರ ನಿರ್ಮಾಣದ ಕೊನೆಯ ಹಂತದಲ್ಲಿ ಪುರಪ್ರವೇಶಕ್ಕೆ ಮನಸ್ಸು ಮಾಡಿದ್ದರಿಂದಲೋ ಅಥವಾ ವಾಮತಂತ್ರಗಳಿಂದಲೋ ಏನೋ ಪುರದ ಹೊರವಲಯದಲ್ಲಿ ವೀರಶೈವ ಮಠಗಳಿರುವದು – ಮೂಲ ಪುರವಾಸ್ತು ಗಮನಿಸಿದರೆ ಮೇಲ್ನೋಟಕ್ಕೇ ಕಾಣುವಂತಹದು. ಇವರು ಬಳಸುವ ತಾಂತ್ರಿಕ ಆಯಾಮಗಳು ಒಂದೆರಡು ಶತಮಾನಗಳ ಹಿಂದೆಯೇ ಅಸ್ತಿತ್ವದಲ್ಲಿದ್ದವು ಎನ್ನಲು ಇಮ್ಮಡಿ ಗುರುಸಿದ್ಧ ಸ್ವಾಮಿಗಳ (ಸುಮಾರು ೧೮ನೇ ಶತಮಾನ) 'ಶೂನ್ಯ ಮಂತ್ರ ಗೌಪ್ಯ'ದಲ್ಲಿ ತಾಂತ್ರಿಕ ಮಂಡಲಾದಿಗಳ ವಿವರಗಳೇ ನಿದರ್ಶನ. ಈ ತಾಂತ್ರಿಕ ಸಿದ್ಧಾಂತ, ಆಚರಣೆಗಳನ್ನು ಶತಮಾನಗಳಿಂದ ರಕ್ಷಿಸಿಕೊಂಡು, ಶಕ್ತಿಪಾತ ದೀಕ್ಷೆಗಳಿಂದ ಇಂದಿನವರೆಗೂ ಮುನ್ನಡೆಸಿಕೊಂಡು ಬಂದವರು ವೀರಶೈವ ಸಕ್ಷಮ ಗುರುಪರಂಪರೆಯಾದ ಮಹಾಪೀಠಗಳು ಮತ್ತು ಅವರ ಮಠಪರಂಪರೆ. ತಾಂತ್ರಿಕ ಪರಂಪರೆಗಳಲ್ಲಿ 'ಗುರು' ಸರ್ವೋನ್ನತ; ಗುರು ಸಾನ್ನಿಧ್ಯ, ಧ್ಯಾನ, ನಿರ್ದೇಶನಗಳಿಗೆ ಆದ್ಯತೆ. ವೀರಶೈವ ತಾಂತ್ರಿಕ ಆಯಾಮಗಳು ಮಸುಕಾಗುತ್ತಿರುವದು ಕಾಲನ ಪ್ರಭಾವದಿಂದೆನ್ನಬಹುದು. ಇದಕ್ಕೆಲ್ಲ ತಳಹದಿಯಾದ ಪಂಚಾಚಾರ, ಅಷ್ಟಾವರಣ, ಷಟ್‌ಸ್ಥಲ... ಸದ್ಯಕ್ಕೆ ಅಪ್ರಸ್ತುತ.

ಇದಕ್ಕೆ ಪೂರಕವಾಗಿ ಆಗಮಗಳಲ್ಲಿ 'ವೀರಶೈವ ತಂತ್ರ'ವೆಂದಿರುವದೂ (ಎಲ್ಲ ಧರ್ಮಕ್ಕೂ ವಿಶಿಷ್ಟತಂತ್ರಗಳ ಹಿನ್ನೆಲೆಯಿದೆ ಎನ್ನುವದನ್ನೂ ಗಮನಿಸಬೇಕು). ತಂತ್ರೋಕ್ತ ಪೂಜೆ ಹೇಳಿರುವದೂ ಕಾಣುತ್ತದೆ. ಕಾಮ್ಯಗಳಿಗೆ ಅನುಗುಣವಾಗಿ ಕಾಮ್ಯಲಿಂಗಗಳ (ಕನ್ನಡದಲ್ಲಿ ಇಷ್ಟಲಿಂಗವಲ್ಲವೆ!

ಚರಲಿಂಗ ಬೇರೆ !) ವಿವರವಿರುವುದೂ ಕಾಣುತ್ತದೆ. ಇದೇ ತರಹದ ವಿವರಗಳು ಶಿವಪುರಾಣಗಳಲ್ಲಿಯೂ, ಶಿವರಹಸ್ಯ ದಲ್ಲಿಯೂ ಕಾಣುತ್ತವೆ. ''ಕೀಥ್ ಮತ್ತು ಪ್ರೈಜ್ಲುಸ್ಕಿ ಎಂಬ ಪಂಡಿತರು ಯುರೋಪಿನ ಭೂಮಧ್ಯ ಸಮುದ್ರ ತೀರದ ಕೆಲವು ಜನಾಂಗಗಳಲ್ಲಿ ಲಿಂಗಚಿಹ್ನವನ್ನು ತಾಯತದಂತೆ ಪೀಡಾ ನಿವಾರಣೆಗಾಗಿ ಕೊರಳಲ್ಲಿ ಕಟ್ಟಿಕೊಳ್ಳುವ ರೂಢಿ ಇತ್ತು'' ಎಂದು ಹೇಳಿರುವುದನ್ನು ಎಂ. ಜಿ. ನಂಜುಂಡಾರಾಧ್ಯರು ''ತತ್ವಪ್ರಕಾಶ''ದ ಪೀಠಿಕೆಯಲ್ಲಿ ಸ್ಪಷ್ಟ ಪಡಿಸಿದ್ದುದನ್ನು ನೋಡಿದರೆ ಕಾಮ್ಯಲಿಂಗ ಅಥವಾ ಇಷ್ಟ ಲಿಂಗದ ಸೀಮಿತ ಪ್ರಯೋಜನ ಅರ್ಥವಾಗಬಹುದು. ಜನನ ಸಂಸ್ಕಾರದಲ್ಲಿ ನೀಡುವ ಲಿಂಗವೂ ಜನನ ಸೂತಕಕ್ಕಷ್ಟೇ ಸೀಮಿತ !

ಪುರ ಪ್ರವೇಶ ಪಡೆದ ನಂತರವೂ ವೀರಶೈವರು ಅಲೆಮಾರಿ ಅಥವಾ ಜಂಗಮ ಸಂಸ್ಕೃತಿಯನ್ನು ಬಿಡದೇ ಇದ್ದುದರಿಂದ ಅವರಿಗಿರುವದು 'ಚರಲಿಂಗ' ಎಂಬುದು ಅರ್ಥಪೂರ್ಣ.

ವೀರಶೈವರು ಅಥವಾ ಲಿಂಗಾಯತರು ವೇದ ವಿರೋಧಿ ಎನ್ನುವವರು ಮೂಲಪಂಚಾಕ್ಷರವೇ 'ಶ್ರೀರುದ್ರ' ದಲ್ಲಿ ಅಂದರೆ ಯಜುರ್ವೇದದಲ್ಲಿ ಬರುವದನ್ನು ಗಮನಿಸದೇ ಇರುವದು ಅವರ ಮಾರ್ಜಾಲ ಪ್ರಾಮಾಣಿಕತೆಗೆ ನಿದರ್ಶನ. ಅಲ್ಲಮ ಪ್ರಭುಗಳು ತಮ್ಮ ವಚನವೊಂದರಲ್ಲಿ ಜಂಗಮರನ್ನು ''ಎನ್ನ ವಂಶಿಭೂತಂ ಗಳಾದ ಕಾರಣ...'' ಎಂದು ಉಪದೇಶಿಸಿದ್ದರೂ; ಉರಿಲಿಂಗ ಪೆದ್ದಿ ಸುಸಂಸ್ಕೃತ ಭಾಷೆ ಬಳಸುತ್ತ ಸಂಸ್ಕೃತ ಶ್ಲೋಕಗಳನ್ನು ಉದಾಹರಿಸುವುದನ್ನು ನೋಡಿಯೂ ದಂತಕಥೆಗೆ ಜೋತುಬಿದ್ದಿರುವದೂ; ಅಸ್ಪೃಶ್ಯನಾಗಿ ಸಂಸ್ಕೃತಿಯ ಔನ್ನತ್ಯ ಉರಿಲಿಂಗ ಪೆದ್ದಿ ಸಾಧಿಸಿದನೆಂದಾದಲ್ಲಿ ಅಂಬಿಗರ ಚೌಡಯ್ಯ,... ಇತ್ಯಾದಿಗಳಲ್ಲಿ ಅದೇಕಾಗಲಿಲ್ಲ ವೆಂದು ಆಲೋಚಿಸದೇ ಇರುವದು, ಇಲ್ಲೆಲ್ಲಾ ಈ ಮಾರ್ಜಾಲ ಪ್ರಾಮಾಣಿಕತೆ ಈ ಸಂಶೋಧಕರ ಸಂಶೋಧನೆಯಲ್ಲಿ ಢಾಳವಾಗಿ ಕಾಣುತ್ತದೆ.

**ಬಸವ ಯುಗ**

ಬಸವಣ್ಣ ಶೈವ ಬ್ರಾಹ್ಮಣನಾಗಿ (ಹರಿಹರ: ಕಮ್ಮೆಕುಲ ?!) ಹುಟ್ಟಿ ತನ್ನ ಧರ್ಮದ ಕುರಿತಾಗಿ ಮುನಿಸಿ ಕೊಂಡನೋ ಇಲ್ಲವೇ ಅವನ ಧರ್ಮವೇ ಆತನ ಜತೆ ಮುನಿಸಿಕೊಂಡಿತೋ ಹೇಳಲಾಗದು. ಹರಿಹರ ಇದೇನನ್ನೂ ಹೇಳದೇ ''ಕರ್ಮಲತೆಯಂತಿರ್ದ ಜನ್ನಿವಾರಮಂ ಕಳೆದು ಬಿಸುಟ್ಟು ಗಂಟಲಂ ಬಿಗಿದಂತಿರ್ದ ಮೌಂಜಿಯಂ ಪಱಿದು ಬಿಸುಟ್ಟು...'' ಕೂಡಲಸಂಗಮಕ್ಕೆ ಬರುತ್ತಾನೆ ಎಂದಿದ್ದಾನೆ. ಯಜ್ಞೋಪವೀತ ಮತ್ತು ಲಿಂಗೋಪವೀತಗಳ ಸಂಸ್ಕಾರ ಒಂದೇ ಬಗೆಯದು. ಇದು ಮಿಥ್ಯಾಲಿಂಗಿಗಳಿಗೆ ತಿಳಿದೇ ಇಲ್ಲ!

ಒಟ್ಟಿನಲ್ಲಿ ತನ್ನ ಧರ್ಮ ತೊರೆದು ವಿರೋಧಿಸಿದ ಬಸವಣ್ಣನ ಕುರಿತಾಗಿ ಮಂತ್ರಿಯಾದ ಬಲದೇವನಿಂದ ಬಿಜ್ಜಳ ಕೇಳಿದ್ದಿರಬೇಕು. ಸ್ವತಃ ಕಸುಬು ಕುಲದವನಾದ ಬಿಜ್ಜಳನಿಗೆ (ಕಲಿ-ಚೂರಿ) ಬಸವಪೂರ್ವ ಶರಣರು ಕಸುಬುದಾರರ ಕಾಯಕ ಗೌರವದ ಬಗ್ಗೆ ಮಾತನಾಡಿ ಅವರ ಆತ್ಮಗೌರವ ತುಂಬುವ ಕಾರ್ಯ ಕೈಗೊಂಡಿದ್ದು ಅಪ್ಯಾಯಮಾನವಾಗಿ ಇದ್ದಿರಬೇಕು. ಕಸುಬುದಾರರ ಸಂಘಟನೆಗೂ ಒಂದು ಚಾರಿತ್ರಿಕ ಹಿನ್ನೆಲೆ ಆ ಕಾಲದಲ್ಲಿ ಒದಗಿಬಂದಿತ್ತೆಂದು ಆರ್. ಎನ್. ನಂದಿ ಸಕಾರಣವಾಗಿ ''ವೀರಶೈವ ಚಳುವಳಿಯ ಉಗಮ'' ಎಂಬ ಆಂಗ್ಲ ಲೇಖನದಲ್ಲಿ ವಿವರಿಸಿದ್ದಾರೆ. ಬಿಜ್ಜಳನ ಮುತ್ಸದ್ದಿ ವಿಚಾರದ ಫಲವೇ ಬಸವನೆಂದು ನಾವು ಕಾಣುವ 'ಬಸವ ವ್ಯಕ್ತಿತ್ವ'. ಪ್ರಭುತ್ವದಲ್ಲಿ ಒಬ್ಬನಾದ ಮೇಲೆ ಬಸವಣ್ಣ ಹಾಗೂ ಹಿಂದಿನ ಶರಣರು ರೂಪಿಸಿದ ಕಾಯಕ ಗೌರವ, ಕಸುಬುದಾರರ ಸಂಘಟನೆ ಧಾರ್ಮಿಕ ಲೇಪದಲ್ಲಿ ಕಳೆಗೊಂಡ ಪರಿಯೇ ಬೇರೆ ! ಬಸವಣ್ಣನ ಚಳುವಳಿಯ ಮುಂಚೂಣಿಯಲ್ಲಿದ್ದ ಶರಣರೆಲ್ಲ ಈಗ ಬಸವಣ್ಣನ ವಾರಸುದಾರರೆಂದು ಹೇಳಿಕೊಳ್ಳುವವರ ಸಮುದಾಯ ದವರಿರಲಿಲ್ಲ! ಆಗಲೂ ಅವರು 'ಕೊಂಡೆ' ಕೆಲಸದಲ್ಲಿ ನಿಷ್ಣಾತರಾಗಿದ್ದುಕೊಂಡು ಬಸವಣ್ಣನ ಮಗ್ಗಲುಮುಳ್ಳಾಗಿದ್ದರು. ತಮ್ಮ ಜಾತಿಯ ಹಮ್ಮನ್ನೂ ಯಾರೂ ಬಿಟ್ಟಿರಲಿಲ್ಲ ಎಂಬುದು ಬಸವಣ್ಣನವರ ಈ ವಚನದಿಂದ ತೋರಿಬರುತ್ತದೆ.

*ಬಡಹಾರುವನೇಸು ಭಕ್ತನಾದಡೆಯೂ ನೇಣಿನ*
*ಹಂಗ ಬಿಡ !*
*ಮಾಲೆಗಾರನೇಸು ಭಕ್ತನಾದಡೆಯೂ ಬಾವಿಯ*
*ಬೊಮ್ಮನ ಹಂಗ ಬಿಡ !*
*ಬಣಜಿಗನೇಸು ಭಕ್ತನಾದಡೆಯೂ ಒಟ್ಟಿಲ ಬೆನಕನ*
*ಹಂಗ ಬಿಡ !*
*ಕಂಚುಗಾರನೇಸು ಭಕ್ತನಾದಡೆಯೂ*
*ಕಾಳಿಕಾದೇವಿಯ ಹಂಗ ಬಿಡ !*

ವೀರಶೈವದ ದೊಡ್ಡ ಬ್ಯಾನರಿನಡಿ ಕಸುಬುದಾರರು ಕೂಡಿಕೊಂಡಿದ್ದು ವಿವಿಧ ವಲಯಗಳಲ್ಲಿ ಮೂಡಿದ ಪ್ರತಿಕ್ರಿಯೆ ಬಿಜ್ಜಳನ ಪ್ರಭುತ್ವಕ್ಕೇ ನೇಣು ತರುತ್ತಿರುವುದು ಅವನಿಗೂ ನುಂಗಲಾರದ ತುತ್ತಾಗಿ ಬಸವನ ಬಗ್ಗೆ ಮುನಿಸಿಕೊಂಡಿದ್ದು ಸಹಜವೇ ಆಗಿತ್ತು. ಧರ್ಮದ ಲೇಪದಲ್ಲಿ ಏನೇನೋ ಜರುಗುತ್ತಿರುವುದು ಶುದ್ಧ ಧಾರ್ಮಿಕ ಆತ್ಮಕೃಷಿಯ ಅಭಿಲಾಷಿಯಾದ ಅಲ್ಲಮನಿಗೂ ಸರಿಬಂದಿರಲಿಲ್ಲವೆಂದು ಕಾಣುತ್ತದೆ. ಅದಕ್ಕೆಂದೇ ಬಸವನ ರಾಜಕೀಯ ವ್ಯಕ್ತಿತ್ವದ ವಿರುದ್ಧ ಹೀಗೆ ಛಾಟಿ ಬೀಸುತ್ತಾನೆ :

*ಕೈಯಲ್ಲಿ ಡಾಣೆ, ಮನದಲ್ಲಿ ಕ್ರೋಧ, ವಚನದಲ್ಲಿ*
*ಕಿಂಕಿಲ*
*ಲಿಂಗದ ವಾರ್ತೆ ನಿನಗೇಕೆ ಹೇಳಾ ಬಸವಾ !*

ಪರಿಸ್ಥಿತಿಯ ಗಂಭೀರತೆಯನ್ನರಿತ ಅದೇ ಅಲ್ಲಮ ಪ್ರಭುಗಳು ಕಲ್ಯಾಣವನ್ನು ಬಿಡಲು ಶರಣರಿಗೆ ಸೂಚಿಸುತ್ತಾರೆ.

ಅವಧಿಯಳಿಯಿತ್ತು ; ವ್ಯವಧಾನ
ಉಳಿಯಿತ್ತು..........
ಕಲಿಯುಗದಲ್ಲಿ ಮುಂದೆ ಇರಬಾರದು ನಿಜಶರಣಂಗೆ
.......
ಇದು ನಮ್ಮ ಗುಹೇಶ್ವರಲಿಂಗದ ಆಣತಿ
ನಿಮಗೆಲ್ಲರಿಗೆಯೂ

**ವಿರಕ್ತರ ಯುಗ**

ಶರಣರ ಧರ್ಮ ಸಾಮಾಜಿಕೀಕರಣ ಚಳುವಳಿಯ ವೈಫಲ್ಯದ ನಂತರ ಒಂದು ರೀತಿಯ ಸ್ಥಗಿತಸ್ಥಿತಿಯಿತ್ತು. ಬೌದ್ಧ ಧರ್ಮದ ಪ್ರಭಾವದಿಂದ ಬೆಳೆದ ಪರಿವ್ರಾಜ ಕಾಚಾರ್ಯ ಗೋಸಲಾರ್ಯ ಬೌದ್ಧರಿಗೆ ಹೊಟ್ಟೆಯುರಿ ಯುವಂತೆ ಬೆಳೆದು ವೀರಶೈವರ ಮತ್ತೊಂದು ಯುಗಕ್ಕೆ ನಾಂದಿ ಹಾಡಿದ. ಅವನ ಪರಂಪರೆಯ ಸಿದ್ಧಲಿಂಗ ಯತಿಗಳಿಂದ ಪ್ರಾರಂಭವಾದ ವಿರಕ್ತಮಠಗಳ, ಅವುಗಳ ಪರಂಪರೆಯೇ ಶುರುವಾಯಿತು. ವಿಜಯನಗರದ ಅರಸರು ವೀರಶೈವರಿಗೆ ರಾಜಮಾನ್ಯತೆ ನೀಡಿದಾಗಲಂತೂ ಲಿಂಗ ಧರಿಸುವದು ಫ್ಯಾಶನ್ ಆಗಿಹೋಯಿತು. ಅದಕ್ಕೊಂದು ವಿಧಿಯಿದೆ ಎಂಬುದನ್ನೂ ಲೆಕ್ಕಿಸದೆ ಎಲ್ಲರೂ ಲಿಂಗಾಯತ ರೆನ್ನಿಸಿಕೊಳ್ಳಲು ಇಷ್ಟಪಟ್ಟರು. (ಇಂದಿನವರೆಗೂ ಲಿಂಗಾಯತ ರೆಂದುಕೊಳ್ಳುವ ಸಮುದಾಯಕ್ಕೆ ವಿಧಿವತ್ ಲಿಂಗಪ್ರದಾನ ಆಚರಣೆಯಲ್ಲಿಲ್ಲ ಎಂಬುದನ್ನು ಗಮನಿಸಬಹುದು.) ಆ ಭರದಲ್ಲಿ ತಮ್ಮ ಗೋತ್ರಾದಿಗಳನ್ನು ಕಳೆದುಕೊಂಡರು. ಕುಲಾಚಾರದವರೆಂದು ಕರೆಯಲ್ಪಡುವ ಇವರ ಭಾಗಾರ್ಧಿ ಗಳಿಗೆ ಗೋತ್ರಾದಿಗಳುಂಟು ಎಂಬುದನ್ನು ಗಮನಿಸಬೇಕು.

ನಂತರವಂತೂ ಲಿಂಗೈಕ್ಯ ಸಂತರೆಲ್ಲರಿಗೂ ವಿರಕ್ತಮಠ ಗಳನ್ನು ಸ್ಥಾಪಿಸುವದು ಫ್ಯಾಷನ್ ಆಗಿಹೋಯಿತು; ಆಶ್ರಮಗಳೂ ವಿರಕ್ತಮಠಗಳಾದವು. ಇಂದಿಗೂ ಅದೇ ನಡೆಯುತ್ತಿದೆ.

ಇತ್ತಿತ್ತಲಾಗಿ 'ಮಠ'ಗಳೆಂದರೆ 'ಸಾಧನಾ ಸ್ಥಳ' ಗಳೆಂಬುದನ್ನು ಮರೆತು ಸರಕಾರೇತರ ಸಂಸ್ಥೆಗಳಂತೆ ಆಲೋಚನಾ ಮಾದರಿಯನ್ನು ಆರೋಪಿಸಿಕೊಂಡು ಶಿಕ್ಷಣಾಭಿವೃದ್ಧಿ, ಸಮಾಜಾಭಿವೃದ್ಧಿ, ಸಮಾನತೆಗಳ ಬಗ್ಗೆ ಮಾತನಾಡುತ್ತ ಅವುಗಳ ವ್ಯಾಪಾರೀ ತಾಣಗಳಾದವು. 'ಅರ್ಥ'ದ ರುಚಿಯೇ ಹಾಗೆ ! ಬೇರೆ ಸಂಘಸಂಸ್ಥೆಗಳ ವೇದಿಕೆಗಳ ಮೇಲೆ ಈ ಕುರಿತು ಬೇಕಾದಷ್ಟು ಕುಟ್ಟಬಹುದು ಎನ್ನುವ ವಿಚಾರ ಈ ಮಠಾಧಿಪತಿಗಳಿಗೆ ಹೊಳೆಯಲೂ ಸಾಧ್ಯವಾಗದು ! ದೇಣಿಗೆ ಸಂಗ್ರಹಿಸುವ ಗುಂಪುಗಳಿಗೆ 'ತೋರುಗೊಂಬೆ'ಯಾದರು; ಒಮ್ಮೊಮ್ಮೆ 'ಬೆದರುಗೊಂಬೆ' ಯಾದರು; ಮನಸ್ಸಾಕ್ಷಿ ಕಾರಣದಿಂದ ಇದಕ್ಕೊಪ್ಪದ ಸ್ವಾಮಿಗಳು 'ಲಂಪಟತ್ವ'ದ ಪಟ್ಟ ಕಟ್ಟಿಕೊಂಡು ಹೊರ ದೂಡಲ್ಪಟ್ಟರು. ಕೆಲ ಋಷಿಗಳೂ, ಮುನಿಗಳೂ, ವಿರಕ್ತರೂ ಲಂಪಟರಾಗಿದ್ದುದನ್ನು ಪುರಾಣೇತಿಹಾಸದಲ್ಲಿ ದಾಖಲಾಗಿದ್ದರೂ ಯಾರಿಗೂ ಈ ಮಾತು ಬೇಕಿಲ್ಲ.

ಇದೆಲ್ಲ ತಿಳಿದೂ ಮಠಾಧಿಪತಿಗಳೂ, ಪೀಠಾಧಿಪತಿ ಗಳೂ, 'ಜನಮನ್ನಣೆಯ ಗೀಳು', 'ದಕ್ಷಿಣಾ ದಾಕ್ಷಿಣ್ಯ'ಕ್ಕೆ ಕಟ್ಟುಬಿದ್ದು ಧಾರ್ಮಿಕವಲ್ಲದ ಪರಿಭಾಷೆ ಬಳಸುತ್ತಿರುವದು ಅಚ್ಚರಿ ಹುಟ್ಟಿಸುವಂತಹದಾಗಿದ್ದರೂ ಅಚ್ಚರಿ ಹುಟ್ಟಿಸದಷ್ಟು ರೂಢಿಯಾಗಿಬಿಟ್ಟಿದೆ. ಇದಕ್ಕೆ ಪೂರಕವಾಗಿ ಬುದ್ಧಿ ಜೀವಿಗಳು, ಸಮಾಜೋದ್ಧಾರಕರು, ವೈಚಾರಿಕರು, ರಾಜಕಾರಣಿಗಳು ತಮ್ಮದೇ ಆದ ಪರಿಭಾಷೆಯನ್ನು ಧಾರ್ಮಿಕ ಪರಿಭಾಷೆ ಎಂದು ತಮ್ಮ ಹಿತಾಸಕ್ತಿಗೆ ಅನುಗುಣವಾಗಿ ಚಾಮರ ಬೀಸುತ್ತಿರುವುದು ಖೇದಕರ. ಇದೆಲ್ಲ ವೀರಶೈವ ಧರ್ಮದ ಅಧೋಗತಿ ಎಂಬುದರಲ್ಲಿ ಸಂದೇಹ ಬರದಿದ್ದರೆ ಆಶ್ಚರ್ಯ !



ವಿಜಯ ಮಠ
೨ನೇ ರಸ್ತೆ, ವಿದ್ಯಾಗಿರಿ
ಬಾಗಲಕೋಟೆ - ೫೮೭ ೧೦೧

# ಗೇಟಾಯಣ

ನಿಜಕ್ಕೂ ಹೇಳುವುದಾದಲ್ಲಿ ಮನೆಯೊಂದರ ಸೊಬಗಿಗಿಂತ, ಅದರ ಮುಂದೆ ಸೊಗಸಾಗಿ ತಳಾಯಿಸುತ್ತಿರುವ ಆ ಗೇಟ್ ನನ್ನನ್ನು ಮುದಗೊಳಿಸುತ್ತಿರುತ್ತದೆ. ತುರುಬಿಗಿಂತಲೂ, ಮುಡಿಯಲ್ಲಿನ ಲಕ್ಷಣವಾದ ಹೂದಂಡೆ ಕಣ್ಮನ ಸೆಳೆಯುವುದಿಲ್ಲವೆ, ಹಾಗೆ.

ನಮ್ಮ ಗೃಹ ಸಾಮ್ರಾಜ್ಯದ ಕೋಟೆಯ ಗೋಡೆಯಂತಿರುವ ಕಾಂಪೌಂಡ್‌ಗೆ ಲಗತ್ತಿಸಿರುವ, ಕಬ್ಬಿಣದ್ದೋ, ಇಲ್ಲವೆ ಕಟ್ಟಿಗೆಯದ್ದೋ, ಛೋಟಾ ಯಾ ಬಡಾ, ಎಂಥದ್ದೋ ಒಂದು ಗೇಟ್ ಗರತಿ ಹಣೆಯ ಮೇಲಿನ ಕುಂಕುಮದಂತೆ ಲಕಲಕ ಹೊಳೆಯುತ್ತಿದ್ದರೇನೆ ಚಂದ.

ಈಗ ಅಂಥದ್ದೊಂದು ಗೇಟ್‌ನಲ್ಲಿ ನಿಂತು, ಒಳಗೆ ಬಾ, ರಸಿಕನೆ ಎಂದು, ನಿಮ್ಮ ಮುಂದೆ ಅದರ ಗ್ರೇಟ್‌ನೆಸ್ ಕೊಂಡಾಡುವ ಹುರುಹುರು ನನ್ನಲ್ಲಿ ಅದು ಹೇಗೆ ಹುಟ್ಟಿಕೊಂಡಿತೊ ಅರಿಯೆ. ನನ್ನ ಹುಚ್ಚುಖೋಡಿ ಮನಸ್ಸಿನ ಬೇಜಾನ್ ಖಯಾಲಿಗಳಲ್ಲಿ ಇದೂ ಒಂದು ಅಂದ್ಕೊಂಡು ಮಾಫ್ ಮಾಡಿಬಿಡಿ.

ನೆತ್ತಿಯ ಮೇಲೆ ಪಕ್ ಪಕ್ ಕಣ್ಬಿಡುವ ಕೆಂಪುದೀಪದ ಜತೆಗೆ, ಬ್ಯಾನೆಟ್ ಮುಂಭಾಗದಲ್ಲಿ ಧ್ವಜದ ಗೂಟು ಇದ್ದರೇನೆ, ಮಿನಿಸ್ಟರ್ ಕಾರ್‌ಗೆ ಭೂಷಣ! ಹಾಗೆಯೇ, ನಮ್ಮ ಟೊಣಪ ಗಣಪನಿಗೆ ಸಾಥ್ ಕೊಡುವ ಸೊಣಪ ಇಲಿರಾಯನಂತೆ, ಲಿಂಗಯ್ಯನ ಮುಂದಿರುವ ನಂದಿಯಂತೆ, ಮಾನಿಟರ್‌ಗೆ ತಳಕುಗೊಂಡಿರುವ ಮೌಸ್‌ನಂತೆ, ಚುಟ್ಟಾದ ಜನುಮದ ಜೋಡಿಯ ಬೆಂಕಿಪೊಟ್ಟಣದಂತೆ, ಡಾಕ್ಟರ್ ಹೆಗಲಿಗೆ ಅಂಟಿಕೊಂಡಿರುವ ಸ್ಟೆತೋನಂತೆ... ಅಂತೆ, ಅಂತೆಯೇ... ಮನೆಗೊಪ್ಪುವ ಒಂದು ಗೇಟ್ ಅನ್ನೋದು ಇದ್ದರೆ... ಆ ಖದರೇ ಬೇರೆ!

ಗೇಟಾಲಂಕೃತವಾಗಿರದ ಮನೆ, ಅದು ಎಂಥದ್ದೇ ಇರಲಿ, ಉಪ್ಪಿನಕಾಯಿ ಇಲ್ಲದ ಊಟದಂತೆ ರಸಹೀನ. ಮೂಗುತಿ ಇಲ್ಲದ ನಾರಿಯ ಮೂಗಿನಂತೆ ಕಳಾಹೀನ. ಬಿಲ್‌ಗೇಟ್‌ನದ್ದೇ ಆಗಿರಬಹುದು, ನಿಮ್ಮೂರ ಗೌಡಪ್ಪನದೇ ಇದ್ದೀತು. ಅಲ್ಲೊಂದು ಗೇಟ್ ಬೇಕೇಬೇಕು. ತನ್ನ ಕೈ'ಗೆಟ'ಕುವ ಗೇಟ್‌ವೊಂದನ್ನು ಮನೆಯಾತ ಹಾಕಿರಬೇಕು. ಅದುವೆ ಇರದ ಮನೆಗೆ, ನನ್ನ ದೃಷ್ಟಿಯಲ್ಲಿ ಮಾನ-ಮಾನ್ಯತೆ ಬಿಲ್‌ಕುಲ್ ಇಲ್ಲ. ಅದೊಂದು ಸರ್ವೋತ್ತಮ ಸದನ. ಅಂಥ ಮನೆಗೆ ಸಕಲ ಗೌರವ ಪ್ರಾಪ್ತವಾಗಿರುತ್ತದೆ.

ಯಥಾ ಗೇಟ್, ತಥಾ ಮನೆಯೊಡೆಯ.




ಆತನ ಅಂತಸ್ತಿಗೆ ಇದೊಂದು ಮಾನದಂಡ. ಗೇಟ್‌ನ ಗ್ರೇಡ್‌ಗೆ ಅನುಗುಣವಾಗಿ, ಮನೆ ಯಜಮಾನನ 'ಮಾನ' ಅಳೆಯಬಹುದು. ಮತ್ತೆ, ಮನೆಯವರ ಸೌಂದರ್ಯಪ್ರಜ್ಞೆ ಅಲ್ಲಿ ಪ್ರತಿಫಲಿತಗೊಂಡಿರುತ್ತದೆ. ಗೇಟ್‌ವೇ ಆಫ್ ಇಂಡಿಯಾದಿಂದಾಗಿ ಮುಂಬೈ ಮಾಯಾಂಗನೆ, ಇಂಡಿಯಾ ಗೇಟ್‌ನಿಂದ ದಿಲ್ಲಿ ದೊರೆಸಾನಿ ತಮ್ಮ ಡೌಲು ಇಮ್ಮಡಿಸಿಕೊಂಡಿಲ್ಲವೆ! ಅಂದಿನ ದೇಶೀ ಅಗಸಿ ಬಾಗಿಲ ಜಾಗದಲ್ಲಿ, ಈಗ ಪರಂಗಿ 'ಗೇಟ್'ಗಳು ಮಿಂಚುತ್ತಿವೆ, ಅಷ್ಟೆ!

ಮನೆ ಘನ, ಗೇಟು ಕಿರಿದೆನ್ನಬಹುದೆ? ಆನೆ ಕೊಂಡವನು ಅದರ ಸರಪಳಿ ಕೊಳ್ಳಲು ಮೀನಮೇಷ ಮಾಡಿದನಂತೆ. ಸಿಕ್ಕಾಪಟ್ಟೆ ದುಡ್ಡು ಸುರಿದು, ಭವ್ಯ ಮನೆ ಕಟ್ಟಿಸಿರುತ್ತಾರೆ. ಅದರ ಘನತೆಗೊಪ್ಪದ, ಎಂಥದ್ದೋ ಒಂದು ಸೊಟ್ಟು ಸೊಟ್ಟಾದ ಗೇಟ್ ತಂದು ಕೂಡ್ರಿಸಿದರೆ, ನೋಡಿದವರು ಏನಂದಾರು? ಚೆಂದನೆಯ ಚೆಲುವೆಗೆ ಅಷ್ಟಾವಕ್ರನಂಥ ಕುರೂಪಿಯೊಂದಿಗೆ ಮದುವೆ ಮಾಡಿದಂತಾಗೋದಿಲ್ಲವೆ? ಮನೆ ನೋಡಾ ಘನವದು, ಗೇಟ್ ನೋಡಾ ಅವಘಡದ್ದು ಅಂತಾಗಬಾರದು. ಗೇಟಿಗೆ ಹೋದ ಮಾನ, ಅರಮನೆ ಕೊಟ್ಟರೂ ಬಾರದು.

ಊರ ಹೊರಗಿನ ಕೋಟೆಬಾಗಿಲಿಗೆ ದೆವ್ವದಂಥ ಅಗಸಿ ಬಾಗಿಲು ಕೂಡಿಸುತ್ತಿದ್ದ ರಾಜ-ಮಹಾರಾಜರ ಕಾಲ ಎಂದೋ ಮುಗಿದುಹೋಯ್ತು. ಅರಮನೆಯ ಮಹಾದ್ವಾರದ ಮುಂದೆ, ಎದಿರು-ಬದಿರು ಜಯ-ವಿಜಯರ ಹಾಗೆ ದ್ವಾರಪಾಲಕರು ಇರುತ್ತಿದ್ದರೆ, ಈಗ ಅಪಾರ್ಟ್‌ಮೆಂಟ್‌ಗಳಲ್ಲಿ ಆ ಕೆಲಸವನ್ನು ಸೆಕ್ಯೂರಿಟಿ ಗಾರ್ಡ್‌ಗಳು ಮಾಡುತ್ತಿರುತ್ತಾರೆ.

ದೊಡ್ಡ ದೊಡ್ಡ ನಗರಗಳಲ್ಲಿ ಭೂಮಿಗೆ ಬರ ಬರುತ್ತಿದ್ದಂತೆಯೆ, ಹುಟ್ಟಿಕೊಂಡವು ಈ ಅಪಾರ್ಟ್‌ಮೆಂಟ್‌ಗಳು. ಮನೆ ಮೇಲೊಂದು ಮನೆ, ಅದರ ಮೇಲೆ ಇನ್ನೊಂದು, ಮಗದೊಂದು... ಒಬ್ಬನ ಹೆಗಲ ಮೇಲೆ ಮತ್ತೊಬ್ಬ ನಿಂತು, ನಮ್ಮ ಕಡೆ ಹಳ್ಳಿಗರಾಡುವ ಹಾಲುಗಂಬದೋಕುಳಿಯಂತೆ, ಒಟ್ಟೊಟ್ಟಾಗಿ ಇಟ್ಟಿರುವ ಪುಟ್ಟ ಪುಟ್ಟ ಮನೆಗಳ ಗೃಹ-ಗುಚ್ಛವಿದು.

ಭೂತಳದಿಂದ ಮೇಲಣ ಆಕಾಶದೆಡೆಗೆ ತಲೆ ಎತ್ತಿ ನಿಂತಿರುವ ಅಪಾರ್ಟ್‌ಮೆಂಟ್ ವಾಸಿಗಳಿಗೆ, ಸ್ವಂತ ಅನ್ನುವ ಗೇಟಿಲ್ಲ. ಯಾಕಂದ್ರೆ, ಇಂಥ ಕಟ್ಟಡಗಳಿಗೆ ಗೇಟ್ ಇದ್ದರೂ ಒಂದೇ, ಇರದಿದ್ದರೂ ಒಂದೇ. ಲಾಭವೂ ಇಲ್ಲ, ಹಾನಿಯೂ ಇಲ್ಲ.

ಆನೆ ಕೊಂಡವನು ಅದರ ಸರಪಳಿ ಕೊಳ್ಳಲು ಮೀನಮೇಷ ಮಾಡಿದನಂತೆ. ಸಿಕ್ಕಾಪಟ್ಟೆ ದುಡ್ಡು ಸುರಿದು, ಭವ್ಯ ಮನೆ ಕಟ್ಟಿಸಿರುತ್ತಾರೆ. ಅದರ ಘನತೆಗೊಪ್ಪದ, ಎಂಥದ್ದೋ ಒಂದು ಸೊಟ್ಟುಸೊಟ್ಟಾದ ಗೇಟ್ ತಂದು ಕೂಡ್ರಿಸಿದರೆ, ನೋಡಿದವರು ಏನಂದಾರು? ಚೆಂದನೆಯ ಚೆಲುವೆಗೆ ಅಷ್ಟಾವಕ್ರನಂಥ ಕುರೂಪಿಯೊಂದಿಗೆ ಮದುವೆ ಮಾಡಿದಂತಾಗೋದಿಲ್ಲವೆ? ಮನೆ ನೋಡಾ ಘನವದು, ಗೇಟ್ ನೋಡಾ ಅವಘಡದ್ದು ಅಂತಾಗಬಾರದು. ಗೇಟಿಗೆ ಹೋದ ಮಾನ, ಅರಮನೆ ಕೊಟ್ಟರೂ ಬಾರದು.

■ ಮಲ್ಲಿಕಾರ್ಜುನ ಹುಲಗಬಾಳಿ

ಮತ್ತೂ ಹೇಳುವುದಾದಲ್ಲಿ, ಈ ಅಪಾರ್ಟ್‌ಮೆಂಟ್‌ಗಳು, ಸ್ವಂತ ಬಲವಿಲ್ಲದೆ, ಇತರರೊಂದಿಗೆ ಕೂಡಿ ನಡೆಸುವ ಸಮ್ಮಿಶ್ರ ಸರ್ಕಾರಗಳಿದ್ದಂತೆ. ಸ್ವಂತಿಕೆ, ಸ್ವ-ಹಿತಗಳು ಗೌಣ. ನಮಗಿಷ್ಟವಾಗಿರಲಿ, ಬಿಡಲಿ, ಯಾವನೋ ಪುಣ್ಯಾತ್ಮ ತನಗೆ ಸರಿ ಕಂಡಂತೆ ಹಾಕಿಸಿರುವ ಗೇಟ್‌ನೊಂದಿಗೆ ಹೊಂದಿಕೊಂಡು ಹೋಗಬೇಕಾದ ಅನಿವಾರ್ಯತೆ. ಮನೆಗಳೂ ನೂರಾರು, ಗೇಟ್ ಮಾತ್ರ ಒಂದೆ. ಸರ್ಕಾರ ಏಕ್, ಪಾರ್ಟಿ ಅನೇಕ್ (ಅನೈಕ್ಯ!). ಇರುವ ಒಬ್ಬ ದೇವನಿಗೆ (ನಾವು ಹಾಕಿದ) ನಾಮ ಹಲವು.

೭೦ ಎಮ್‌ಎಮ್ ಸ್ಕ್ರೀನ್‌ನ ಈಸ್ಟಮನ್ ಕಲರ್ ಮೋಟಾ ಗೇಟ್‌ಗಳು, ಉಳ್ಳವರ ಧನ್ ಧನಾ ಅರಮನೆಯಂಥ ನಿವಾಸಗಳಿಗೆ ಭೂಷಿತವಾಗಿದ್ದರೆ, ೩೦ x ೪೦ ಸೈಟ್‌ಧಾರಿಗಳಿಗೆ ಕಪ್ಪುಬಿಳುಪಿನ, ಭಕ್ತ ಜ್ಞಾನದೇವ ಸಿನೇಮಾ ನೆನಪಿಸುವ, ಛೋಟಾ-ಸೋಟಾ ಗೇಟ್‌ಗಳೇ ಸೂಟ್.

ಮನೆಯೊಳಗೆ ಅಂತರ್ಗತವಾಗಿರುವ ಇಂಟೀರಿಯರ್ ಅಲಂಕಾರ ಅಬ್ಬಬ್ಬಾ ಎನ್ನುವಷ್ಟು ಘನಂದಾರಿಯಾಗಿದ್ದರೇನು ಬಂತು ?

''ಬರ್‍ರೀ, ನಮ್ಮ ಮನೆಯೊಳಗ ಹ್ಯಾಂಗ್ ಡೆಕೋರೇಶನ್ ಮಾಡೀವಿ ನೋಡ ಬರ್‍ರಿ'' ಅಂತೆಲ್ಲಾ, ಹಾದಿ-ಬೀದಿಯಲ್ಲಿ ಹೋಗಿಬರುವವರನ್ನೆಲ್ಲ ಒಳಕರೆದು, ತೋರಿಸಲಾದೀತೆ ? 'ಆನು ದೇವಾ ಹೊರಗಣವನು' ಎಂದು ಸಾರುತ್ತಲೆ, ನಮ್ಮ ಅಂತರ್ಗತ ಮೌಲ್ಯಪ್ರಜ್ಞೆಯನ್ನು ಹೊರಜಗತ್ತಿಗೆ ಪರಿಚಯಿಸುವ ಜವಾಬ್ದಾರಿ ಗೇಟ್‌ಗೆ ವಹಿಸಿಕೊಟ್ಟಿರುತ್ತೇವೆ. ಅವಾದರೂ ತಮಗೆ ವಹಿಸಿರುವ ಕೆಲಸವನ್ನು ಮೋಸವಿಲ್ಲದೆ ಚೆನ್ನಾಗಿ ಮಾಡುತ್ತವೆ.

ಒಳಗಣ ಹೂರಣವೆಂಥದ್ದಾದರೂ ಆದೀತು, ಅದರ ಹೊರಗಣ ಮುಖಪುಟ ಮಾತ್ರ ಭರ್ಜರಿಯಾಗಿರಬೇಕು. ಹಾಗಿದ್ದಾಗ ಪುಸ್ತಕ ಮಾರಾಟಕ್ಕೆ ಕಷ್ಟವಾಗೋದಿಲ್ಲ. ''ಗೆಟಪ್ ಚೆನ್ನಾಗಿದ್ದರೆ, ಎಲ್ಲವೂ ಸೆಟಪ್'' ಎಂಬುದು ಸಾಹಿತಿ ಮಿತ್ರನ ಅಂಬೋಣ! ''ಅಂತರಂಗ ಶುದ್ಧಿ ಯಾವನಿಗೋ ಬೇಕೊ ಹುಚ್ಚಪ್ಪಾ? ಬಹಿರಂಗದಲ್ಲಿ ನಾವು ಸುದ್ದಿಯಾದರೆ ಸಾಕು, ಧನ್ಯರಾಗಿ ಹೋಗ್ತೀವಿ, ಧನ್ಯರಾಗೀ...'' ಅನ್ನೊ 'ಹೊರಗಣವಾದಿ' ಬರಹಗಾರರಿಗೇನು ಬರವೆ ನಮ್ಮಲ್ಲಿ!

ವಾಚಕ ಮಹಾನುಭಾವ ಕ್ಷಮಿಸಬೇಕು. ಗೇಟ್ ಸುತ್ತಲೇ ಗಿರಕಿ ಹೊಡೆಯಬೇಕಾದ ಈ ಇಸಮ್ಮು, ಎತ್ತೆತ್ತಲೊ ಹಾರಾಡುತ್ತಿದೆಯಲ್ಲ ಎಂದು ಹುಬ್ಬುಗಂಟಿಕ್ಕಬಾರದು. ನಮ್ಮಂತ ಅಕ್ಷರ ಕಸುಬಿಗಳಿಗೆ ಇದೊಂದು ಅಡ್ಡಕಸುಬು. ಹೊತ್ತುಗೊತ್ತಿಲ್ಲದ ಗೌಡರ ಕೋಣ ಎಲ್ಲೆಲ್ಲೊ ಸೊರಗಾಡಿ ಬರುವುದಿಲ್ಲವೆ, ಹಾಗೆ ನಮ್ಮದೂ ಕೋಣ ದುರ್ಗುಣ.

ಹೊಸದಾಗಿ ಹುಟ್ಟಿಕೊಂಡಿರುವ ಬಡಾವಣೆಗಳತ್ತ ಪಾದ ಬೆಳೆಸುವ ಅವಕಾಶಗಳನ್ನು ನಾನು, ನಾನಾಗಿಯೇ ಆಹ್ವಾನಿಸುತ್ತೇನೆ. ಅಲ್ಲೆಲ್ಲ ನಮೂನೆ ನಮೂನೆ ಆವಿಷ್ಕಾರ ಪಡೆದ, ಚಂದ ಚಂದನೆಯ ಗೇಟ್‌ಗಳ ಪ್ರದರ್ಶನ ಅಪ್ರಾಸಂಗಿಕವೆಂಬಂತೆ ಏರ್ಪಾಡಾಗಿರುತ್ತದೆ.

ಬಣ್ಣ-ಬಣ್ಣದ ನಕ್ಷೆಯಿಂದ ತನ್ನೊಡಲು ತುಂಬಿಸಿಕೊಂಡಿರುವ ಗೇಟ್‌ಗಳದ್ದು ಒಂದು ಪರಿಯಾದರೆ, ಸಹಜತೆಯೆ ತನ್ನ ಹಿರಿಮೆ ಎಂದು ಸಾರುವಂಥವುಗಳದು ಇನ್ನೊಂದು ಪರಿ. ಈ ರೀತಿ ಪರಿಪರಿಯಾಗಿರುವಲ್ಲಿಯೇ ಇವುಗಳ ಪಾರಮ್ಯ ಇರೋದು.

ವೀಣೆ-ತಬಲಾಗಳಂಥ ಸಂಗೀತ ಪರಿಕರಗಳನ್ನು ಗೇಟ್‌ನಲ್ಲಿ ಮೂಡಿಸಿರುವ ಸಂಗೀತಗಾರರೂ, ತಮ್ಮಿಷ್ಟದ ದೇವಿ/ದೇವತೆಗಳನ್ನು ರೂಪಿಸಿರುವ ಭಕ್ತಗಣಂಗಳೂ, ಹೂ-ಗಿಡಗಳನ್ನು ಅರಳಿಸಿರುವ ಪರಿಸರ ಪ್ರೇಮಿಗಳೂ, ಕಾಲ ಚಕ್ರವೊ, ಅಶೋಕಸ್ತಂಭವೊ, ನಕ್ಷತ್ರಪುಂಜವೊ, ಅಲ್ಜಿಬ್ರಾದ ಸೂತ್ರವೋ, ಜಾಮೇಟ್ರಿಯ ಜಾಲವೊ, ಜೀವಶಾಸ್ತ್ರದ ಬಾಲವೊ... ಕಲ್ಪನೆಗೂ ಮೀರಿದ ಕಲೆಯ ಬಲೆ ಅಲ್ಲಿ ಹೆಣೆದುಕೊಂಡಿರುವುದನ್ನು ನೀವು ಕಾಣಬಲ್ಲಿರಿ. ಇಂಥ ಯಾವುದೇ ಕಿಸಾ 'ಮತಿ'ಗೂ ಮತಿ ಕೆಡಿಸಿಕೊಳ್ಳದ, ನಿರಾಭರಣ ಸುಂದರಿಯರೂ ಕಣ್ಣಿಗೆ ಬೀಳುತ್ತಾರೆ. ಗಾಂಧಿವಾದಿಗಳಂತೆ ಸಾಫ್-ಸಾದಾ ಆಗಿರುವ ಇವು, 'ಸರಳತೆಯೇ ಸರ್ವೋತ್ತಮವಾದುದು' ಎಂಬ ಸಂದೇಶ ಬೀರುತ್ತವೆ. ಯಾವುದೇನೆ ಇರಲಿ, ತಮ್ಮ ಯಜಮಾನರ ಅಭಿರುಚಿ – ಆಸಕ್ತಿಗಳನ್ನು ಮೂರ್ತರೂಪಕ್ಕಿಳಿಸಿದ ಧನ್ಯಭಾವ ಗೇಟ್ ಸಂಕುಲಕ್ಕೆ.

ಕೆಲ ಗೇಟ್‌ಗಳನ್ನು ನೋಡಬೇಕು. ಟೂ ಪೀಸ್, ಥ್ರೀ ಪೀಸ್‌ಗಳ ಬಿಕನಿ-ಬೆಡಗಿಯರಂತೆ (ಅ) ಪಾರದರ್ಶಕವಾಗಿರುತ್ತವೆ. ಒಳಗಿನ ವಿದ್ಯಮಾನಗಳನ್ನು ಬೀದಿಗೆಲ್ಲ ಆರ-ಪಾರದರ್ಶನ ಮಾಡಿಸುತ್ತಿರುತ್ತವೆ. ಇನ್ನು ಕೆಲವಿರುತ್ತವೆ, ಎರಡೆರಡಾಳೆತ್ತರದ ಜೇಲ್ ಗೇಟ್ ಜಾತಿಗೆ ಸೇರಿದವು. ತಲೆತುಂಬ ಸೆರಗು ಹೊದ್ದುಕೊಂಡಿರುವ ಬಿ. ಆರ್. ಪಂತುಲು ಕಾಲದ ಹಿರೋಯಿನ್ ತರಹ 'ಗರತಿ ಗಾಂಭೀರ್ಯ' ಅವಕ್ಕೆ. ಸಣ್ಣ ಸಣ್ಣ ಇರುವೆ ಕೂಡ

ನುಸುಳದಂತೆ, ಪಚ್ಚವಾಗಿರುತ್ತವೆ. ಥಳಕು-ಬಳುಕು ವೈಯ್ಯಾರದ ಇನ್ನೂ ಒಂದಿಷ್ಟು ಗೇಟ್‌ಗಳು. ತೆಳ್ಳಗೆ-ಬೆಳ್ಳಗೆ ನಾಜೂಕು ನಾರಿಯರಂಥವು ಇನ್ನೊಂದಿಷ್ಟು. ಇವೆಲ್ಲ ನೀವು ನಿಂತು ನೋಡುವಂತಿರುತ್ತವೆ.

ಜಗ್ಗಿ ಹಾಕುವ ಚಾನೆಲ್ ಗೇಟ್, ತಳ್ಳಿಕೊಂಡು ಹೋಗ ಬಹುದಾದ ರೋಟೇಟ್ ಗೇಟ್, ಎಳೆ-ಎಳೆದು ಹಾಕಿ ತೆಗೆದು ಮಾಡುವಂಥ ಚಾನಲ್ ಗೇಟ್, ರೋಯ್ಯಂತ ಮೇಲೆಳೆದು ಹಾಕುವಂಥ ರೋಲಿಂಗ್ ಗೇಟ್‌ಗಳು ಕೆಲವಾದರೆ, ಇನ್ನೂ ಕೆಲವಿರುತ್ತವೆ, ಜಕಾತಿ ನಾಕಾದ ಹೆಳವನಂತೆ, ಇದೆ ಅಂದ್ರೆ ಇದೆ, ಇಲ್ಲ ಅಂದ್ರೆ ಇಲ್ಲ, ನಾಮಕಾವಾಸ್ತೆ, ಇದ್ದೂ ಇಲ್ಲದಂತಿರುವ ಇರುವ ಬೋಳೆ ಶಂಕರ ಗೇಟ್‌ಗಳು. ದೂಡಿದರೆ ಮೈಮೇಲೆಯೇ ಮುರಿದುಕೊಂಡು ಬೀಳುವ ಬಡಪಾಯಿ ಗೇಟ್‌ಗಳು! ತನ್ನೊಡೆಯನ ಕಂಜೂಸ್ ತನವನ್ನು ಅವು ಶೋಕರಾಗದಲ್ಲಿ ಹಾಡುತ್ತಿರುತ್ತವೆ.

ಪರಪ್ಪನ ಅಗ್ರಹಾರದಂಥ ಜೇಲು ಗೇಟ್‌ಗಳನ್ನು ಗಮನಿಸಿದ್ದೀರಾ? ತಾಯಿ ಮಂಗ(ಗಿ)ನ ಹೊಟ್ಟೆಗೆ ಅಂಟಿಕೊಂಡ ಮರಿ ಮಂಗನಂತೆ, ದೊಡ್ಡ ಆನೆ ಗಾತ್ರದ ಗೇಟ್ ಒಡಲೊಳಗೇ ಮತ್ತೊಂದು ಛೋಟಾ ಗೇಟ್ ಲಗತ್ತಾಗಿರುತ್ತದೆ. ಅಗತ್ಯಬಿದ್ದಾಗ ಮಾತ್ರ, ದೊಡ್ಡದು ಬಾಯಿ ಅಗಲಿಸಿ ಆಕಳಿಸುತ್ತದೆ. ಉಳಿದ ವೇಳೆ, ಬಾಯಿ ಬಿಟ್ಕೊಂಡೇ ಇರ್ತದೆ. ನಮ್ಮ ಮಾನ್ಯ ಬುದ್ಧಿಜೀವಿಗಳಂತೆ. ಅದೇ, ಸರ್ವ ಕಾಲಕ್ಕೆ ಒದಗುವವನು ಈ 'ಛೋಟಾ' ಶ್ರೀಸಾಮಾನ್ಯ. ಇನ್ನು ರೈಲು ಗೇಟ್‌ಗಳದ್ದು ಕತೆಯೆ ಬೇರೆ. ಸದಾಕಾಲ ಮುಕ್ತವಾಗಿದ್ದು, ಟ್ರೇನು ಬರುವ ಹೊತ್ತಿಗೆ ಮುಚ್ಚಿಕೊಳ್ಳುತ್ತವೆ, ಒಳಮೀಸಲಾತಿ ನಿಯಮದಂತೆ.

ನಾನು ಸಣ್ಣವನಿದ್ದಾಗ, ಪೊಲೀಸ್ ಸ್ಟೇಷನ್‌ಗಳಿಗೆ, ಗೇಟ್ ಎಂಬ ನಾಮಧೇಯ ತಳುಕುಗೊಂಡಿತ್ತು. ಅದು ಯಾಕೆ ಹಾಗೆ ಕರೆಯುತ್ತಿದ್ದರೊ ಗೊತ್ತಿಲ್ಲ.'ಹಿಡ್ಕೊಂಡು ಹೋಗಿ ಅವ್ನ ಗೇಟಿನ್ಯಾಗ ಕುಂಡ್ರಸ್ಯಾರಂತಪೊ' ಎಂದೆಲ್ಲ ಪೊಲೀಸ್ ಕಸ್ಟಡಿಯಲ್ಲಿರುವ ಅಪರಾಧಿಗಳ ಬಗ್ಗೆ ದೊಡ್ಡವರು ಮಾತಾಡುತ್ತಿದ್ದುದನ್ನು ಕೇಳಿದ್ದೇನೆ.

ಸರ್ವ ಋತು ಬಂದರುಗಳಂತೆ, ಸದಾಕಾಲ ತೆರೆದು ಕೊಂಡೇ ಇರುವ ಈ ಪೊಲೀಸ್ ಸ್ಟೇಷನ್‌ಗಳಿಗೆ ಗೇಟ್‌ಗಳಾದರೂ ಯಾಕಿರಬೇಕು? ಅದೂ ಹೋಗ್ಲಿ, ಸ್ಟೇಷನ್‌ಗಳಿಗೆ ಗೇಟ್‌ಗಳೆಂಬ ಪರ್ಯಾಯ ಪದ ಯಾಕೆ ತಳುಕು ಹಾಕಿದರೊ! ನೀರಿಗೆ ಎಳ್ಳಷ್ಟೂ ಸಂಬಂಧವಿಲ್ಲದ್ದು 'ವಾಟರ್‌ಗೇಟ್' ಆಗಿಲ್ಲವೆ? ಆ ಇದು ಕೂಡಾ, ಅದೇ ಕೇಸು ಇರಬಹುದೇನೊ! ದುಡ್ಡಿಲ್ಲ, ದುಗ್ಗಾಣಿ ಕಂಡಿಲ್ಲ ಆದರೂ ಶ್ರೀಮಂತಪ್ಪ, ರೆಕ್ಕಿಲ್ಲ ಪುಕ್ಕಿಲ್ಲ ಆದರೂ ನವಿಲಮ್ಮ ಎನ್ನುವುದಿಲ್ಲವೆ, ಹಾಗಿರಬಾರದೇಕೆ?

ನಾನೂ ನನ್ನ ಮನೆಗೊಂದು ಗೇಟ್ ಹಾಕಿಸಿದ್ದೇನೆ. ಕಚ್ಚುವದಂತೂ ಬಿಡಿ, ಬೊಗಳಲೂಬಾರದ ಸೊಟ್ಟನಾಯಿ ಸಾಕಿದಂತೆ. ತಾನಿನ್ನೂ ಬದುಕಿದ್ದೇನೆ ಎಂದು ಜೀವಿತ ಪ್ರಮಾಣಪತ್ರ ಕೈಯಲ್ಲಿ ಹಿಡಿದು ಕಚೇರಿಯಿಂದ ಕಚೇರಿಗೆ ಓಡಾಡುವ ಪೆನ್ಶನ್ ಪ್ರಾಣಿಗಳಂತೆ, ಅಸ್ತಿತ್ವ ಸಾಬೀತು ಪಡೆಸಲು ನೆಪಕ್ಕೊಂದು ಗೇಟ್ ನಮ್ಮ ಮನೆಗೆ ಇದೆ.

ನಮ್ಮನೆ ಅಂತಂದ್ರೆ, ಸರ್ವರಿಗೂ ಮುಕ್ತವಾಗಿರುವ ಸರಕಾರಿ ಸಮುದಾಯ ಭವನ. ಮೇಲ್ಛಾವಣಿಯಲ್ಲಿ ನೂಲು ಒಣಹಾಕುವ ಒಣೆಯ ಬಣಗಾರರು, ಹಿತ್ತಲನ್ನು ಕ್ರಿಕೆಟ್ ಗ್ರೌಂಡ್‌ಆಗಿ ಬಳಸುವ ನೆರೆ 'ಹೊರೆ' ಬಾಲರಹಿತ ಕೋತಿ ಬಳಗ, ಮೇಲೆ ಬಾಡಿಗೆ ಇದ್ದವರನ್ನು ಕಾಣಲು ಬರುವ ಅತಿಥಿ ಗಣಂಗಳು, ನಮ್ಮೊಡಗರ ಮಿತ್ರಸಮೂಹ, ಮನೆಯಾಕೆ ಚೇರ್(ಉ)ಮನ್ ಆಗಿರುವ ಮಹಿಳಾ ಸಮಾಜ ಭಗಿನಿಯರು, ಹಿಂದಿನ, ಇಂದಿನ ಮತ್ತೂ ಮುಂದಿನ ನನ್ನ ಶಿಷ್ಯಕೋಟಿ... ಈ ಇವರಿಗೆಲ್ಲ, 'ತೆರೆದಿದೆ ಈ ಗೇಟ್ ಬಾ ಅತಿಥಿ'.

ಯರ್‍ರಾಬಿರ್‍ರಿ ಒಳ ಬರುವವರು, ಬಂದ ಮೇಲೆ, ಹೊರ ಹೋಗುವವರಿಗೆ ಗೇಟ್ ಅಗತ್ಯ ಯಾವತ್ತಿಗೂ ಇದ್ದಂತಿಲ್ಲ. ಮುಚ್ಚಿದ್ದ ಗೇಟ್ ತೆಗೆದು ಒಳಬರುವ ಮಹಾನುಭಾವ, ತಿರುಗಿ ಅದನ್ನು ಮುಚ್ಚುವುದೇ ಇಲ್ಲ. ಹಾಗೆ ನುಗ್ಗಿಬಂದವ, ಬಂದ ಕಾರ್ಯ ಪೂರೈಸಿಯಾದ ಮೇಲೆ, ಹೊರ ಹೋಗುವಾಗಲೂ, ಗೇಟ್ ಮುಚ್ಚುವ ಉಸಾಬರಿತನಕ್ಕೆ ಕೈ ಹಾಕುವುದಿಲ್ಲ.

''ತೆಗೆದೇ ಇರಬೇಕಾಗಿದ್ದ ಗೇಟ್‌ಅನ್ನು ಯಾರೋ ಮುಚ್ಚಿದ್ದಾರೆ. ಪಾಪ. ಮನೆಯವರಿಗೇಕೆ ತೊಂದರೆ, ನಾವೇ ಅದನ್ನು ತೆಗೆದಿಟ್ಟು ಹೋದರಾಯಿತು'' ಎಂಬ ಲೋಕಕಲ್ಯಾಣ ಭಾವ ಅವರಿಗಿರುತ್ತದೆ!

''ನೋಡ್ರೀ, ಯಾರೋ ನಿಮ್ಮನ್ನು ಕಂಡರಾಗದವರು, ಗೇಟ್ ಹಾಕಿದ್ದರು, ನಾನು ಇದನ್ನು ತೆಗೆದಿಟ್ಟು ನಿಮಗೆ ಉಪಕಾರ ಮಾಡಿದ್ದೇನೆ'' ಎನ್ನುತ್ತಾರೆ. ಪೊಲೀಸ್ ಕಸ್ಟಡಿಯಿಂದ ಜಾಮೀನ ಮೇಲೆ ಆರೋಪಿಯನ್ನು ಬಿಡಿಸಿಕೊಂಡು ಬಂದ ಕರೀ ಕೋಟಿನವರಂತೆ, ತಮ್ಮ ಶಾಣ್ಯಾತನ ಪ್ರದರ್ಶಿಸುತ್ತಾರೆ. ಇಂಥ ಜನ ಬೇಜಾನ್ ಸಿಗ್ತಾರೆ ಬಿಡಿ.

ಅವರು ಹೀಗೆ ಒಳಬಂದು, ಹಾಗೆ ಹೊರಹೋಗುವ ಐದ್ಹತ್ತು ನಿಮಿಷಗಳ ಕಾಲಾವಧಿಯಲ್ಲಿ, ಕಷ್ಟಪಟ್ಟು ಬೆಳೆಸಿರುವ ಮನೆಯಂಗಳದ ಹೂಗಿಡಗಳು, ಬೀಡಾಡಿ ದನಗಳ ಬಾಯಿಗೆ ತುತ್ತಾಗಿಬಿಟ್ಟಿರುತ್ತವೆ.

''ಯಷ್ಟೊತ್ತ ತುಗೋರ್‍ರೀ, ಯಾಡ್ ಮಿನಟಿನ ಕೆಲ್ಸಾ, ಈಗೊಮ್ಮೆ ಆಗೊಮ್ಮೆ ಅಂತ ಯಡ್ಡೆಡ್ಡ ಸಲ ಯಾಕ ಹಾಕೂದಂತ, ಗೇಟ್ ಹಂಗೆ ಖುಲ್ಲಾ ಇಟ್ಟೇನ್ರೀ'' ಎಂದು ಒಳ ನುಗ್ಗುತ್ತಾರೆ ಕೆಲವರು.

''ಅಲ್ರೀ ಮಾರಾಯರ, ಗೇಟ್ ಹಾಕುದಂದ್ರ, ಅದೇನು ಆ ಕಡಿ ಗುಡ್ಡಾ ಈ ಕಡಿ ಎತ್ತಿಟ್ಟಾಂಗೇನ್ ಅಲ್ಲಲ್ರೀ. ಹಂಗೆಲ್ಲಾ ಖುಲ್ಲಾ ಇಡೋದೇ ಇದ್ದಿದ್ದರ, ಕಂಡಾಪಟ್ಟೆ ರೊಕ್ಕಾ ಕೊಟ್ಟು, ಈ ಗೇಟಾದ್ರೂ ಯಾಕ್ ಹಾಕಿಸ್ತಿದ್ದೆ?'' ನನ್ನ ಮಾತಿನ ಸೀರಿಯಸ್‌ನೆಸ್‌ಗೆ, ಇದೂ ಒಂದು ಹಾಸ್ಯವೆಂಬಂತೆ ಹಗುರವಾಗಿ ಸ್ವೀಕರಿಸಿ, ಹ್ಹೇ...ಹ್ಹೇ... ಹಲ್ಲು ಕಿಸಿಯುತ್ತಾರೆ.

''ಹಿಂಗಾದ್ರ ನಮ್ಮ ಮನೀ ಗೇಟಿನೊಳಗ ಕಾಲಿಡ ಬ್ಯಾಡ'' ಅಂತ ನಿಷ್ಠೂರದ ಮಾತು ಹೇಳ್ಲಿಕ್ಕೆ, ಸೌಜನ್ಯ ಅಡ್ಡಬರುತ್ತದೆ. ಮುಳ್ಳುಬಿತ್ತಿ ಅಂಗಾಲಿಗೆ ಮೂಲ ಮಾಡಿಕೊಂಡರು ಎನ್ನುವುದು ನನ್ನಂಥವರನ್ನು ನೋಡಿಯೆ ಹೇಳಿರಬೇಕು.

ನಮಗಾಗುವ ಸಂಕಟ ಯಾವತ್ತಿಗೂ ಈ ಅಭ್ಯಾಗತರಿಗೆ ಅರ್ಥವಾಗೋದಿಲ್ಲ. ಮುಂಚೆ ಬೃಂದಾವನದಂತೆ ಲಕಲಕಿ ಸುತ್ತಿದ್ದ ನಮ್ಮ ಮನೆ ಹೂದೋಟ, ಇಂದು ಮುನ್ಸಿಪಾಲ್ಟಿ ಪಾರ್ಕ್ ನಾಚುವ ರೀತಿಯಲ್ಲಿ ಕೆಟ್ಟು ಎಕ್ಕುಟ್ಟಿಹೋಗಿದೆ.

''ಅಲ್ರೀ ಗೇಟ್ ಹಾಕ್ಕೊಂಡು ಬರಬಾರ್ದನ್ರೀ?'' ಎಂದು ಒಳ ಬರುವವರಿಗೂ, ''ಹೋಗು ಮುಂದ ಮತ್ತ ಗೇಟ್ ಹಾಕೊಂಡು ಹೋಗ್ರೀ'' ಎಂದು ಹೊರ ಹೋಗುವವರಿಗೂ ನಾನು ಮಾಡಿಕೊಂಡ ಅರಿಕೆಗಳಿಗೆ,



ಎಚ್ಚರಿಕೆಯ ಸೂಚನೆಗಳಿಗೆ, ನಿರ್ದೇಶನಗಳಿಗೆ ಲೆಕ್ಕವಿಲ್ಲ. ಹೊಳೆಯಲ್ಲಿ ಹುಣಸೆ ತೊಳೆಯುತ್ತಲೇ ಬರುತ್ತಿದ್ದೇನೆ. ಅವೆಲ್ಲ ಮಂತ್ರಿಗಳಿಗೆ ಅರ್ಜಿಸಿದ ಮನವಿಪತ್ರಗಳ ಹಾಗೆ, ಈವರೆಗೂ ಫಲ ನೀಡಿಲ್ಲ. ನೀಡುವ ಲಕ್ಷಣಗಳೂ ಕಂಡಿಲ್ಲ. ನಾನೇ ಉಗುಳು ನುಂಗಿ ಸುಮ್ಮನಾಗಬೇಕಾಗುತ್ತದೆ. ನನ್ನ ಇವಳಂತೂ ದುಮು ದುಮು ಉರಿಯುತ್ತಾಳೆ.

ಇದೆಲ್ಲಾ ಇದ್ದದ್ದೇ. ನೆಗಡಿಯಾಗಿದೆ ಎಂದು ಮೂಗನ್ನು ನಿರ್ಲಕ್ಷಿಸುವುದುಂಟೆ? ಎಲ್ಲದಕ್ಕೂ ಒಂದೊಂದು ಮೈನಸ್ ಪಾಯಿಂಟ್ ಇರುವುದಿಲ್ಲವೆ? ಚೆಂದನೆಯ ಗುಲಾಬಿಗೆ ಮುಳ್ಳು ಗಂಟುಬಿದ್ದಂತೆ. ವಿಮರ್ಶೆಗಂಜಿ, ಪುಸ್ತಕ ಗೀಚೋದನ್ನು ಯಾರು ಬಿಟ್ಟಿದ್ದಾರೆ, ಹೇಳಿ? ಅಂತೆಯೇ ಈ ಗೇಟ್‌ನ ನಂಟು. ನಮ್ಮ ಮೌಲ್ಯ-ಪ್ರಜ್ಞೆ ವ್ಯಕ್ತವಾಗುವುದೇ ಈ ಗೇಟ್‌ಗಳ ಮೂಲಕ!

''ಎಷ್ಟ ಛಲೋ ಮಂದಿ ಅಂತೀರಿ. ನಮ್ಮ ಸಲುವಾಗಿ ಗೇಟ್‌ನ್ಯಾಗ ಕಾದು ನಿಂತಿದ್ದರು. ಮತ್ತ ನಾವು ತಿರುಗಿ ಹೊರಡು ಮುಂದ, ಗೇಟ್ ತನಕಾ ಬಂದು, ಹೋಗಿ ಬರ್‍ರೀ ಅಂತಂದ್ರು, ಇಷ್ಟ ದೊಡ್ಡವರಾದ್ರೂ, ಏನ್ ನಯಾ, ವಿನಯಾ... ಖರೇವಂದ್ರೂ ಬಾಳ ಸಜ್ಜನ ಜನಾ ನೋಡ್ರಿ'' ಎಂಬ ಹೊಗಳಿಕೆಯ ಹೂವು ನಮ್ಮ ಮುಡಿಗೆ ಏರುತ್ತದೆ.

ಆದರೆ, ಅದರ ರಿವರ್ಸ ಸೀನ್ ಹೇಗಿರುತ್ತದೆ ಗಮನಿಸಿದ್ದೀರಾ? ''ಏSSS, ತಗೀರೀ... ಅಂವಂದೇನ್ ಹೇಳ್ತೀರಿ, ಸುಡುಗಾಡಾ. ಮೊನ್ನೀ ಮನಿಗಂತ ಹೋದಾಗ, ಗೇಟ್ ಹೊರಗSSS ನಿಂತು, ಹಂಗೇ ಮಾತಾಡಿಸಿ ಕಳಿಸಿದಾ. ಒಳಗ ಸೈತ ಬಾ ಅನ್ನಲಿಲ್ಲ, ಸೈತಾನಾ'' ಎಂದು ಹಲ್ಲು ಮುಡಿಸುತ್ತಾರೆ.

ಇಂಗ್ಲಿಷಿನ ಗೆಟೌಟ್, ಗೆಟ್‌ಲಾಸ್ಟ್ ನುಡಿಪುಂಜಗಳಿಗೂ, ಮತ್ತೆ ಈ ಗೇಟಿಗೂ ಹತ್ತಿರದ ಸಂಬಂಧವಿರಬಹುದು. ಯಾಕಂದ್ರೆ ''ಇನ್ಮುಂದ್ ನಮ್ಮ ಮನೀ ಗೇಟಿನೊಳಗ ಕಾಲಿಡಬ್ಯಾಡಾ'' ಎಂದು ಉಗಿಸಿಕೊಂಡವನ ಯೋಗ್ಯತೆಗೆ ಇನ್ನೊಂದು ಸರ್ಟಿಫಿಕೇಟ್‌ನ ಅಗತ್ಯವಿಲ್ಲ.

ಈಗ ನೀವೂ ಹೌದೆನ್ನುತ್ತೀರಿ, ಅಂದ್ಕೊಂಡಿದ್ದೀನಿ.

ಮಲ್ಲಿಕಾರ್ಜುನ ಹುಲಗಬಾಳಿ
ಬಸವ ಸಂಪದ, ಬನಹಟ್ಟಿ - ೫೮೭ ೩೧೧, ಬಾಗಲಕೋಟ ಜಿಲ್ಲೆ

# ಲೂಸಿಯಾ

ಲೂಸಿಯಾ.

ಸಾಯಂಕಾಲ ಪ್ರಕಟಿಸಿದೆ
ರಾತ್ರಿಯ ಆಗಮನವನ್ನು, ಎಳೆ ತಾಯಂದಿರು
ಬರಿಕಾಲಲ್ಲಿ ಆಡುತ್ತಿರುವ ತಮ್ಮ ಮಕ್ಕಳನ್ನು
ಮನೆ ಒಳಕ್ಕೆ ಕರೆಯುತ್ತಿದ್ದಾರೆ : ಅಕ್ಕಪಕ್ಕದ
ಮನೆಗಳ ನಾಯಿಗಳು ನನ್ನನ್ನು ನೋಡಿ
ಬೊಗಳುತ್ತಿವೆ ಹೊಸಬನನ್ನು ನೋಡಿದಂತೆ.
ಒಂದು ಎಳೆ ಮಿಂಚಿನಿಂದ ಆಕಾಶ ಗುರ್ರೆಂದಿದೆ,
ಬೇಸಿಗೆಯ ದೇವತೆಗಳು ಪ್ರಮಾಣ ಮಾಡಿದ್ದಾರೆ
ರೋಷದ ಕಣ್ಣೀರು ಭೂಮಿಯ ಮೇಲೆ ಸುರಿಸುವುದಾಗಿ.
ಏನಾಶ್ಚರ್ಯ ಲೂಸಿಯಾ ? ಈ ಸಮಯ
ನಿನ್ನನ್ನು ಜ್ಞಾಪಿಸಿಕೊಳ್ಳುತ್ತಿದ್ದೇನೆ.

ನನ್ನ ಕೋಣೆ ಗೊತ್ತಿಲ್ಲದ ಒಬ್ಬ ಮಹಿಳೆ,
ಪ್ರತಿ ದಿನ ಒಳಗೆ ಪ್ರವೇಶಿಸುತ್ತೇನೆ, ನನ್ನ ಕತೆ
ಸಂಭಾಷಣೆ ಕಿವಿಗೊಟ್ಟು ಕೇಳುತ್ತವೆ ಹರಿದಾಕಿದ
ಕಾಗದ ಚೂರು ಪುಸ್ತಕಗಳು ನಿರಂತರವಾಗಿ,
ನಿನ್ನ ಹೆಸರು ಅವುಗಳಿಗೆ ಆಪ್ತ ಪರಿಚಯ.

ರಾತ್ರಿಯ ಕತ್ತಲು ಮಂಜಿನಂತೆ ಬೀಳುತ್ತದೆ.
ನಿಶ್ಶಬ್ದ ಭೂಮಿಯ ಮೇಲೆ ಬಿದ್ದುಹೋಗಿದೆ,
ನಿನ್ನ ನಗುವು ಉಳಿದುಹೋಗಿದೆ ನಿಗೂಢವಾಗಿ.
ನಿನ್ನ ತುಟಿಗಳಲ್ಲಿ ಏನು ಅಡಗಿದೆಯೊ,
ಹೇಳು ಮಹಿಳೆ ಯಾರು ಏಕೈಕ ಅಂದಗಿತ್ತಿ ?

ನೀನು ಸರಳವೂ ಅಲ್ಲ ಜಟಿಲವೂ ಅಲ್ಲ –
ನಿಜವಾಗಿಯೂ ನನಗೆ ಗೊತ್ತಿಲ್ಲ.
ಹುಡುಗಿಯರೆ, ಆಕಳಿಸುವ ಕಣಿವೆಗಳಿಂದ –
ಮೋಡಗಳು ತಮ್ಮ ಪದ್ಧತಿಗಳನ್ನು ನೆರವೇರಿಸುವ
ಪರ್ವತಗಳಿಂದ ಬಂದವರೆ ತೋರಿಸಿ ನಿಮ್ಮ
ಅಂಗೈಗಳಲ್ಲಿರುವ ಹೆದ್ದಾರಿಗಳನ್ನು,
ನಿಮ್ಮನ್ನು ಸದ್ದಿಲ್ಲದೆ ಕರೆದೊಯ್ಯುವೆ
ಅಣಬೆ ಗಿಡಮೂಲಿಕೆ ತೇವದ ಎಲೆ
ಕಾಡುಬೆರ್ರಿ ನೆನೆದ ಭೂಮಿಗೆ.

ನನಗೆ ಅವಕಾಶ ನೀಡು ಪರಿಚಯಿಸುವೆ ಸೌದೆ ಆಯುವ
ಸಾವಿರ ನೆರಿಗೆಗಳುಳ್ಳ ಅಜ್ಜಿಯನ್ನು, ಕುಡುಕ



ಸೋಮಾರಿ ಗಂಡಸು ನದಿಯ ಪಕ್ಕದಲ್ಲಿ ಕುಳಿತು
ಕಾಲಹರಣ ಮಾಡುತ್ತಾನೆ, ನಗರವಾಸಿಗಳ ಪ್ರೀತಿ
ಮತ್ತು ವಂಚನೆಯ ನಡುವಿನ ವ್ಯತ್ಯಾಸ ಅರಿಯದ
ಹಳ್ಳಿ ಬಾಲೆಯರೆ ಏನು ಹೇಳಲಿ ?

ನನ್ನ ನೆಲದ ಬಗ್ಗೆ ಮುಕ್ತಾಯವಿಲ್ಲದೆ ಮಾತನಾಡಬಲ್ಲೆ,
ನನ್ನ ತಲೆಮಾರು, ದಂತಕತೆಗಳು, ಭೂಗೋಳ.
ನಾನು ಹೇಳಬಲ್ಲೆ ಪ್ರೀತಿ ಮತ್ತು ಬಲಿದಾನ
ಮಾಡಿದ ಚಕ್ರಾಧಿಪತಿಗಳ ಬಗ್ಗೆ, ಅವರು ಗೆದ್ದು ತಂದ
ವಿದೇಶಿ ಮಹಿಳೆಯರ ಬಗ್ಗೆ; ಬಿಳಿಯರು ನಮಗೆ
ಕಲಿಸಿಕೊಟ್ಟರು ಕೀಳರಿಮೆಯಾಗಿ ಬದುಕುವುದನ್ನು;
ಕಪ್ಪು ಜನರು ಬಂದರು ಮುಖದ ಮೇಲೆ ನಗು
ತೋರಿಸುತ್ತ ಹೃದಯದಲ್ಲಿ ವಿಷ ಅಡಗಿಸಿಕೊಂಡು.
ಇಂದಿಗೂ, ದುರಂತ ಚರಿತ್ರೆಯುಳ್ಳ ಪರ್ವತಗಳನ್ನು
ಗಾಯಗೊಳಿಸುತ್ತಿದ್ದಾರೆ, ಉಚ್ಚರು ತಮ್ಮ ಹೆಸರುಗಳನ್ನು
ಕಾರು ಮನೆಗಳ ಜೊತೆಗೆ ವಿನಿಮಯ ಮಾಡಿಕೊಳ್ಳುತ್ತಿದ್ದಾರೆ.
ಲೂಸಿಯಾ, ನನ್ನನ್ನು ಮರೆತುಬಿಡು.

ಇಂಗ್ಲಿಷ್ ಮೂಲ : **ಅಲ್ಫ್ರೆಡ್ ಡಿ. ಸ್ವಯಂ**
ಕನ್ನಡಕ್ಕೆ : **ಡಾ|| ಎಂ. ವೆಂಕಟಸ್ವಾಮಿ**
ಡಿ-೧೧, ಸಿ.ಜಿ.ಓ.ಹೌಸ್., ಸಿ.ಪಿ.ಡಬ್ಲ್ಯೂ.ಡಿ. ಕ್ವಾರ್ಟರ್ಸ್, ದೊಮ್ಮಲೂರು
ಬೆಂಗಳೂರು - ೫೬೦ ೦೭೧

# ಗೋಕಾಕರ ಪ್ರಬಂಧ ಸಾಹಿತ್ಯ

**ರಂಗರಾಜ ವನದುರ್ಗ**

ಕನ್ನಡ ಸಾಹಿತ್ಯದಲ್ಲಿನ ವಿವಿಧ ಪ್ರಕಾರಗಳನ್ನು ಗಮನಿಸಿದಾಗ ಪ್ರಬಂಧ ಪ್ರಕಾರಕ್ಕೆ ಇನ್ನೂ 'ಲಘು'ವಿನ ಸ್ಥಾನವೇ ಇದೆ ಅನ್ನಿಸುತ್ತದೆ. ಅದನ್ನು ಲಘು ಪ್ರಬಂಧ, ಹಾಸ್ಯ ಪ್ರಬಂಧ, ಹರಟೆ ಪ್ರಬಂಧ, ಲಲಿತ ಪ್ರಬಂಧಗಳೆಂದು ಕರೆದಿರುವುದರಲ್ಲಿ ಕಾಕತಾಳೀಯವೂ ಇರಬಹುದು. ಅಂದರೆ, ಇನ್ನುಳಿದ ಕಥೆ, ಕಾವ್ಯ, ಕಾದಂಬರಿ, ನಾಟಕಗಳಷ್ಟು ಪ್ರಭಾವಶಾಲಿ ಪ್ರಕಾರವಾಗಿ ಹೊರಹೊಮ್ಮದೆ ಇರುವುದಕ್ಕೆ ಯಾವುದೋ ಕಾರಣವು ಇರಬಹುದು. ಆದರೂ ಗೊರೂರು, ವಿ.ಸೀ., ಕುವೆಂಪು, ಕಾರಂತ, ಧಾರವಾಡಕರ್, ಸಿಂಪಿ, ಹಾ.ಮಾ.ನಾ., ಎಚ್ಚೆಸ್ಕೆ ಮುಂತಾದವರ ಜೊತೆಗಿನ ಗೋಕಾಕರ ಪ್ರಬಂಧ ಸಾಹಿತ್ಯ ಸಮೃದ್ಧವಾಗಿದೆ.

ವಿ. ಕೃ. ಗೋಕಾಕರ ಪ್ರಬಂಧ ಸಾಹಿತ್ಯದಲ್ಲಿ ಮೂರು ಮಾದರಿಗಳಿವೆ. ಸೃಜನ ಪ್ರಬಂಧ, ವಿಮರ್ಶನ ಪ್ರಬಂಧ, ಸಂಶೋಧನ ಪ್ರಬಂಧಗಳೆಂದು ಇವುಗಳನ್ನು ವಿಭಜಿಸಿ ಕೊಳ್ಳಬಹುದು. ಹಾಗೆ ನೋಡಿದರೆ ಇವರ ಸಂಶೋಧನ ಪ್ರಬಂಧಗಳು ತುಂಬಾ ಕಡಿಮೆ. ಇನ್ನುಳಿದಂತೆ, ಸೃಜನ ಪ್ರಬಂಧಗಳಲ್ಲಿ 'ಚೆಲುವಿನ ನಿಲುವು', 'ಜೀವನ ಪಾಠಗಳು' ಹಾಗೂ 'ಇಂದಿನ ಕರ್ನಾಟಕ' ಎಂಬ ಮೂರು ಸಂಕಲನಗಳು ಮಹತ್ವದ ವಸ್ತು ವಿಷಯದ ಜೊತೆ ಲಲಿತ ಗುಣವನ್ನು ಹೊಂದಿವೆ. ಈ ಮೂರು ಸಂಕಲನಗಳು ರಚನೆಗೊಂಡದ್ದು ದೇಶಕ್ಕೆ ಸ್ವಾತಂತ್ರ್ಯ ಬಂದನಂತರದ ವರ್ಷಗಳಲ್ಲಿ ಯಾದರೂ ಇವುಗಳ ವಸ್ತು-ವಿಷಯ ಕೌಟುಂಬಿಕವೂ ಹಾಗೂ ಸಾರ್ವಜನಿಕವೂ ಆಗಿರುವುದು ವಿಶೇಷ.

ಇವರ 'ಚೆಲುವಿನ ನಿಲುವು' (೧೯೪೮) ಅರವತ್ತು ವರ್ಷಗಳ ಹಿಂದೆಯೇ ಪ್ರಕಟವಾದ ಪ್ರಬಂಧ ಸಂಕಲನ. ಚೆಲುವಿನ ವಿವಿಧ ಒಲವುಗಳನ್ನು, ನಿಲುವುಗಳನ್ನು, ಕಣ್ಣಬಣ್ಣಗಳನ್ನು ಹೇಳುವ ಕೃತಿಯಿದು. ಏಕಕಾಲಕ್ಕೆ ಇದು ಲೇಖಕರ ಆತ್ಮಕಥನ, ಪ್ರವಾಸಕಥನ ಮತ್ತು ಸೌಂದರ್ಯ ಕಥನವೂ ಆಗಿರುವುದು ಗಮನೀಯ ಸಂಗತಿ. ಅಂದರೆ, ಇಲ್ಲಿನ ಹದಿಮೂರು ಪ್ರಬಂಧಗಳಲ್ಲಿ ನಡೆದಿರುವ ಗೋಕಾಕರ ಬೋಧನ, ನಿವೇದನ, ಚಿಂತನ ಮತ್ತು ವಿಚಾರ ವಿಮರ್ಶನಗಳು ಪೂರ್ವ-ಪಶ್ಚಿಮ ದೇಶಗಳ ಸೌಂದರ್ಯವನ್ನು ಸರ್ವೇಕ್ಷಣ ಮಾಡುತ್ತವೆ. ಗೆಳೆಯರ ಗುಂಪಿನ ಸದಸ್ಯರೊಡನೆ ಗಳಿಸಿದ ಸಂಸ್ಕಾರವನ್ನು ಮತ್ತು ಗುಜರಾತ್, ಇಂಗ್ಲೆಂಡ್‌ಗಳಲ್ಲಿ ಪಡೆದ ಅನುಭವಗಳನ್ನು ಇಲ್ಲಿ ವಿವಿಧ ಕೋನಗಳಿಂದ ದಾಖಲಿಸಲಾಗಿದೆ. ಪಶ್ಚಿಮದ ನೆಲದಲ್ಲಿ ನಡೆದ ತೀರಾ ಖಾಸಗಿ ಅನುಭವಗಳು ಸಹ ಇಲ್ಲಿ ಪ್ರವೇಶ ಪಡೆದಿವೆ.

ಗೋಕಾಕರು ಪ್ರಸ್ತಾಪಿಸುವ ಸೌಂದರ್ಯದ ರೀತಿಗೆ ಮೂರು ಕೋನಗಳಿವೆ. ಪ್ರಕೃತಿಯಲ್ಲಿ, ಸ್ತ್ರೀರೂಪದಲ್ಲಿ, ಸಾಹಿತ್ಯದಲ್ಲಿ ಹುಡುಕಿರುವ ಚೆಲುವು ಇಲ್ಲಿದೆ. ಪ್ರಕೃತಿಯಲ್ಲಿನ ಸೂರ್ಯ, ಚಂದ್ರ, ಹೂ, ಬಳ್ಳಿ, ನದಿ, ಹಳ್ಳ-ಕೊಳ್ಳ ಕಂಡು ಖುಷಿಪಟ್ಟ ಕವಿಗಳು ಅನೇಕ. ಹಾಗೇನೆ ಅವರು ಚಿತ್ರಿಸಿದ ನಿಲುವು ಸಹ ಹಲವು. ಗೋಕಾಕರು ಸಹ ಇಂಗ್ಲೆಂಡ್‌ನ ಚೆಡರ್‌ಗವಿಯಲ್ಲಿ ಕಾಣುವ ಚಿತ್ರಣ ಅದ್ಭುತವೂ ಹಾಗೂ ನೈಸರ್ಗಿಕವೂ ಆಗಿದೆ. ಮತ್ತು 'ಪ್ರಕೃತಿ ರೂಪರಾಶಿ' ಪ್ರಬಂಧದಲ್ಲಿ ಹೇಳಿದಂತೆ ಇಲ್ಲಿನ ಲಿಂಗಾಕೃತಿಯಲ್ಲಿನ ಲಿಂಗಾಂಗ ಸಾಮರಸ್ಯದ ಕಲ್ಪನೆಯು ಅನುಭಾವಿಕ ನೆಲೆಗೆ ಸಂಬಂಧಿಸಿದೆ.

ಸ್ತ್ರೀರೂಪದಲ್ಲಿ ಕಂಡ ಚೆಲುವುಗಳನ್ನು ಎರಡು ಬಗೆಯಲ್ಲಿ ನಿರ್ವಚಿಸಿಕೊಳ್ಳಲಾಗಿದೆ. ಅಂದರೆ, ಇವುಗಳನ್ನು ಸ್ತ್ರೀತ್ವದ ಎರಡು ಚೆಲುವುಗಳೆಂದರೂ ಅತಿಯಿಲ್ಲ. ಸ್ತ್ರೀಯ ರೂಪಕ್ಕೆ ಮರುಳು ಆಗದವರು ವಿರಳ. ಚೆಲುವಿನ ಸ್ತ್ರೀಗಾಗಿ ನಡೆದ ಯುದ್ಧ, ಕಟ್ಟಿದ ಗುಮ್ಮಟ, ನಿಲ್ಲಿಸಿದ ಗೋಪುರ, ಸೃಷ್ಟಿಸಿದ ಸಾಹಿತ್ಯ ಅನೇಕ. ಆದರೆ ಗೋಕಾಕರ ಜೀವನದಲ್ಲಿ ಪ್ರವೇಶಿಸಿದ ಇಬ್ಬರು ಮಹಿಳೆಯರು ಸೌಂದರ್ಯದ ಪರೀಕ್ಷೆಗೆ ಒರೆಗಲ್ಲು ಆದದ್ದು ವಿಶೇಷ. ವಿದೇಶಕ್ಕೆ ಓದಲು ತೆರಳಿದ್ದಾಗ ನಡೆದ ಘಟನೆಯೊಂದಿದೆ. ಅಲ್ಲಿನ ಮನೆಯ ಕೆಲಸಗಿತ್ತಿ (ಸೇವಕಿ) ತೋರುವ ಪ್ರೀತಿ – ಲೇಖಕರಿಗೆ ದೈಹಿಕ ಸೌಂದರ್ಯವಾಗಿ ಕಂಡಿದೆ. ಆದರೆ, ಭಾರತದ ಲಕ್ಷ್ಮಿಯ ಕಲ್ಲಿನ ಸೌಂದರ್ಯ ದೈವಿಕ ನೆಲೆಯಲ್ಲಿ ತೋರಿದೆ. ಸೌಂದರ್ಯವನ್ನು ದೇಶೀಯ ಹಾಗೂ ವಿದೇಶೀಯ ಸ್ವಭಾವದಲ್ಲಿ ವಿಭಜಿಸಿಕೊಳ್ಳುವ ಲೇಖಕರ ನಿಲುವು ಚರ್ಚಾರ್ಹ.

ಸಾಹಿತ್ಯದಲ್ಲಿ ಸೌಂದರ್ಯ ಕಾಣುವ ರೀತಿ ಮತ್ತೊಂದು ಬಗೆಯದು. ಸೌಂದರ್ಯವೇ ಸತ್ಯ, ಸತ್ಯವೇ ಸೌಂದರ್ಯ ಎಂಬುದು ಕೀಟ್ಸ್‌ನ ಹಳೆಯ ಮಾತು. ಆದರೆ ಸೌಂದರ್ಯ ಮತ್ತು ಸತ್ಯದ ಸಂಬಂಧ ಇಂದಿಗೂ ಹೊಸದೆ. ಇದನ್ನು ಇನ್ನಷ್ಟು ಗಟ್ಟಿಗೊಳಿಸಿದ ಮೂಲವೇ ಸತ್ಯಂ-ಶಿವಂ-ಸುಂದರಂ. 'ಕಾವ್ಯವಾಗಲಿ ಮಾನವ ಕುಲದ ಮಿತ್ರ' ಎನ್ನುವಲ್ಲಿ ಮಾನವೀಯ ಚೆಲುವಿದೆ. ಇಲ್ಲಿ ಘಟಿಸುವ ರಸಾನುಭವ ಆಯಾ ಸ್ಥಾಯಿಗಳ, ಸಂಚಾರಿಭಾವಗಳ ಸಂಚಲನೆಯ ಮೇಲೆ ಅವಲಂಬಿಸಿದೆ. ಬೇಂದ್ರೆಯವರ 'ನಗಿನವಿಲು' ಕಾಣಲು ಒಳಗಣ್ಣು-ಹೊರಗಣ್ಣು ಎರಡೂ ಬೇಕಾಗುತ್ತದೆ. ಕಾಂತಾಸಂಮಿತ ಗುಣದಿಂದ ಮಾನಸಿಕ ಆನಂದ ಸವಿಯುವ ಸಾಧ್ಯತೆಯೆ ಹೆಚ್ಚು. ಏಕೆಂದರೆ, ವಾಸ್ತವ ಸ್ಥಿತಿಯಲ್ಲಿ ಕಂಡ ವಸ್ತುವಿಗಿಂತ, ಸ್ವಪ್ನಸ್ಥಿತಿಯಲ್ಲಿ ಕಂಡ ವಸ್ತುವಿನ ಸ್ವಭಾವ ಭಿನ್ನವೂ-ವಿಭಿನ್ನವೂ, ಇಂದ್ರಿಯಾತೀತವೂ ಆದದ್ದು ಎಂಬುದು ಗೋಕಾಕರ ನಿಲುವು. ಈ ಕುರಿತಂತೆ ಗಮನಿಸುವ ಗೋಕಾಕರ ಚೆಲುವಿಗೆ ಬೇರೊಂದು ನೆಲೆಯೇ ಇದೆ ಅನ್ನಿಸುತ್ತದೆ. ಅಂದರೆ, ಮನುಷ್ಯ ತನ್ನ ಜೀವನದಲ್ಲಿ ತನಗೆ ಬೇಕಾದ ಆನಂದ ಪಡೆಯಲು ಭಾಗ್ಯವಿರಬೇಕು. ಸೌಖ್ಯವಿಲ್ಲದ ಬಾಳು ಅನಾಥ ಎಂಬುದಕ್ಕೆ ತಮ್ಮ ಜೀವನದಲ್ಲಿ ಘಟಿಸಿದ ಆಕ್ಸ್‌ಫರ್ಡ್ ಅನುಭವವೊಂದನ್ನು ಪ್ರಸ್ತಾಪಿಸುತ್ತಾರೆ. 'ಜೀವನದಲ್ಲಿ ಆನಂದ' ಎಂಬ ಪ್ರಬಂಧದ ಉದ್ದಕ್ಕೂ ಪರದೇಶ, ಪರಸಂಸ್ಕೃತಿ, ಪರ ಆಹಾರಗಳು ಉಂಟುಮಾಡಿದ ವಿವಿಧ ನೋವುಗಳ ಬಗ್ಗೆ ಹೇಳುತ್ತಾರೆ. ''ಇಲ್ಲಿಗೆ ಬರುವ ಸಾಹಸ ಮಾಡಿದ ಮೂರ್ಖತನಕ್ಕಾಗಿ ನನ್ನನ್ನೇ ನಾನು ನೂರು ಸಲ ಹಳಿದುಕೊಂಡೆ'' ಎನ್ನುವಲ್ಲಿ ಆ ನೋವು ವ್ಯಕ್ತವಾಗಿದೆ. ಇದಕ್ಕೆ ಕಾರಣವೂ ಇದೆ. ಗೋಕಾಕರ ಒಳಗಿನ ಸಾಂಪ್ರದಾಯಿಕ ಗುಣ, ದೇಸೀಯ ನಿಲುವು ಮತ್ತು ಧಾರ್ಮಿಕ ಒತ್ತಡಗಳು ಇವರನ್ನು ವಿದೇಶದಲ್ಲಿ ಇನ್ನಷ್ಟು ಅನಾಥವಾಗಿಸಿವೆ. ಎಡಿನ್‌ಬರೋ ಆಸ್ಪತ್ರೆಯಲ್ಲಿ ರೋಗಿಯಾಗಿ ಸೇರಿದ್ದು, ಅಪೆಂಡಿಕ್ಸ್‌ಗೆ ಆಪರೇಷನ್ ಆದದ್ದು, ಪುನರ್ಜನ್ಮದ ಅನುಭವ ಘಟಿಸಿದ್ದು ಕಾಕತಾಳೀಯ. ಆದರೆ, ಅಲ್ಲಿನ ಆಸ್ಪತ್ರೆಯ ದಾದಿಯರು ನೀಡಿದ ಸೇವೆ, ಕರುಣೆ ಮತ್ತು ಅನುಕಂಪ ಯಾವ ತಾಯ್ತನಕ್ಕೂ ಕಡಿಮೆ ಇರಲಾರದು.

**'ಜೀವನ ಪಾಠಗಳು' (೧೯೪೯)**

ಪ್ರಬಂಧಗಳನ್ನು ಪತ್ರರೂಪದಲ್ಲಿ ಪ್ರಯೋಗಿಸಿ ಬರೆದ ಗೋಕಾಕರ ವಿಶಿಷ್ಟ ಸಂಕಲನ 'ಜೀವನ ಪಾಠಗಳು'. 'ಜೀವನ' ಪತ್ರಿಕೆಗೆ ಬರೆದ ಹದಿನೆಂಟು ಓಲೆಗಳು ಇಲ್ಲಿವೆ. ಆಗ ದೇಶ ಬಿಡುಗಡೆಯಾದ ಸಂದರ್ಭ. ಭಾರತೀಯ ಕುಟುಂಬಗಳಲ್ಲಿ ಬೇರೊಂದು ಚಲನೆ ಆರಂಭವಾದ ಸ್ಥಿತಿ. ಇವೆಲ್ಲವುಗಳ ಹಿನ್ನೆಲೆಯಲ್ಲಿ ಇಲ್ಲಿನ ಪ್ರಬಂಧಗಳಿಗೆ ವಿಭಿನ್ನ ಓದು ಬೇಕು. ವ್ಯಷ್ಟಿಯಿಂದ ಪ್ರಾರಂಭಗೊಂಡು ಸಮಷ್ಟಿಯ ಕಡೆ ತಿರುಗುವ ಅನೇಕ ಪ್ರಬಂಧಗಳು ಇಲ್ಲಿವೆ. ಅದರಲ್ಲೂ ಭಾರತೀಯ ಕುಟುಂಬಗಳಲ್ಲಿನ ದಾಂಪತ್ಯದ ಚಿತ್ರಣಗಳನ್ನು, ಸಾಂಪ್ರದಾಯಿಕ ಮನಃಸ್ಥಿತಿಯ ಅವಿಭಕ್ತ ಪ್ರಜ್ಞೆಯನ್ನು ತಿಳಿಯ



ಬಯಸುವವರಿಗೆ ಇಲ್ಲಿನ ಪ್ರಬಂಧಗಳು ಅಪರೂಪದ ಆಕರಗಳೇ ಆಗಿವೆ. ದಾಂಪತ್ಯಕ್ಕೆ ಸಂಬಂಧಿಸಿದಂತೆ ಚಿತ್ರಣ ಗೊಂಡಿರುವ ಇಲ್ಲಿನ 'ವನಮಾಲಿ' ಲೇಖಕರ ಕಾಲ್ಪನಿಕ ಪಾತ್ರ ಮತ್ತು ಮಿತ್ರ. ಇಂಥ ವನಮಾಲಿಯ ಜೊತೆಗಿರುವ ಲಲಿತೆಯು ಸಹ ವಿಶೇಷ ಪಾತ್ರ. ಊಟ ಮುಗಿಸಿ ಕುಳಿತ ವನಮಾಲಿಗೆ ವೀಳ್ಯೆ ಕೊಟ್ಟ ಲಲಿತೆ ನಿಧಾನ ಮಾತಿಗೆಳೆಯುತ್ತಾಳೆ. ಥೇಟ್ ಮುದ್ದಣ-ಮನನೋರಮೆಯರ ಸಲ್ಲಾಪದ ತರಹ. ಆಗ ವನಮಾಲಿಯ ಪತ್ರದ ಕಟ್ಟುಗಳಿಂದ ಬಿಚ್ಚಿಕೊಳ್ಳುವ ಬದುಕಿನ, ವಧು-ವರರ, ದಾಂಪತ್ಯದ ಚಿತ್ರಣಗಳು ಹತ್ತು-ಹಲವು. ಅದೇ ಆಗ ಮದುವೆಯಾದ ಪತಿ ದೂರದ ಊರಲ್ಲಿರುವ ಪತ್ನಿಗೆ ಬರೆದ ಕಾಲ್ಪನಿಕ ಪತ್ರಗಳಿವು. ಇನ್ನೇನು ತನ್ನೊಂದಿಗೆ ನಡೆಯಲು ಬರುವ ಆಕೆಯ ಮನಃಸ್ಥಿತಿ ಹದಗೊಳಿಸುವ ಪ್ರಯತ್ನವಿದು. ಮೇಲ್ನೋಟಕ್ಕೆ ಈ ಪತ್ರಗಳು, ಪಾತ್ರಗಳು ಕಾಲ್ಪನಿಕವೆಂದರೂ ಆಳದಲ್ಲಿ ವೈಯಕ್ತಿಕವೂ ಆಗಿವೆ. ವನಮಾಲಿಯ ಮೂಲಕ ಮಾಡಿದ ಬೋಧನೆಗಳು ಲೇಖಕರವೇ ಅನ್ನಿಸುತ್ತದೆ. ಗೋಕಾಕರಿಗೆ ಮೊದಲಗಿತ್ತಿಯಾಗಿ ಬರಲಿರುವ ಇಲ್ಲಿನ ಹೆಣ್ಣು ಆಕ್ಸ್‌ಫರ್ಡ್‌ನ ಕೆಲಸಗಿತ್ತಿ ತರಹ ಅಲ್ಲ. ಲೇಖಕರಿಗೆ ಇವಳಲ್ಲಿ ಅಪಾರ ಪ್ರೀತಿಯಿದೆ, ಪ್ರೇಮವಿದೆ. ಒಂದು ರೀತಿಯಲ್ಲಿ ಇವಳು ಕವಿ ನರಸಿಂಹಸ್ವಾಮಿ ಅವರ ನವಿಲೂರು ಚೆಲುವೆ ತರಹ.

'ಮೊದಲಗಿತ್ತಿ' ಶೀರ್ಷಿಕೆ ಅಡಿಯಲ್ಲಿ ಶುರುವಾಗುವ ಪ್ರಬಂಧದ ವಿವರಗಳು ಈ ದೃಷ್ಟಿಯಿಂದ ಗಮನೀಯ. ''ಹೆಣ್ಣು ದುಡಿಮೆಯ ವಸ್ತುವಲ್ಲ, ಭೋಗದ ಬಳಕೆಯಲ್ಲ, ಹಾಗೇನೆ ಪತಿ ದೇವರಲ್ಲ. ಪತ್ನಿ ಚರಣದಾಸಿಯಲ್ಲ. ಅವಳು ಸಂಗಾತಿ. ಸಹಧರ್ಮಿಣಿ. ಗಂಡು-ಹೆಣ್ಣು ಸಮನಾಗಿ ಇರುವುದೇ ಸಂಸಾರ ಧರ್ಮ.'' ಹೀಗೆ ಸಾಗುವ ವನಮಾಲಿಯ ಬೋಧನೆಗಳಲ್ಲಿ ಹೆಣ್ಣು-ಗಂಡು, ಬದುಕು-ಬಾಳುವೆ, ಕೂಡು-ಕುಟುಂಬಗಳ ವಿವರಗಳಿವೆ. ಹೆಣ್ಣು-ಗಂಡು ಕೂಡಿರುವ ಅರ್ಧನಾರೀಶ್ವರ ಕಲ್ಪನೆಯ ಅನುಭಾವಿಕತೆ ವನಮಾಲಿ ಪ್ರಜ್ಞೆಯ ಕೇಂದ್ರವಾಗಿದೆ.

ಗಂಡು-ಹೆಣ್ಣು – ಪತಿ-ಪತ್ನಿಯಾಗುವ, ಪತಿ-ಪತ್ನಿ ದೇಹ-ಜೀವವಾಗುವ, ದೇಹ-ಜೀವ ಆತ್ಮ-ಪರಮಾತ್ಮವಾಗುವ ಬಗೆಯಲ್ಲಿ ರೂಪುಗೊಳ್ಳುವ ಆದರ್ಶದಾಂಪತ್ಯ ಇಲ್ಲಿಯದು. ಕುಟುಂಬದಲ್ಲಿ ಕಾಮಕ್ಕಿಂತ ಕಾಂತಾಸಂಮಿತ ಗುಣ ಪ್ರಧಾನವಾಗಿರಬೇಕೆಂಬುದೇ ಗೋಕಾಕರ ಇಲ್ಲಿನ ದಾಂಪತ್ಯಧರ್ಮ. ಎಲ್ಲರಿಗೂ ಗೊತ್ತಿರುವಂತೆ ಗೋಕಾಕರಲ್ಲಿ ಅಧ್ಯಾತ್ಮ ಅರಿವು, ಆಚಾರಗಳ ಬಗ್ಗೆ ಅಪಾರ ನಂಬಿಕೆಯಿತ್ತು. ಜೀವ-ದೇವ-ಜಗತ್ತು ಕುರಿತಂತೆ ಅಗಾಧ ಭಕ್ತಿಯಿತ್ತು. ಜೀವದಲ್ಲಿ ಯೋಗ ಸಾಕ್ಷಾತ್ಕರಿಸುವ ಹಂಬಲವಿತ್ತು. ಹೀಗಾಗಿ ಪ್ರತಿಯೊಬ್ಬರ ಜೀವನದ ಪರಿಪೂರ್ಣತೆಗೆ ಕರ್ಮಯೋಗ, ಜ್ಞಾನಯೋಗ, ಭಕ್ತಿಯೋಗ, ಪ್ರೇಮಯೋಗ, ಕಾವ್ಯಯೋಗ ಬೇಕು ಅನ್ನುತ್ತಾರೆ. ಈ ಕಲ್ಪನೆಗೆ ಶ್ರೀ ಅರವಿಂದರ ಆಧ್ಯಾತ್ಮಿಕ ಮನಸ್ಸುಗಳ ಪ್ರೇರಣೆಯ ಹಾಜರಿ ಖಂಡಿತ ಇರಬೇಕು ಅನ್ನಿಸುತ್ತದೆ. ಒಂದುವೇಳೆ ಇವು ಇರದಿದ್ದರೆ, ಅಂಥವರ ಬದುಕಿನ 'ಗತಿ'ಯೇನು ಎಂಬ ಆತಂಕವು ಎದುರಾಗುತ್ತದೆ. ಹಾಗಾಗಿ ಯಾವ 'ಯೋಗ' ಇಲ್ಲದಿದ್ದರೂ 'ಬದುಕು' ಬದುಕಬಲ್ಲದು ಎಂಬ ಬಸವಣ್ಣನವರ ನಿಲುವು ವನಮಾಲಿಯಲ್ಲಿ ಬರಬೇಕಿತ್ತು ಎಂದೆನಿಸುತ್ತದೆ.

ಒಮ್ಮೆ, ''ದೇವರನ್ನು ಕಂಡಿರಾ'' ಅಂತ ಹೆಂಡತಿ ಕೇಳಿದಾಗ, ದೈವಗಳ ಪರಂಪರೆಯನ್ನೆ ಲೇಖಕರು ಪ್ರಸ್ತಾಪಿಸುತ್ತಾರೆ. ಮೂರ್ತ-ಅಮೂರ್ತ, ಪೂಜೆ-ಪುನಸ್ಕಾರ ಕುರಿತಂತೆ ಒಂದು ಭಾಷಣವೇ ನಡೆದುಬಿಡುತ್ತದೆ. ಆಗ ಶಿಷ್ಟ ದೈವಗಳಲ್ಲಿ ಕಾಣುವ ಭಕ್ತಿಗೌರವಗಳು ಹಳ್ಳಿದೈವಗಳಲ್ಲಿ ಕಾಣದೆ ಇರುವುದು ವನಮಾಲಿಯ ಮಿತಿಯಾಗಿಯೂ ತೋರುತ್ತದೆ.

ವನಮಾಲಿಯ ಇನ್ನೊಂದು ಪತ್ರದಲ್ಲಿ ಮಾನವನ ಕರ್ತವ್ಯಗಳ ಬಗ್ಗೆಯೂ ಪ್ರಸ್ತಾಪವಿದೆ. ಮನುಷ್ಯ ತನ್ನ ಜೀವನಯಾತ್ರೆಯಲ್ಲಿ ನಿರ್ವಹಿಸಬೇಕಾದ ಬೌದ್ಧಿಕ, ತಾತ್ವಿಕ ಮತ್ತು ವಾಸ್ತವಿಕ ನೆಲೆಯಲ್ಲಿನ ಕರ್ತವ್ಯಗಳು ತುಂಬ ಅಗತ್ಯವಾಗಿವೆ. ಇಲ್ಲವಾದರೆ, ಸುಖ-ದುಃಖ – ದ್ವಂದ್ವದ ಜೀವನಕ್ಕೆ ಸಂತೃಪ್ತಿ ಸಿಗುವುದಿಲ್ಲ. ಪರಿಪೂರ್ಣ ಜೀವನಕ್ಕಾಗಿ ಮತ್ತು ಅಧ್ಯಾತ್ಮದ ದಾರಿಗಾಗಿ ಮನುಷ್ಯ ಮಾನಸಿಕವಾಗಿ ಸಿದ್ಧತೆ ಮಾಡಿಕೊಳ್ಳಬೇಕು ಎನ್ನುವಲ್ಲಿ ಮನುಷ್ಯ ಉದ್ಧಾರದ ಕಲ್ಪನೆಗಳನ್ನು ಹೇಳಿದ್ದಾರೆ. ಅವು ಏಕಕಾಲಕ್ಕೆ ಆತ್ಮೋದ್ಧಾರವನ್ನು, ಸಮಾಜೋದ್ಧಾರವನ್ನು ಬೋಧಿಸುತ್ತವೆ. ಒಟ್ಟಾರೆ, ಇಲ್ಲಿನ ಹದಿನೆಂಟು ಪ್ರಬಂಧಗಳು ಅತ್ಯುತ್ತಮ ಜೀವನವನ್ನು ಸಿದ್ಧಪಡಿಸುವಲ್ಲಿ ಬೋಧಿಸುವ, ನಿವೇದಿಸುವ, ಪ್ರೇರೇಪಿಸುವ, ಪರಿವರ್ತಿಸುವ, ಸ್ಮರಿಸುವ ಕೆಲಸವನ್ನು ನಿರ್ವಹಿಸಿವೆ. ಗೋಕಾಕರ ಪ್ರಬಂಧದ ಹೆಚ್ಚುಗಾರಿಕೆಯೂ ಸಹ ಇದೇ ಆಗಿದೆ. ಲಲಿತಪ್ರಬಂಧಗಳು ಕೇವಲ ಹರಟೆಗೆ, ಹಾಸ್ಯಕ್ಕೆ ಮಾತ್ರ ಸೀಮಿತವಾಗದೆ ಅವು ಸಹ ಬದುಕಿನ ಗಂಭೀರತೆಯನ್ನು ಚಿತ್ರಿಸಬಲ್ಲವು ಎಂಬುದಕ್ಕೆ ಇಲ್ಲಿನ ಕೆಲ ಪ್ರಬಂಧಗಳು ಉದಾಹರಣೆಯಾಗಿವೆ.

**ವಿ. ಕೃ. ಗೋಕಾಕರ ಪ್ರಬಂಧ ಸಾಹಿತ್ಯದಲ್ಲಿ ಮೂರು ಮಾದರಿಗಳಿವೆ. ಸೃಜನ ಪ್ರಬಂಧ, ವಿಮರ್ಶನ ಪ್ರಬಂಧ, ಸಂಶೋಧನ ಪ್ರಬಂಧಗಳೆಂದು ಇವುಗಳನ್ನು ವಿಭಜಿಸಿಕೊಳ್ಳಬಹುದು. ಹಾಗೆ ನೋಡಿದರೆ ಇವರ ಸಂಶೋಧನ ಪ್ರಬಂಧಗಳು ತುಂಬ ಕಡಿಮೆ. ಇನ್ನುಳಿದಂತೆ, ಸೃಜನ ಪ್ರಬಂಧಗಳಲ್ಲಿ 'ಚೆಲುವಿನ ನಿಲುವು', 'ಜೀವನ ಪಾಠಗಳು' ಹಾಗೂ 'ಇಂದಿನ ಕರ್ನಾಟಕ' ಎಂಬ ಮೂರು ಸಂಕಲನಗಳು ಮಹತ್ವದ ವಸ್ತು ವಿಷಯದ ಜೊತೆ ಲಲಿತ ಗುಣವನ್ನು ಹೊಂದಿವೆ.**

### ಇಂದಿನ ಕರ್ನಾಟಕ

'ಕ್ರಾಂತಿಪ್ರಿಯ' ಹೆಸರಿನಲ್ಲಿ ಬರೆದ ಗೋಕಾಕರ ಕೆಲ ಪ್ರಮುಖ ಪ್ರಬಂಧಗಳು 'ಇಂದಿನ ಕರ್ನಾಟಕ' ಸಂಕಲನದಲ್ಲಿ ಸಮಾವೇಶಗೊಂಡಿವೆ. ಮೂಲತಃ ಇವು 'ಜೀವನ' ಪತ್ರಿಕೆಗೆ ಬರೆದ ಪ್ರಬಂಧಗಳು. ಅಂಕಣ ಬರಹದ ರೂಪದಲ್ಲಿವೆ. 'ಇಂದಿನ ಕರ್ನಾಟಕ'ವೆಂಬುದು ಇಂದಿನದಲ್ಲ, ಅಂದಿನದು. ಅಂದಿನ ಹಲವು ಹಳ್ಳಿಗಳನ್ನು, ಕೋಟೆ-ಕೊತ್ತಲುಗಳನ್ನು ಪರಿಚಯಿಸುವಲ್ಲಿ ಇಲ್ಲಿನ ಪ್ರಬಂಧಗಳು ರೂಪುಪಡೆದಿವೆ. ಅಂದರೆ, ಅಂದಿನ ಹಳ್ಳಿಯ ಚಾರಿತ್ರಿಕ, ಭೌಗೋಳಿಕ, ಸಾಮಾಜಿಕ, ಆಚರಣಾತ್ಮಕ ಮಹತ್ವ ಸಾರುವ ಚಿತ್ರಣಗಳು ಇಲ್ಲಿವೆ. ಮುಖ್ಯವಾಗಿ ಹುಲಗೂರು, ಚಡಚಣ, ಹಲಸಂಗಿ, ಮಂಗಳೂರು, ಮಡಿಕೇರಿ, ಮೈಸೂರು ಮುಂತಾದ ಹಳ್ಳಿ-ನಗರಗಳ ಉಗಮ-ವಿಕಾಸ-ಸ್ವರೂಪ ಕುರಿತಂತೆ ವಿವರಿಸಲಾಗಿದೆ. ಇಲ್ಲಿ ಹೇಳಲಾದ ಪ್ರತಿಯೊಂದು ಊರುಗಳ ಹಿಂದೆ ಕವಿಮನಸ್ಸು ಪ್ರಧಾನವಾಗಿ ಕೆಲಸ ಮಾಡಿದೆ. ಶರೀಫರ ಹುಲಗೂರು, ಸಿಂಪಿಯವರ ಚಡಚಣ, ಮಧುರಚೆನ್ನರ ಹಲಸಂಗಿ, ಕಾರಂತರ ಮಂಗಳೂರು, ದಬಾಕು ಅವರ ಮಡಿಕೇರಿ, ವಿಹಾರಿ ಅವರ ಮೈಸೂರುಗಳು ಪರಿಚಯವಾದದ್ದು ಎದ್ದುಕಾಣುತ್ತದೆ. ಈ ಪ್ರಮುಖ ಕವಿಗಳ ಒಡನಾಟದೊಂದಿಗೆ ಚಿತ್ರಣಗೊಂಡಿರುವ ಊರುಗಳು ಗೋಕಾಕರಲ್ಲಿ ಅಕ್ಷರ ರೂಪಪಡೆದಿವೆ. ಇನ್ನೊಂದು ವಿಶೇಷವೆಂದರೆ, ಗೋಕಾಕರಲ್ಲಿನ ಸಂಶೋಧನ ಪ್ರಜ್ಞೆಯ ಪ್ರತಿಭೆ ಇಲ್ಲಿನ ಪ್ರಬಂಧಗಳಲ್ಲಿ ಪ್ರಧಾನಪಾತ್ರವಹಿಸಿದೆ. ಹೀಗಾಗಿ, ಜೀವನಪಾಠಗಳು ಮತ್ತು ಚೆಲುವಿನ ನಿಲುವು ಸಂಕಲನದ ಪ್ರಬಂಧಗಳು ಸೃಜನಾತ್ಮಕವಾಗಿದ್ದರೆ, 'ಇಂದಿನ ಕರ್ನಾಟಕ'ದಲ್ಲಿನ ಪ್ರಬಂಧಗಳು ಸಂಶೋಧನಾತ್ಮಕವಾಗಿವೆ.

'ಹುಲುಗೂರು' ಅಂದ ತಕ್ಷಣವೇ ಶರೀಫ್ ಸಾಹೇಬರ ತತ್ವಪದದೊಳಗಿನ 'ಇದು ಹುಲಗೂರು ಸಂತಿ' ಸಾಲು ನೆನಪಾಗುವುದು ಸಹಜ. ಸ್ನೇಹಕ್ಕೆ-ಸಾಮರಸ್ಯಕ್ಕೆ, ಜಾತ್ಯತೀತ ನಿಲುವಿಗೆ ಶರೀಫರ 'ಸಂತಿ' ಅಂದು ಸಾಕ್ಷಿಯಾಗಿತ್ತು. ಇದು ಹುಲುಗೂರು ಸಂತಿ ಮಾತ್ರವಲ್ಲ ಅಂದಿನ ಕರ್ನಾಟಕದ ಬಹಳಷ್ಟು ಹಳ್ಳಿಗಳ 'ಹದುಳ' ಇದೇ ಆಗಿತ್ತು. ಆದರೆ, ಆ ಹಳ್ಳಿ, ಅಂತಹ ಹಳ್ಳಿಗಳು ಇಂದು ಏನಾಗಿವೆ? ಪ್ರೀತಿ-ವಿಶ್ವಾಸದ ಕೊರತೆಯಲ್ಲಿ ಅವು ಯಾಕೆ ನರಳುತ್ತಿವೆ? ಇಂತಹ ಅನೇಕ ಪ್ರಶ್ನೆಗಳಿಗೆ ಪ್ರಬಂಧದ ಮರು ಓದು ಉತ್ತರ ನೀಡಬಲ್ಲದು ಅನ್ನಿಸುತ್ತದೆ.

ಗ್ರಾಮ ಬದುಕಿನ ಚಿತ್ರಣಗಳಲ್ಲಿ ರೂಪು ಪಡೆದ ಇಲ್ಲಿನ ಹಳ್ಳಿಗಳು ನಿಸರ್ಗದತ್ತ ಸೌಂದರ್ಯ ಪಡೆದಿವೆ. ಸಾಂಸ್ಕೃತಿಕ ವಾತಾವರಣದ ಆವರಣ ಹೊಂದಿವೆ. ಅಂಥವುಗಳನ್ನು ಕಳೆದುಕೊಳ್ಳುತ್ತಿದ್ದೇವೆ ಎನ್ನುವ ಮನಸ್ಸಿಗೆ ಆಧುನಿಕ ಯಂತ್ರ ಜಗತ್ತು ಶಾಪವೆನಿಸಿದೆ. ಇದರ ಅನುಭವ ಗೋಕಾಕರಿಗೂ ಆಗಿರಬಹುದು. ಒಟ್ಟಾರೆ, ಗೋಕಾಕರ ಇಲ್ಲಿನ ಮೂರು ಸಂಕಲನಗಳು ಆಪ್ತತೆಯಿಂದ ಓದುಗರಿಗೆ ಹತ್ತಿರವಾಗುತ್ತವೆ. ಅಂದಿನ ಕಾಲದ ಮನಃಸ್ಥಿತಿಗಳನ್ನು ಬಿತ್ತರಿಸುವಲ್ಲಿ ಪ್ರಯತ್ನಿಸುತ್ತವೆ.

**ರಂಗರಾಜ ವನದುರ್ಗ**
ಕನ್ನಡ ಪ್ರಾಧ್ಯಾಪಕರು, ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ - ೫೮೦ ೦೦೩

**ಮ**ಳೆ ನಿಂತಿತ್ತು. ಗುಂಡುಗಳ ಶಬ್ದ ಕೇಳಿಬರುತ್ತಿರಲಿಲ್ಲ.

ನಾನಿನ್ನೂ ನನ್ನ ದೇಹದಲ್ಲೇ ಇದ್ದೇನೆಯೇ ಎಂದು ಅನುಮಾನವಾಯಿತು.

ಗಡಬಡಿಸಿ ಎದ್ದು ಕುಳಿತೆ. ಸುತ್ತಲೂ ಕಣ್ಣಾಡಿಸಿದೆ.

ಅವೇ ಮಾಸಲು ಬಿಳೀ ಗೋಡೆಗಳು. ಹೊಸದು ಸಿಗಲಿಲ್ಲವೆಂದು, ಗೋಡೆ ಬರಿದಾಗಬಾರದೆಂದು ಅದೆಷ್ಟೋ ದಿನಗಳಿಂದ ಹಾಗೇ ಉಳಿಸಿದ್ದ ಅದೇ ಕ್ಯಾಲೆಂಡರ್, 'ಸಿವಿಲ್ ವಾರ್ ಎರಪ್ಟ್ಸ್' ಎಂಬ ಅದೇ ಕಡುಗಪ್ಪು ದಪ್ಪಕ್ಷರಗಳನ್ನು ಒಂಬತ್ತು ತಿಂಗಳಿಂದಲೂ ಪ್ರತಿ ಬೆಳಿಗ್ಗೆಯೂ ಹಠದಿಂದ ಕಣ್ಣಿಗೆ ತುರುಕುತ್ತಾ ಮೂಲೆಯಲ್ಲಿ ಮಲಗಿದ್ದ ಅದೇ ನ್ಯೂಸ್‌ಪೇಪರ್, ಆರು ತಿಂಗಳಿಂದ ನನ್ನ ಹೆಂಡತಿ ಮಕ್ಕಳನ್ನು ಮರೆತುಬಿಟ್ಟಿದ್ದ ಅದೇ ಮಂಚ ಹಾಸಿಗೆಗಳು, ಹಸಿರಿನ ಮೇಲೆ ಧಾರಾಳವಾಗಿ ಎಲ್ಲೆಂದರಲ್ಲಿ ಚೆಲ್ಲಿದ್ದ ಬೊಟ್ಟಿನಿಂದ ಹಿಡಿದು ರೂಪಾಯಿ ಅಗಲದ ಕೆಂಪುವೃತ್ತಗಳ ಅದೇ ಬೆಡ್ ಕವರ್... ಎಲ್ಲವೂ ಅದೇ.

ನಾನು ನನ್ನ ದೇಹದೊಳಗೇ ಇದ್ದೆ. ನನ್ನನ್ನು ಹೊತ್ತ ನನ್ನ ದೇಹ ನನ್ನ ಮನೆಯೊಳಗೇ ಇತ್ತು.

ಮನೆಯೆದ್ದು ಶಾಂತಿಯನರಸಿ ಬೇರೊಂದು ಊರಿಗೆ ಓಡಿಬಿಟ್ಟಿದೆಯೇ ?

ಧಡಕ್ಕನೆದ್ದು ಕಿಟಕಿಯ ಪರದೆ ಸರಿಸಿದೆ.

ಒದ್ದೆ ಮೈಯನ್ನು ಒದರಿಕೊಳ್ಳುತ್ತಾ ಹಿತ್ತಲಲ್ಲಿ ನಿಂತಿದ್ದ ಅದೇ ಜೋಡಿ ತೆಂಗಿನ ಮರಗಳು, ಅದರಾಚೆ ಬಾಂಬ್ ದಾಳಿಗೆ ತತ್ತರಿಸಿ ದಯನೀಯವಾಗಿ ಮುದುರಿಕೊಂಡು ಬಿದ್ದಿದ್ದ ಅದೇ ಹೆಣ್ಣುಮಕ್ಕಳ ಶಾಲೆ...

**ಕರವಸ್ತ್ರದಿಂದ ಮುಖ ಒರೆಸಿಕೊಂಡು ಒಮ್ಮೆ ಸುತ್ತಲೂ ಕಣ್ಣಾಡಿಸಿದೆ. ಎಡಕ್ಕೆ ನನ್ನ ಗೆಳೆಯನ ಹೆಂಡತಿ ಕುಳಿತಿದ್ದಳು. ಅವಳ ಪಕ್ಕದಲ್ಲಿದ್ದದ್ದು ನನ್ನ ಗೆಳೆಯನಲ್ಲ, ಬೇರೆ ಯಾರೋ ಗಂಡಸು. ಭಾರಿ ಮೀಸೆ ಬಿಟ್ಟುಕೊಂಡು ಹಳೆಯ ಸಿನಿಮಾಗಳ ರೌಡಿಯಂತಿದ್ದ. "ಅವರೆಲ್ಲಿ?" ಎಂದು ಆಕೆಯನ್ನು ಪ್ರಶ್ನಿಸಿದರೆ ಆಯಮ್ಮ ಮುಖ ಚಿಕ್ಕದು ಮಾಡಿದಳು. "ಅವರನ್ನ ಒಳಗೆ ಬಿಡ್ಲಿಲ್ಲ ಇವರೇ. ನಾನು ಎಷ್ಟೇ ಬೇಡ ಅಂದ್ರೂ ನನ್ನನ್ನ ಮಾತ್ರ ಎಳಕೊಂಡು ಬಂದು ಇಲ್ಲಿ ಕೂರಿಸಿದ್ರು. ನಾನಂತೂ ಹೆದರಿಹೋಗಿದ್ದೆ. ಸದ್ಯ, ನೀವು ಬಂದದ್ದು ಒಳ್ಳೇದಾಯ್ತು. ನನ್ ಜೀವ ಹಿಂದಕ್ಕೆ ಬಂತು" ಎನ್ನುತ್ತಾ ನನ್ನ ಪಕ್ಕ ಸರಿದಳು. ರೌಡಿ ನಮ್ಮಿಬ್ಬರನ್ನೂ ದುರುಗುಟ್ಟಿ ನೋಡಿದ. ಕಸಿವಿಸಿಯಾಗಿ ಬಲಕ್ಕೆ ಹೊರಳಿದರೆ ಅಲ್ಲಿ ಗೌರ್ಮೆಂಟಣ್ಣನ ಹೆಂಡತಿಯನ್ನು ಕಂಡು ಅವಾಕ್ಕಾದೆ.** ■

# ಮುಖಾಮುಖಿ

ಊರು ಇದ್ದಲ್ಲಿಯೇ ಇತ್ತು, ನನ್ನ ಮನೆಯೂ, ನನ್ನ ದೇಹವೂ, ನಾನೂ ಸಹ.

ಹೊಚ್ಚಹೊಸ ಅನುಭವವೆಂಬಂತೆ ಮನೆಯೊಳಗೆ ಓಡಾಡಿದೆ. ಅಡಿಗೆಮನೆಯಲ್ಲಿ ಟ್ಯೂಬ್‌ಲೈಟ್ ಉರಿಯುತ್ತಿತ್ತು. ಒಂಬತ್ತು ತಿಂಗಳಿಂದ ಕಾಣದಿದ್ದ ನೋಟ. ಅದನ್ನೇ ನೋಡುತ್ತಾ ನಿಂತೆ. ಸರಿಯಾಗಿ ಒಂಬತ್ತು ತಿಂಗಳ ಹಿಂದೆ ರಾತ್ರಿಯ ಊಟವನ್ನು ಲಲಿತೆ ತಟ್ಟೆಗೆ ಬಡಿಸುತ್ತಿದ್ದಾಗಲೇ ಬೀದಿಯ ಅಂಚಿನಲ್ಲಿದ್ದ ಟ್ರಾನ್ಸ್‌ಫಾರ್ಮರ್ ಬಾಂಬ್ ದಾಳಿಗೆ ಸಿಕ್ಕಿ ಸಿಡಿದು ಇಡೀ ಪ್ರದೇಶ ಕತ್ತಲುಗಟ್ಟಿದ ಪರಿಗೆ ಬೆಚ್ಚಿ ನೆನಪು ಕಳೆದುಕೊಂಡು ಹಾಗೇ ಬಿಟ್ಟಿದ್ದ ಸ್ವಿಚ್ ನನ್ನನ್ನು ಅಮಾಯಕವಾಗಿ ನೋಡಿತು. ಟ್ಯೂಬ್‌ಲೈಟಿಗೆ ಅಂಟಿದ ಧೂಳನ್ನು ತೆಗೆಯಬೇಕು ಅಂದುಕೊಳ್ಳುತ್ತಿರುವಾಗಲೇ ಡ್ರಾಯಿಂಗ್ ರೂಂನಲ್ಲಿ ಫೋನ್ ಹೊಡೆದುಕೊಂಡಿತು. ಇದೇನು ಕನಸೇ ! ಸರಿಸುಮಾರು ಮರೆತೇಹೋಗಿದ್ದ ದೂರವಾಣಿಯ ಉಲಿತ. ಬಾಣದಂತೆ ಅತ್ತ ಓಡಿದೆ.

"ಕೊನೆಗೂ ನೀವೇ ಗೆದ್ದಿರಿ !" ಲಲಿತೆಯ ದನಿಯಲ್ಲಿ ಸಮಾಧಾನ, ಮೆಚ್ಚುಗೆ, ಆತುರವಿತ್ತು.

ನನಗೆ ಪ್ರತಿಕ್ರಿಯಿಸಲಾಗದಷ್ಟು ಅಚ್ಚರಿ, ಉದ್ವೇಗ. ಅವಳೇ ಮುಂದುವರಿಸಿದಳು : "ಕೋಳಿ ಕೂಗುವುದಕ್ಕೂ ಮೊದಲೇ ಸುದ್ದಿ ಬಂತು, ಅಂತರ್ಯುದ್ಧ ನಿಂತಿದೆಯಂತೆ. ಎಲ್ಲಾ ಚಾನಲ್‌ಗಳಲ್ಲೂ ಅದೇ ಸುದ್ದಿ. ನನಗಂತೂ ಮೊದಮೊದಲು ನಂಬಿಕೆಯೇ ಆಗಲಿಲ್ಲ. ಅದಕ್ಕೇ ನಿಮಗೆ ಫೋನ್ ಮಾಡಿದೆ. ಫೋನ್ ಸರಿಯಾಗಿದೆ ಅಂದರೆ ಅಲ್ಲೀಗ ಎಲ್ಲವೂ ಮಾಮೂಲಂತಾಗತೊಡಗಿದೆ ಅಂತ ಅರ್ಥ ಮಾಡಿಕೊಂಡೆ. ಅಂತೂ ನಿಮ್ಮ ನಂಬಿಕೆಯೇ ಗೆದ್ದಿತು ಬಿಡಿ. ಯುದ್ಧ ನಿಂತೇ ನಿಲ್ಲುತ್ತೆ ಅಂತ ವಾದಿಸಿ ಅಲ್ಲೇ ನಿಂತುಬಿಟ್ಟಿರಲ್ಲ!"

"........."

"ಯುದ್ಧ ನಿಲ್ಲುವವರೆಗೆ ದೂರದಲ್ಲಿ ನೆಮ್ಮದಿಯಾಗಿರು ಅಂತ ನನ್ನನ್ನ ತವರಿಗೆ ಕಳಿಸಿಬಿಟ್ಟಿರಲ್ಲ. ನಾ ಎಲ್ಲಿ ನೆಮ್ಮದಿಯಾಗಿದ್ದೆ? ಪ್ರತಿ ಗಳಿಗೆಯೂ ನಿಮ್ಮದೇ ಚಿಂತೆ. ಆರು ತಿಂಗಳಿಂದ ನಿಮ್ಮ ಫೋನಿಲ್ಲ, ಪತ್ರವಿಲ್ಲ, ಪತ್ರಿಕೆಗಳಲ್ಲೂ ನಿಮ್ಮ ಸುದ್ದಿಯಿಲ್ಲ"

"........."

"ಇಂದಿನಿಂದಲೇ ಮೈಸೂರಿಗೆ ರೈಲು ಬಸ್ಸುಗಳ ಓಡಾಟ ಶುರು ಅಂತ ನ್ಯೂಸ್‌ನಲ್ಲಿ ಹೇಳಿದ್ರು. ಎಂಟು ಗಂಟೆಗೆ ಮೊದಲ ಬಸ್ಸು ಹೊರಡುತ್ತಂತೆ. ನಾನೂ ಪುಟ್ಟಿ ಇಬ್ಬರೂ ಹೊರಟು ಬರ್ತಾಇದೀವಿ. ಮಧ್ಯಾಹ್ನ ಒಂದಕ್ಕೆಲ್ಲಾ ಅಲ್ಲಿರ್ತೀವಿ. ಬಸ್ ಸ್ಟ್ಯಾಂಡಿಗೆ ಬಂದುಬಿಡಿ. ಎಷ್ಟೊತ್ತಿಗೆ ನಿಮ್ಮನ್ನ ಈ ಕಣ್ಣಿಂದ ನೋಡ್ತೀನೋ ಅನಿಸ್ತಿದೆ." ನೆಮ್ಮದಿಯ ಉಸಿರ್ಗರೆದು ಫೋನಿಟ್ಟಳು.

**ಎಲ್. ಪ್ರೇಮಶೇಖರ**



ರಿಸೀವರ್‌ನ ಮೇಲೆ ದಟ್ಟವಾಗಿ ಕಟ್ಟಿಕೊಂಡಿದ್ದ ಧೂಳನ್ನು ಒರೆಸಿ ಟೀವಿಯತ್ತ ದಾಪುಗಾಲಿಟ್ಟೆ. ಒಂಬತ್ತು ತಿಂಗಳಿಂದ ಬಾಯಿ ಕಳೆದುಕೊಂಡು ಕೂತಿದ್ದ ಅದೀಗ ಮಾತಾಡತೊಡಗಿತು. ದನಿ ಮೊದಮೊದಲು ಗೊಗ್ಗರಾಗಿದ್ದದ್ದು ಒಂದೆರಡು ನಿಮಿಷಗಳಲ್ಲಿ ಸರಿಯಾಯಿತು. ಹಳೆಯ ಪಂಚೆಯೊಂದನ್ನು ತಂದು ಟೀವಿ ಪರದೆಯನ್ನು ಒರೆಸಿದಾಗ ತುಂಬ ದಿನಗಳಿಂದ ಕಣ್ಣಿಗೆ ಬೀಳದಿದ್ದ ಆ ವರದಿಗಾರ್ತಿ ನೋಡಲು ಸಿಕ್ಕಿ ಹಳೆಯ ಗೆಳತಿಯೊಬ್ಬಳನ್ನು ಮತ್ತೆ ಭೇಟಿಯಾದಂತೆನಿಸಿತು. ಅವಳು ಹೇಳುತ್ತಿದ್ದಳು :

''...ಸರಕಾರ ಮತ್ತು ಧಾರ್ಮಿಕ ಬಂಡುಕೋರರ ನಡುವೆ ಕದನವಿರಾಮದ ಒಪ್ಪಂದಕ್ಕೆ ಮಧ್ಯರಾತ್ರಿ ಸಹಿ ಬಿದ್ದಿದೆ. ಸ್ವಾತಿ ಮಳೆಯ ಆರಂಭವಾಗುತ್ತಿದ್ದಂತೇ ಅನುಷ್ಠಾನಕ್ಕೆ ಬಂದ ಈ ಒಪ್ಪಂದವನ್ನು 'ಸ್ವಾತಿ ಒಪ್ಪಂದ' ಎಂದು ಪ್ರಧಾನ ಮಂತ್ರಿ ವರ್ಣಿಸಿದ್ದಾರೆ...''

ಒಂಬತ್ತು ತಿಂಗಳ ಹಿಂದೆ ಸಣ್ಣ ಚಕಮಕಿಯಲ್ಲಿ ಆರಂಭವಾಗಿ ನಾಕೇ ದಿನದಲ್ಲಿ ತಾರಕಕ್ಕೇರಿದ ಅಂತರ್ಯುದ್ಧವನ್ನು ನಿನ್ನೆ ಸಂಜೆ ಸಣ್ಣಗೆ ಆರಂಭವಾಗಿ ಕತ್ತಲೇರಿದಂತೆ ಹುಚ್ಚೆದ್ದು ರುಮ್ಮುರುಮ್ಮನೆ ಬಾರಿಸತೊಡಗಿದ ಮಳೆ ಸಂಪೂರ್ಣವಾಗಿ ತೊಳೆದುಹಾಕಿ ಬಿಟ್ಟಿದ್ದು ಖಚಿತವಾಯಿತು. ಆಕೆಯ ಮುಂದಿನ ಮಾತುಗಳಿಗೆ ಕಿವಿಗೊಟ್ಟೆ.

''...ಮೈಸೂರು ಮತ್ತು ಅದರ ಸುತ್ತಮುತ್ತಲಿನ ಬಂಡುಕೋರರ ಹಿಡಿತದಲ್ಲಿರುವ ಪ್ರದೇಶಗಳಲ್ಲಿ ಅವರ ಅಧಿಕಾರವನ್ನು ಸರಕಾರ ಮಾನ್ಯಮಾಡಿದೆ. ಆ ಪ್ರದೇಶದಲ್ಲಿ ತಮ್ಮ ಧರ್ಮಗ್ರಂಥಗಳಿಗನುಗುಣವಾಗಿ ಕಾನೂನುಕಟ್ಟಳೆಗಳನ್ನು ಅನುಷ್ಠಾನಕ್ಕೆ ತರಲು ಧಾರ್ಮಿಕ ಮುಖಂಡರಿಗೆ ಇಂದಿನಿಂದ ಅವಕಾಶವಿರುತ್ತದೆ. ಪೂರ್ವದಲ್ಲಿ ಪಾಲಾರ್ ನದಿಯಿಂದ ಹಿಡಿದು ಪಶ್ಚಿಮದಲ್ಲಿ ನಾಗರಹೊಳೆ, ಉತ್ತರದಲ್ಲಿ ಕಾವೇರಿ ನದಿಯಿಂದ ಹಿಡಿದು ದಕ್ಷಿಣದಲ್ಲಿ ನೀಲಗಿರಿ ಬೆಟ್ಟಗಳು ಮತ್ತು ದಿಂಬಂ ಅರಣ್ಯಗಳವರೆಗೆ ಹರಡಿರುವ ಈ ವಿಶಾಲ ಪ್ರದೇಶದ ಯಾವುದೇ ಆಂತರಿಕ ವ್ಯವಹಾರಗಳಲ್ಲಿ ಇನ್ನು ಮುಂದೆ ಸರಕಾರದ ಹಸ್ತಕ್ಷೇಪವಿರುವುದಿಲ್ಲ. ಈ ಒಪ್ಪಂದವನ್ನು ತಮ್ಮ ವಿಜಯವೆಂದು ಬಂಡುಕೋರ ಸೇನೆಯ ಮುಖಂಡರು ಸಾರಿದ್ದಾರೆ. ಹೊಸ ಯುಗದ ಹರಿಕಾರನಂತೆ ಬಂದ ಸ್ವಾತಿ ಮಳೆಯ ಹೆಸರನ್ನು ಚಿರಸ್ಥಾಯಿಗೊಳಿಸುವ ಉದ್ದೇಶದಿಂದ ಬಂಡುಕೋರರ ಹಿಡಿತದಲ್ಲಿರುವ ಇಡೀ ಪ್ರದೇಶವನ್ನು ಇನ್ನುಮುಂದೆ ಅಧಿಕೃತವಾಗಿ 'ಸ್ವಾತಿನಾಡು' ಎಂದೂ, ಮುಖ್ಯ ಪಟ್ಟಣವಾದ ಮೈಸೂರನ್ನು 'ಸ್ವಾತಿನಗರ'ವೆಂದೂ ಕರೆಯಲಾಗುವುದೆಂದು ಅವರ ಹಿರಿಯ ಧರ್ಮಾಧಿಕಾರಿ ಘೋಷಿಸಿರುವುದಾಗಿ ನಮ್ಮ ವಿಶೇಷ ವರದಿಗಾರ ತಿಳಿಸಿದ್ದಾರೆ.'' ಅವಳು ನಸುನಗುತ್ತಾ ಮರೆಯಾದಳು. ಮತ್ತೊಬ್ಬ, ಅದ್ಯಾವನೋ ಹೊಸಬ, ಕಾಣಿಸಿಕೊಂಡ. ''ಅಂತರ್ಯುದ್ಧದಿಂದಾಗಿ ಬೇರೆಡೆ ಹೋಗಿರುವ ಜನತೆ ಮತ್ತೆ ಸ್ವಾತಿನಾಡಿಗೆ ಹಿಂತಿರುಗಬೇಕೆಂದು ಸರಕಾರ ಮನವಿ ಮಾಡಿಕೊಂಡಿದೆ. ಇಡೀ ಪ್ರದೇಶ ಶಾಂತವಾಗಿದೆ, ನಾಗರಿಕರ ಪ್ರಾಣ ಹಾಗೂ ಆಸ್ತಿಪಾಸ್ತಿಗಳಿಗೆ ಯಾವ ಹಾನಿಯೂ ತಟ್ಟುವುದಿಲ್ಲ ಎಂಬುದನ್ನು ಜನತೆಗೆ ಮನವರಿಕೆ ಮಾಡಿಕೊಡುವ ಉದ್ದೇಶದಿಂದ ಪ್ರಧಾನ ಮಂತ್ರಿಯವರು ಇಂದು ಸ್ವಾತಿ ನಗರಕ್ಕೆ ಭೇಟಿ ನೀಡಲಿದ್ದಾರೆ. ಅವರೂ, ಸ್ವಾತಿನಾಡಿನ ಹಿರಿಯ ಧರ್ಮಗುರುಗಳೂ ಹತ್ತು ಗಂಟೆಗೆ ವಿದ್ಯಾರಣ್ಯಪುರಂನ ತಿಂಡಿ ಪಾರ್ಕ್‌ನಲ್ಲಿ ಬಹಿರಂಗ ಸಭೆಯೊಂದನ್ನು ಉದ್ದೇಶಿಸಿ ಮಾತನಾಡಲಿದ್ದಾರೆ. ಸ್ವಾತಿನಾಡಿನ ನಾಗರಿಕರಿಗೆ ತಮ್ಮ ಹೊಸ ನಾಯಕರೊಡನೆ, ತಮ್ಮ ಹಾಗೂ ತಮ್ಮ ನಾಡಿನ ಭವಿಷ್ಯದೊಡನೆ ಮುಖಾಮುಖಿಯಾಗುವ ಒಂದು ಅಪೂರ್ವ ಅವಕಾಶ...''

ಸಮಯ ನೋಡಿದೆ. ಇನ್ನೂ ಆರೂವರೆ. ಮರೆತೇ ಹೋಗಿದ್ದ ಮೊಬೈಲ್ ಫೋನನ್ನು ಹುಡುಕಿ ತೆಗೆದು ಚಾರ್ಜ್‌ಗೆ ಇಟ್ಟು ನಿರಾಳವಾಗಿ ಬಾಲ್ಕನಿಗೆ ನಡೆದೆ. ಬೀದಿಯಲ್ಲಿ ಮಕ್ಕಳು ಉಲ್ಲಾಸ, ಉತ್ಸಾಹದಿಂದ ಕೂಗುತ್ತಾ ಕಿರುಚುತ್ತಾ ಕ್ರಿಕೆಟ್ ಆಡುತ್ತಿದ್ದರು. ಮೈಮರೆತು ಅವರನ್ನೇ ನೋಡುತ್ತಾ ನಿಂತೆ. ಗೌರ್ಮೆಂಟಣ್ಣ ಅದೆಲ್ಲಿಂದಲೋ ಓಡಿಬಂದವನು ಮಕ್ಕಳನ್ನುದ್ದೇಶಿಸಿ ''ಕ್ರಿಕೆಟ್ ಆಡೋದು ಬ್ಯಾಡ, ಫುಟ್‌ಬಾಲ್ ಆಡಿ. ಫುಟ್‌ಬಾಲ್ ಆಡಿದ್ರೆ ಚಿಕನ್‌ಗುನ್ಯ ಬರೋಲ್ಲ ಅಂತ ಅಬ್ದುಲ್ ಕಲಾಂ ಹೇಳಿದ್ರು'' ಅಂದ.

ಗೌರ್ಮೆಂಟಣ್ಣನ ಹೆಸರೇನೋ ನನಗೆ ಗೊತ್ತಿಲ್ಲ. ನಾನು ಚಿಕ್ಕವನಾಗಿದ್ದಾಗಿನಿಂದಲೂ ಅವನನ್ನು ಎಲ್ಲರೂ ಹಾಗೇ ಕರೆಯುತ್ತಿದ್ದಾರೆ. ಅವನಿಗೆ ಮದುವೆಯಾಗಿತ್ತು. ಆದರೆ ಹೆಂಡತಿ ಅವನ ಜತೆಗಿಲ್ಲ. ಪ್ರಸ್ತದ ರಾತ್ರಿ ಅವಳು ಅವನ ತಲೆ ಮೇಲೇ ತೆಂಗಿನಕಾಯಿ ಒಡೆದಳಂತೆ. ಅವನು ಅವಳ ತೊಡೆ ಕಚ್ಚಿಬಿಟ್ಟನಂತೆ. ಅರಚಿಕೊಂಡು ಬೀದಿಗೆ ಓಡಿಬಂದ ಅವಳು ಮತ್ತೆ ಹೊಸ್ತಿಲು ದಾಟಿ ಒಳಗೆ ಕಾಲಿಡಲಿಲ್ಲವಂತೆ. ಆಗಿನಿಂದ ಅವನು ತಲೆಕೆಟ್ಟವನ ಹಾಗೆ ಬೀದಿಬೀದಿ ತಿರುಗುತ್ತಿರುತ್ತಾನೆ. ಮೂಡ್ ಚೆನ್ನಾಗಿದ್ದಾಗ ಮಕ್ಕಳನ್ನೆಲ್ಲಾ ಸುತ್ತ ಕೂರಿಸಿಕೊಂಡು ಸುಶ್ರಾವ್ಯವಾಗಿ ಹಾಡುತ್ತಾನೆ. ''ಗುಡಿಯ ನೋಡಿರಣ್ಣಾ, ದೇಹದ ಗುಡಿಯ ನೋಡಿರಣ್ಣಾ...'' ಎಂದವನು ಹಾಡುವುದನ್ನು ಕೇಳುವುದೇ ಒಂದು ಚಂದ.

ಸ್ನಾನ ಮಾಡಿ ಗಂಜಿ ಬೇಯಿಸಿದೆ. ನೆಂಜಿಕೊಳ್ಳಲು ಏನೂ ಇರಲಿಲ್ಲ. ಇಂದು ಅಂಗಡಿಗಳು ತೆರೆಯಬಹುದು. ಪ್ರಧಾನಮಂತ್ರಿಯವರ ಸಭೆಯಿಂದ ನೇರವಾಗಿ ಮಾರ್ಕೆಟ್ಟಿಗೆ ಹೋಗಿ ಮನೆಗೆ ಬೇಕಾದ ಸಾಮಾನನ್ನೆಲ್ಲಾ ತಂದಿಟ್ಟು ಒಂದು ಗಂಟೆಯ ಹೊತ್ತಿಗೆಲ್ಲಾ ಲಲಿತೆಯನ್ನೂ ಪುಟ್ಟಿಯನ್ನೂ ಕರೆತರಲು ಬಸ್‌ಸ್ಟ್ಯಾಂಡಿಗೆ ಹೋಗಬೇಕು ಎಂದುಕೊಳ್ಳುತ್ತಾ ಗಂಜಿ ಕುಡಿದೆ.

ಸಭೆ ನಡೆಯಲಿದ್ದ ತಿಂಡಿ ಪಾರ್ಕಿಗೆ ಹೋದರೆ ಅಲ್ಲೇನೋ ಗೊಂದಲವಿದ್ದಂತಿತ್ತು. ಕ್ರಿಕೆಟ್ ಆಡಲು ತಮಗೆ ಮೈದಾನ ಬೇಕೆಂದು ಒಂದಷ್ಟು ಜನ ಗುಂಪು ಕಟ್ಟಿಕೊಂಡು ಗಲಾಟೆ ಮಾಡುತ್ತಿದ್ದರು. ಅವರೊಡನೆ ಸಂಧಾನಕ್ಕೆ ಹೋಮ್ ಮಿನಿಸ್ಟರ್ ಬಂದಿದ್ದರು. ಅವರೇನು ಮಾತಾಡುತ್ತಿದ್ದಾರೆಂದು ಗೊತ್ತಾಗುತ್ತಿರಲಿಲ್ಲ. ಸ್ವಲ್ಪ ದೂರ ಹೋಗಿ ಒಬ್ಬನೇ ಸುಮ್ಮನೆ ಒಂದು ಕಡೆ ನಿಂತೆ. ಸುತ್ತಲ ಎಲ್ಲ ಸದ್ದುಗಳನ್ನೂ ಮೀರಿ ಧ್ವನಿವರ್ಧಕದಲ್ಲಿ ಹೋಮ್ ಮಿನಿಸ್ಟರ್ ಅವರ ದನಿ ಕೇಳಿಸಿತು :

''ಸರಕಾರ ಮತ್ತು ಧರ್ಮಗುರುಗಳ ನಡುವೆ ಕಳೆದ ಮಧ್ಯರಾತ್ರಿ ಏರ್ಪಟ್ಟ ಒಪ್ಪಂದದಂತೆ ಸ್ವಾತಿನಾಡಿನ ಭವಿಷ್ಯವನ್ನು ನಿರ್ಧರಿಸಲು ಈ ಸಭೆಯಲ್ಲಿ ಐನೂರಾ ನಲವತ್ತೈದು ಸದಸ್ಯರನ್ನು ಆಯ್ಕೆಮಾಡಬೇಕಾಗಿದೆ. ಇದನ್ನು ಯಾವ ಕಾರಣಕ್ಕೂ ಮುಂದೂಡುವ ಹಾಗಿಲ್ಲ. ಸಭೆ ಯಶಸ್ವಿಯಾಗಿ ಮುಕ್ತಾಯವಾದ ನಂತರ ಕ್ರಿಕೆಟ್ ಉತ್ಸಾಹಿಗಳು ತಮ್ಮ ಆಟವನ್ನು ಆರಂಭಿಸಬಹುದು.''

ಅವರ ಮಾತು ಮುಗಿಯುತ್ತಿದ್ದಂತೇ ಒಂದಷ್ಟು ಜನ ಏಕಕಾಲಕ್ಕೆ ಅರಚಿದರು : ''ಉಹ್ಞುಂ, ಸಾಧ್ಯವಿಲ್ಲ. ಬಿಸಿಲಿರುವಾಗಲೇ ನಮ್ಮ ಆಟವನ್ನು ಆಡಿ ಮುಗಿಸಿಬಿಡಬೇಕು. ಆಮೇಲೆ ಮಳೆಗಿಳೆ ಬಂದುಬಿಟ್ಟರೆ ಕಷ್ಟ. ಹೇಗೂ ಈ ಮೈದಾನ ವಿಶಾಲವಾಗಿದೆ. ಈ ಕಡೆ ನಾವು ಆಡಿಕೊಳ್ಳುತ್ತೇವೆ, ಆ ಕಡೆ ನೀವು ಅದೇನೋ ಸಭೆಯೋ ಮಣ್ಣಾಂಗಟ್ಟಿಯೋ ಮಾಡಿಕೊಳ್ಳಿ.''

ತಮ್ಮ ಸಹಾಯಕರೊಡನೆ ಪಿಸುದನಿಯಲ್ಲಿ ಸಂಭಾಷಿಸಿದ ಗೃಹಸಚಿವರು ಮೈಕ್ ಎತ್ತಿಕೊಂಡರು : ''ಸಭೆ, ಆಟ ಎರಡೂ ಏಕಕಾಲದಲ್ಲಿ ಒಂದೇ ಕಡೆ ನಡೆಯಲು ಸಾಧ್ಯವಿಲ್ಲ...'' ಅವರ ಮಾತನ್ನು ಮುಗಿಯಗೊಡದೆ ಕ್ರಿಕೆಟ್ ಗುಂಪಿನವರು ಕೂಗಾಡ ತೊಡಗಿದರು.

''ಇದೇನು ಹುಚ್ಚಾಟ ! ಸಭೆ ಸುಸೂತ್ರವಾಗಿ ನಡೆದು ನಮ್ಮೂರಲ್ಲಿ ಶಾಶ್ವತ ಶಾಂತಿ ಸ್ಥಾಪನೆಯಾಗೋದು ಮುಖ್ಯ ಅಲ್ಲವ ? ಶಾಂತಿ ಸ್ಥಾಪನೆ ಆಗಿ ಜನಜೀವನ ಮಾಮೂಲಿನಂತಾದ ಮೇಲೆ ಇವರು ಯಾವುದೇ ಅಡ್ಡಿ ಆತಂಕ ಇಲ್ಲದೆ ಆಟ ಆಡಿಕೊಳ್ಳಬಹುದಲ್ವಾ ?'' ಯಾರೋ ಅಂದರು. ಅದೆಲ್ಲಿಂದಲೋ ಬಂದ ಗೌರ್ಮೆಂಟಣ್ಣ ತಾರಕ ಧ್ವನಿಯಲ್ಲಿ ಕೂಗಿದ : ''ಆ ಪಾಕಿಸ್ತಾನದಲ್ಲಿ ಸರಕಾರವೇ ಟೆರರಿಸ್ಟರನ್ನ ಹುಟ್ಟುಹಾಕ್ತು. ಈಗವರು ಸರಕಾರವನ್ನೇ ಮೀರಿ ಬೆಳೆದುಬಿಟ್ಟಿದ್ದಾರೆ. ನಮ್ಮಲ್ಲಿ ಈ ಕ್ರಿಕೆಟ್ ಗುಂಪನ್ನ ಹುಟ್ಟುಹಾಕಿದ್ದು ಸರಕಾರ. ಈಗ ನೋಡಿ ಇವರು ಸರಕಾರವನ್ನೇ ಕ್ಯಾರೇ ಎನ್ನದಷ್ಟು ಮಟ್ಟಕ್ಕೆ ಏರಿಬಿಟ್ಟಿದ್ದಾರೆ.''

ಅವನ ಮಾತು ಗೃಹಸಚಿವರ ಕಿವಿಗೆ ಬಿತ್ತೆಂದು ಕಾಣುತ್ತದೆ, ಮೈಕ್‌ನಲ್ಲಿ ಹೊಗಳತೊಡಗಿದರು : ''ಯೆಸ್, ಎಕ್ಸಾಕ್ಟ್ಲಿ. ಅದು ಸರಿಯಾದ ಮಾತು. ವಿವೇಕಯುತವಾದ ಮಾತು. ಕ್ರಿಕೆಟ್ ಉತ್ಸಾಹಿಗಳ ಕಣ್ಣು ತೆರೆಸುವಂಥಾ ಮಾತು...''

ಒಂದಷ್ಟು ಜನ ಗೌರ್ಮೆಂಟಣ್ಣನನ್ನು ಹೊಡೆಯಲು ಬಂದರು. ಅವನು ತಪ್ಪಿಸಿಕೊಂಡು ಓಡಿಬಿಟ್ಟ. ಅವನು ಮಾಯವಾದರೂ ಅವನ ಮಾತುಗಳು ಮಾತ್ರ ಕ್ರಿಕೆಟ್

## ನೋವು

ಕೋಗಿಲೆಯ ಇಂಪಾದ
ಗಾನದೊಡನೆ ಬೆರೆತು
ಅಪಸ್ವರವಾಗುವ
ನವಿಲಿನ ಕರ್ಕಶ ಸ್ವರದಂತೆ

ಎನ್. ಶ್ರೀನಿವಾಸ್
ಪ್ರ.ದ.ಸ.
ಜಿಲ್ಲಾ ಕೃಷಿ ತರಬೇತಿ ಕೇಂದ್ರ, ವಿ. ಸಿ. ಫಾರಂ
ಮಂಡ್ಯ - [illegible]

ಉತ್ಸಾಹಿಗಳ ಗದ್ದಲವನ್ನೂ ಮೀರಿ ಎಲ್ಲೆಲ್ಲೂ ರಿಂಗಣಿಸುತ್ತಿದ್ದವು. ಕ್ರಿಕೆಟ್ ಉತ್ಸಾಹಿಗಳು ಕೊನೆಗೂ ಸೋಲೊಪ್ಪಿಕೊಳ್ಳಬೇಕಾಯಿತು. ನಿಮ್ಮ ಸಹವಾಸವೇ ಬೇಡ ಎನ್ನುತ್ತಾ ಮುನಿಸಿಕೊಂಡು ಬೇರೆತ್ತಲೋ ಹೊರಟುಹೋದರು. ನೆಮ್ಮದಿಯ ಉಸಿರು ಬಿಟ್ಟು ತಿಂಡಿ ಪಾರ್ಕಿನತ್ತ ದಾಪುಗಾಲಿಡುತ್ತಿದ್ದ ಗುಂಪನ್ನು ಸೇರಿಕೊಂಡೆ.

ಮೈದಾನದ ಸುತ್ತಲೂ ಬೇಲಿ ಹಾಕಿದ್ದರು. ಇಬ್ಬರು ಸಂನ್ಯಾಸಿಗಳು ಎಕೆ ೪೭ ಹಿಡಿದುಕೊಂಡು ಗೇಟಿನಲ್ಲಿ ನಿಂತಿದ್ದರು. ಅವರು ಕೆಲವರನ್ನು ಮಾತ್ರ ಒಳಗೆ ಬಿಟ್ಟು ಉಳಿದವರನ್ನು ನಿರ್ದಾಕ್ಷಿಣ್ಯವಾಗಿ ಹೊರಗಟ್ಟುತ್ತಿದ್ದರು. ಪ್ರತಿಭಟಿಸಿದವರನ್ನು ಹಿಡಿದು ದೂರತಳ್ಳಲೆಂದೇ ಒಂದಷ್ಟು ಸೈನಿಕರೂ ಇದ್ದರು. ಗುಂಪಿನಲ್ಲಿ ಮುಂದಿದ್ದ ಹಲವಾರು ಪರಿಚಯಸ್ಥರು ಸೈನಿಕರಿಂದ ನೂಕಿಸಿಕೊಂಡು ಗೊಣಗುತ್ತಾ ಹಿಂದಕ್ಕೆ ಬಂದದ್ದನ್ನು ನೋಡಿ ನನಗೆ ಕಳವಳವಾಯಿತು. ನಮ್ಮ ಹಿಂದಿನ ಪ್ರಾಂತೀಯ ಸರಕಾರದ ವಿದ್ಯಾಮಂತ್ರಿಗಳೂ ಗೇಟಿಗೆ ಬೆನ್ನುಹಾಕಿ ಬರುತ್ತಿದ್ದುದು ಕಣ್ಣಿಗೆ ಬಿದ್ದಮೇಲಂತೂ ಇದ್ಯಾಕೋ ನೆಟ್ಟಗಿಲ್ಲ ಅನ್ನಿಸಿ ಗಕ್ಕನೆ ಹಿಂದಕ್ಕೆ ತಿರುಗಿದೆ. ''ಏಯ್, ಏಯ್, ಅರೆ ನಿಲ್ರೀ!'' ಎಂದು ಯಾರೋ ಕೂಗುತ್ತಿದ್ದರು. ''ಕೈ ತೋರಿಸಿ ಅವಲಕ್ಷಣ ಅನಿಸಿಕೊಳ್ಳೋದು ಬೇಡ ಅಂತ ಹಿಂದಕ್ಕೆ ಬಂದುಬಿಟ್ಟೆ, ಹೆಹೆಹೆ!'' ಎಂದು ಪಕ್ಕದಲ್ಲಿದ್ದವರಿಗೆ ಬೇಸರದಲ್ಲಿ ಹೇಳಿಕೊಂಡು ಪೆಚ್ಚುಪೆಚ್ಚಾಗಿ ಹಲ್ಲುಬಿಡುತ್ತಿದ್ದಂತೆ ಅದ್ಯಾರೋ ರಟ್ಟೆಯನ್ನು ಬಲವಾಗಿ ಎಳೆದರು. ಗಾಬರಿಯಿಂದ ತಿರುಗಿ ನೋಡಿದರೆ ಸೈನಿಕನೊಬ್ಬ ಬುಸುಗುಡುತ್ತಿದ್ದ. ''ಏನ್ರೀ, ನಿಮ್ಗೆ ಕಿವಿ ಕೆಪ್ಪಾ? ಕರೀತಾ ಇರೋದು ನಿಮ್ಮನ್ನೇ ಅಲ್ವಾ ?'' ಎನ್ನುತ್ತಾ ನನ್ನ ಭುಜ ಅಲುಗಿಸಿದ. ಬೆಚ್ಚಿ ''ಗೊತ್ತಾಗ್ಲಿಲ್ಲ ಇವರೇ'' ಎಂದು ದನಿ ಹೊರಡಿಸಿದೆ. ಅವನಿಗೆ ಅದರ ಕಡೆ ಗಮನವೇ ಇಲ್ಲ. ''ಅಯ್, ತೆಪ್ಪಗೆ ನಡಿಯಯ್ಯ ಒಳಗೆ'' ಎನ್ನುತ್ತಾ ನನ್ನನ್ನು ಗೇಟನತ್ತ ನೂಕಿ ಅಲ್ಲಿ ನಿಂತಿದ್ದ ಮತ್ಯಾರನ್ನೋ ಎಳೆದು ದೂರ ಒಗೆದ.

ಗೇಟಿನಲ್ಲಿದ್ದ ಸಂನ್ಯಾಸಿಗಳು ಅವನಷ್ಟು ಒರಟರಾಗಿರಲಿಲ್ಲ. ನನಗೆ ವಂದಿಸಿ ಒಳಬಿಟ್ಟರು. ಮತ್ತಿಬ್ಬರು ಬಂದು ''ಇಲ್ಬನ್ನಿ, ಹೀಗೆ ಹೀಗೆ'' ಎನ್ನುತ್ತಾ ನನ್ನನ್ನು ಕೈಹಿಡಿದು ಕರೆದುಕೊಂಡು ಹೋಗಿ ಮುಂದಿನ ಸಾಲಿನಲ್ಲಿ ಕೂರಿಸಿದರು. ಅವರಂತೆ ಇನ್ನೂ ಹತ್ತಾರು ಸಂನ್ಯಾಸಿಗಳು ಬಂದಬಂದವರಿಗೆ ಜಾಗ ತೋರಿಸುತ್ತಿದ್ದರು. ಅವರೆಲ್ಲರೂ ಕಣ್ಣುಗಳಿಗೆ ಹಸಿರು ಬಣ್ಣದ ಕನ್ನಡಕ ಹಾಕಿಕೊಂಡಿದ್ದರು.

ಕರವಸ್ತ್ರದಿಂದ ಮುಖ ಒರೆಸಿಕೊಂಡು ಒಮ್ಮೆ ಸುತ್ತಲೂ ಕಣ್ಣಾಡಿಸಿದೆ. ಎಡಕ್ಕೆ ನನ್ನ ಗೆಳೆಯನ ಹೆಂಡತಿ ಕುಳಿತಿದ್ದಳು. ಅವಳ ಪಕ್ಕದಲ್ಲಿದ್ದದ್ದು ನನ್ನ ಗೆಳೆಯನಲ್ಲ, ಬೇರೆ ಯಾರೋ ಗಂಡಸು. ಭಾರಿ ಮೀಸೆ ಬಿಟ್ಟುಕೊಂಡು ಹಳೆಯ ಸಿನಿಮಾಗಳ ರೌಡಿಯಂತಿದ್ದ. ''ಅವರೆಲ್ಲಿ ?'' ಎಂದು ಆಕೆಯನ್ನು ಪ್ರಶ್ನಿಸಿದರೆ ಆಯಮ್ಮ ಮುಖ ಚಿಕ್ಕದು ಮಾಡಿದಳು. ''ಅವರನ್ನ ಒಳಗೆ ಬಿಡ್ಲಿಲ್ಲ ಇವರೇ. ನಾನು ಎಷ್ಟೇ ಬೇಡ ಅಂದ್ರೂ ನನ್ನನ್ನ ಮಾತ್ರ ಎಳಕೊಂಡು ಬಂದು ಇಲ್ಲಿ ಕೂರಿಸಿದ್ರು. ನಾನಂತೂ ಹೆದರಿಹೋಗಿದ್ದೆ. ಸದ್ಯ, ನೀವು ಬಂದದ್ದು ಒಳ್ಳೇದಾಯ್ತು. ನನ್ ಜೀವ ಹಿಂದಕ್ಕೆ ಬಂತು'' ಎನ್ನುತ್ತಾ ನನ್ನ ಪಕ್ಕ ಸರಿದಳು. ರೌಡಿ ನಮ್ಮಿಬ್ಬರನ್ನೂ ದುರುಗುಟ್ಟಿ ನೋಡಿದ. ಕಸಿವಿಸಿಯಾಗಿ ಬಲಕ್ಕೆ ಹೊರಳಿದರೆ ಅಲ್ಲಿ ಗೌರ್ಮೆಂಟಣ್ಣನ ಹೆಂಡತಿಯನ್ನು ಕಂಡು ಅವಾಕ್ಕಾದೆ. ಮಾರ್ಕೆಟ್ಟಿನಿಂದ ನೇರ ಇತ್ತಲೇ ಬಂದಿದ್ದಳೇನೋ, ಮಡಿಲಲ್ಲೊಂದು ಪುಟ್ಟ ತುಂಬಿದ ಚೀಲ ಇಟ್ಟುಕೊಂಡು ಕೂತಿದ್ದವಳು ನಾನು ಅತ್ತ ತಿರುಗಿದೊಡನೇ ನಿರಾಸಕ್ತಿಯಲ್ಲಿ ''ಹೆದರಿಕಂಡ್ ಬಿಟ್ರಾ ?'' ಅಂದಳು. ''ಹೆಹೆ, ಹಂಗೇನಿಲ್ಲಾ'' ಅಂದೆ.

ಅವಳ ಪಕ್ಕದ ಜಾಗ ಖಾಲಿ, ಅದರಾಚೆ ಒಬ್ಬಳು ಅಪರಿಚಿತ ಹೆಂಗಸು, ಅಪ್ಸರೆಯಂತೆ ತುಂಬ ಸುಂದರವಾಗಿದ್ದಳು. ದಪ್ಪ ಜಡೆಗೆ ಮಲ್ಲಿಗೆಯ ದಂಡೆ ಮುಡಿದು ಸುತ್ತಲೂ ಪರಿಮಳ ಬೀರುತ್ತಿದ್ದಳು. ದೇಶ ಕಾಲದ ಪರಿವೆಯನ್ನೇ ಮರೆತು ಅವಳನ್ನೇ ಎರಡು ಕ್ಷಣ ಎವೆಯಿಕ್ಕದೆ ನೋಡಿದೆ. ಗೌರ್ಮೆಂಟಣ್ಣನ ಹೆಂಡತಿಗೆ ಏನನ್ನಿಸಿತೋ ''ಈ ಸೀಟ್ ಖಾಲಿ ಇದೆ. ಬರ್ತೀರಾ ಈ ಕಡೆ ?'' ಎನ್ನುತ್ತಾ ತನಗೂ ಸುಂದರಿಗೂ ನಡುವಿದ್ದ ಕುರ್ಚಿಯತ್ತ ಬೆರಳು ಮಾಡಿದಳು. ನಾನು ಉತ್ತರಿಸುವ ಮೊದಲೇ ಸುಂದರಿಯ ಆ ಕಡೆ ಇದ್ದ ಗಡ್ಡದವನೊಬ್ಬ ಥಟಕ್ಕನೆ ''ಬೇಕಾದ ಕಡೆ ಕೂರೋ ಹಂಗಿಲ್ರೀ. ಸ್ವಯಂಸೇವಕರು ಕರಕಂಡು ಬಂದು ಕೂರಿಸಿದ ಜಾಗದಲ್ಲಿ ಮಾತ್ರ ಕೂರಬೇಕು'' ಅಂದ, ಗತ್ತಿನಿಂದ. ಸುಂದರಿ ಸಣ್ಣಗೆ ನಕ್ಕಳು. ಗೆಳೆಯನ ಹೆಂಡತಿ ಏನೆಂದುಕೊಂಡಳೋ ಎಂದು ಕಸಿವಿಸಿ ಯಾಯಿತು. ''ಇವಳಿಗ್ಯಾಕೆ ಬೇಕಿತ್ತು ಈ ಅಧಿಕಪ್ರಸಂಗ'' ಎಂದು ಗೌರ್ಮೆಂಟಣ್ಣನ ಹೆಂಡತಿಯನ್ನು ಮನಸ್ಸಿನಲ್ಲೇ ಬೈದುಕೊಂಡೆ.

ಜನ ಇನ್ನೂ ಒಳಬರುತ್ತಿದ್ದರು. ಒಮ್ಮೆ ಸುತ್ತಲೂ ಕಣ್ಣಾಡಿಸಿದಾಗ ಗಡ್ಡದವನ ಮಾತು ನಿಜ ಎನಿಸಿತು. ಹಸಿರು ಗಾಗಲ್ಸ್‌ನ ಸಂನ್ಯಾಸಿ ಸ್ವಯಂಸೇವಕರು ಒಬ್ಬೊಬ್ಬರನ್ನೂ ಕೈಹಿಡಿದು ಕರೆದುಕೊಂಡುಹೋಗಿ ಕುರ್ಚಿಗಳಲ್ಲಿ ಕೂರಿಸುತ್ತಿದ್ದರು. ''ನಾ ಇಲ್ಲೇ ಕೂತ್ಕೋತೀನಿ ಬಿಡ್ರೀ'' ಎಂದು ಹಠಹಿಡಿದು ಕೊನೇ ಸಾಲಿನಲ್ಲಿ ಕೂರುತ್ತಿದ್ದ ಚಂದದ ಚಿಗುರು ಮೀಸೆಯ ಯುವಕನೊಬ್ಬನನ್ನು ಹಿಡಿದೆಬ್ಬಿಸಿ ರಟ್ಟೆ ಹಿಡಿದು ಇತ್ತ ಕರೆತಂದರು. ಅವನು ''ನಂಗೆ ಕೆಲ್ಸಾ ಇದೇ ಕಣ್ರೀ. ಸಭೆ ಮುಗಿಯೋವರ್ಗೂ ಕೂರಕ್ಕಾಗಲ್ಲ. ನಾನಂತೂ ಮಧ್ಯದಲ್ಲೇ ಎದ್ದು ಹೋಗೋನು'' ಎಂದು ಕೂಗಾಡುತ್ತಿದ್ದ. ಆ ಬಡಪಾಯಿಯ ಯಾವ ಪ್ರತಿಭಟನೆಗಳನ್ನೂ ಲೆಕ್ಕಿಸದೆ ಎಳೆದುತಂದು ನನ್ನ ಹಿಂದಿನ ಸಾಲಿನಲ್ಲಿ ಖಾಲಿಯಿದ್ದ ಒಂದೇ ಒಂದು ಸೀಟಿನಲ್ಲಿ ಅದು ಅವನಿಗಾಗಿಯೇ ರಿಸರ್ವ್ ಆಗಿದೆಯೋ ಎಂಬಂತೆ ಅದುಮಿ ಕೂರಿಸಿದರು. ಅವನು ''ನನ್ನನ್ನ ಏನಂತ ತಿಳಕೊಂಡಿದ್ದೀರಿ ? ನಮ್ಮಮ್ಮಂಗ್ಹೇಳಿ ನಿಮಗೆ ಮಾಡಿಸ್ತೀನಿ ಇರಿ'' ಎಂದು ಅಬ್ಬರಿಸಿದ. ಅದ್ಯಾವುದನ್ನೂ ಲೆಕ್ಕಕ್ಕೆ ತೆಗೆದುಕೊಳ್ಳದ ಸ್ವಯಂಸೇವಕರು ''ಅಲ್ಲಲ್ಲ ಅಲ್ಲಲ್ಲ, ಆ ಕಡೆ ನಡೀರಿ ನೀವು, ನಿಮ್ ಜಾಗ ಅಲ್ಲಿದೆ'' ಎಂದು ಕೂಗುತ್ತಾ ಗುಂಡಮ್ಮಳೊಬ್ಬಳನ್ನು ಅಟ್ಟಿಸಿಕೊಂಡು ಹೋದರು.



ಇಡೀ ಆವರಣ ಭರ್ತಿಯಾಗುತ್ತಿದ್ದಂತೆ ಒಬ್ಬ ಗಂಡಸಿನ ಪಕ್ಕ ಒಬ್ಬಳು ಹೆಂಗಸು ಕೂರುವಂತೆ ವ್ಯವಸ್ಥೆ ಮಾಡಿರುವುದು ನನ್ನ ಗಮನಕ್ಕೆ ಬಂತು. ಅರೆವೃತ್ತಾಕಾರದ ಹತ್ತು ಹನ್ನೆರಡು ಸಾಲುಗಳನ್ನು ನೋಡಿದರೆ ಥೇಟ್ ಸಾಮೂಹಿಕ ವಿವಾಹ ಸಮಾರಂಭದಂತೆ ಕಾಣುತ್ತಿತ್ತು. ಕೊರಳುಗಳಲ್ಲಿ ಹೂಮಾಲೆ ಒಂದಿರಲಿಲ್ಲ, ಅಷ್ಟೇ. ಇದೇನು ವಿಚಿತ್ರ ಎಂದುಕೊಂಡು ಸುತ್ತಲೂ ಮತ್ತೊಮ್ಮೆ ಕಣ್ಣಾಡಿಸಿದರೆ ಗೌರ್ಮೆಂಟಣ್ಣನ ಹೆಂಡತಿಯ ಪಕ್ಕದ ಕುರ್ಚಿಯನ್ನು ಬಿಟ್ಟು ಬೇರೆಲ್ಲಾ ಕುರ್ಚಿಗಳೂ ಭರ್ತಿಯಾಗಿದ್ದವು. ಸ್ವಯಂಸೇವಕರು ಯಾರನ್ನೋ ಹುಡುಕುತ್ತಿದ್ದರು. ''ಇಲ್ಲೇ ಇದ್ದನಲ್ಲ, ನಾನೇ ಎಳೆದು ಒಳಗೆ ಬಿಟ್ಟಿದ್ದೆ'' ಎಂದು ಒಬ್ಬರಿಗೊಬ್ಬರು ಹೇಳಿಕೊಂಡು ಈ ಮೂಲೆಯಿಂದ ಆ ಮೂಲೆಗೆ ಬಾಲ ಸುಟ್ಟ ಬೆಕ್ಕಿನಂತೆ ಓಡಾಡುತ್ತಿದ್ದರು. ಕೊನೆಗೆ ''ಇಲ್ಲಿ ಅಡಗಿಕೂತಿದ್ದಾನೆ ನೋಡಿ, ಘಟಿಂಗ ಸೂಳೇಮಗ'' ಎಂದು ಬೈಯುತ್ತಾ ಇಬ್ಬರು ಸ್ವಯಂಸೇವಕರು ವೇದಿಕೆಯ ಹಿಂಭಾಗದಿಂದ ಒಬ್ಬನನ್ನು ಜುಟ್ಟು ಹಿಡಿದು ಹೊರಗೆಳೆದರು. ನೋಡಿದರೆ ಅವನು ನಮ್ಮ ಗೌರ್ಮೆಂಟಣ್ಣ! ಗೋಳೋ ಎಂದು ಅಳುತ್ತಿದ್ದ ಅವನ ಕೈಕಾಲುಗಳನ್ನು ಹಿಡಿದು ನಾಲ್ವರು ಅನಾಮತ್ತಾಗಿ ಎತ್ತಿತಂದು ಖಾಲಿಯಿದ್ದ ಕುರ್ಚಿಯಲ್ಲಿ ಕೆಡವಿದರು. ಅಲ್ಲಿಂದ ಚೆಂಡಿನಂತೆ ಪುಟಿದೆದ್ದ ಅವನನ್ನು ಇಬ್ಬರು ಬಲವಾಗಿ ಅದುಮಿ ಹಿಡಿದರು. ಇನ್ನಿಬ್ಬರು ನೀರು ಸೇದುವ

ಬಲವಾದ ಹಗ್ಗವನ್ನು ತಂದು ಅವನನ್ನು ಕುರ್ಚಿಗೆ ಕಟ್ಟಿಬಿಟ್ಟರು. ಕೆಲಸವಾಯಿತು ಎಂದು ಅವರು ಬೆವರೊರೆಸಿಕೊಳ್ಳುತ್ತಾ ಅತ್ತ ತಿರುಗಿದಂತೇ ಇತ್ತ ಇವನು ಮೇಲೇಳಲು ನೋಡಿದರ ಅವನ ಜತೆ ಕುರ್ಚಿಯೂ ಮೇಲೆದ್ದಿತು. ''ಹಿಖ್, ಮಾದರಚೊತ್ ! ಟೈಮಾಗೋಯ್ತು ಅಂತ ದೊಡ್ಡೋರೆಲ್ಲಾ ನಮ್ ಮೇಲೆ ಎಗರಾಡ್ತಾ ಇದ್ರೆ ಇವ್ನು ಇಲ್ಲಿ ನೌಟಂಕಿ ಆಡ್ತಿದಾನೆ, ಬೇವಾರ್ಸಿ ಸೂಳೆಮಗ'' ಎಂದು ನಾಲ್ವರೂ ಒಟ್ಟಾಗಿ ಬೈಯುತ್ತಾ ಗೌರ್ಮೆಂಟಣ್ಣನ ತಲೆಯ ಮೇಲೊಂದು ಮೊಟಕಿ ಕುರ್ಚಿಯನ್ನು ಬಲವಾಗಿ ಒತ್ತಲು ಅದರ ನಾಲ್ಕು ಕಾಲುಗಳೂ ಪೂರ್ಣವಾಗಿ ನೆಲದೊಳಗೆ ಹೂತುಹೋದವು. ನಗುವುದೋ ಅಳುವುದೋ ಗೊತ್ತಾಗದೆ ನಾವೆಲ್ಲಾ ಕಣ್ಣುಕಣ್ಣು ಬಿಡುತ್ತಿದ್ದರೆ ಅವನ ಹೆಂಡತಿ ಇಡೀ ಘಟನೆಗೂ ತನಗೂ ಯಾವ ಸಂಬಂಧವೂ ಇಲ್ಲವೆನ್ನುವಂತೆ ಖಾಲಿ ವೇದಿಕೆಯನ್ನೇ ನೋಡುತ್ತಾ ಕುಳಿತಿದ್ದಳು. ಸುಂದರಿಯ ಮುಖದಲ್ಲಿ ಅದೇ ಮಾಸದ ಮುಗುಳ್ನಗೆ. ಗಡ್ಡದವನು ಅವಳ ಕಿವಿಗೆ ತುಟಿಯೊತ್ತಿ ಅದೇನೋ ಪಿಸುಗುಟ್ಟುತ್ತಿದ್ದ. ಎಡಕ್ಕೆ ತಿರುಗಿದರೆ ಗೆಳೆಯನ ಹೆಂಡತಿ ಸಣ್ಣಗೆ ಬೆವರುತ್ತಿದ್ದಳು. ''ಭಯವಾಗುತ್ತೆ'' ಎನ್ನುತ್ತಾ ನನ್ನ ಕೈ ಹಿಡಿದಳು. ''ಹೆದರಬೇಡಿ. ಸಭೆ ಮುಗಿದೊಡನೆ ನಾನೇ ನಿಮ್ಮನ್ನ ಜೋಪಾನವಾಗಿ ಮನೆಗೆ ತಲುಪಿಸ್ತೀನಿ'' ಎಂದು ಸಮಾಧಾನಿಸಿದೆ. ಅವಳ ಆತಂಕ ದೂರವಾದಂತೆ ಕಾಣಲಿಲ್ಲ.

''ಸದ್ದು! ಸದ್ದು!'' ಎಂಬ ಸದ್ದು ಕೇಳಿ ತಲೆಯೆತ್ತಿದೆ. ಅದ್ಯಾವಾಗ ಬಂದರೋ ವೇದಿಕೆಯ ಮೇಲೆ ಮೂವರು ಕುಳಿತಿದ್ದರು. ಮಧ್ಯದಲ್ಲಿದ್ದವನು ಕಾವಿ ನಿಲುವಂಗಿ ತೊಟ್ಟಿದ್ದ ಕಟ್ಟುಮಸ್ತಾದ ಎತ್ತರದ ಆಳು. ಮೀಸೆ, ಅಂಚೆರಡರಲ್ಲೂ ನರೆಗಟ್ಟುತ್ತಾ ನಡುವಿನ್ನೂ ಕಪ್ಪಾಗಿ ಮಿರುಗುತ್ತಿದ್ದ ಮೊಳದುದ್ದದ ಗಡ್ಡ, ತಲೆಯ ಮೇಲೆ ದಪ್ಪ ಮುಂಡಾಸು. ಮಡಿಲಲ್ಲಿದ್ದ ಎಕೆ ೪೭ ಅನ್ನು ಸವರುತ್ತಾ ಗತ್ತಿನಿಂದ ಕೂತುಕೊಂಡಿದ್ದ.

''ಸಂನ್ಯಾಸಿಗೇಕೆ ಗನ್ನು ?'' ಅಂದಳು ಗೆಳೆಯನ ಹೆಂಡತಿ. ''ಅವನು ಗನ್ ಸಂನ್ಯಾಸಿ'' ಎನ್ನುತ್ತಾ ಕೀಟಲೆಯ ನಗೆ ನಕ್ಕೆ. ''ಹೌದು ಹೌದು. ಸರಿಯಾಗಿ ಹೇಳಿದ್ರಿ'' ಎನ್ನುತ್ತಾ ತಾನೂ ನಕ್ಕಳು.

ಗನ್ ಸಂನ್ಯಾಸಿಯ ಎಡಕ್ಕಿದ್ದ ಸೂಟುಬೂಟುಧಾರಿ ಪ್ರಧಾನಮಂತ್ರಿ ಎಂದು ತಕ್ಷಣ ಗುರುತು ಹತ್ತಿತು. ಗನ್ ಸಂನ್ಯಾಸಿಯ ಬಲಕ್ಕಿದ್ದವನು ಮಿಲಿಟರಿ ಸಮವಸ್ತ್ರದಲ್ಲಿದ್ದ. ಆದರೆ ಎದೆಯ ಮೇಲೆ ಪದವಿಯ ಬಣ್ಣಗಳು ಕಾಣಲಿಲ್ಲ, ತಲೆಯ ಮೇಲೆ ಕ್ಯಾಪ್ ಸಹ ಇರಲಿಲ್ಲ. ಗನ್ ಸನ್ಯಾಸಿಯಂಥದೇ ಪಗಡಿ, ಸಮವಸ್ತ್ರಕ್ಕೆ ಹೊಂದಿಕೆಯಾಗುವಂಥ ಡಿಸೈನು.

ಪ್ರಾರ್ಥನೆಯೊಂದಿಗೆ ಸಭೆ ಆರಂಭವಾಯಿತು. ಗೃಹಮಂತ್ರಿ ವೇದಿಕೆಯಲ್ಲಿದ್ದ ಮೂವರ ಪರಿಚಯ ಮಾಡಿಕೊಟ್ಟು ಅವರನ್ನು ಔಪಚಾರಿಕವಾಗಿ ಸ್ವಾಗತಿಸಿದಾಗ ಆ ಮಿಲಿಟರಿ ಸಮವಸ್ತ್ರದಲ್ಲಿದ್ದವನು ಧಾರ್ಮಿಕ ಗೆರಿಲ್ಲಾಗಳ ಮಿಲಿಟರಿ ಕಮ್ಯಾಂಡರ್ ಎಂದರಿತು ಬೆಚ್ಚಿದೆ. ಪತ್ರಿಕೆಗಳಲ್ಲಿ ಕಂಡಿದ್ದ ಫೋಟೋಗಳಲ್ಲಿ ಕಣ್ಣುಗಳನ್ನು ಮಾತ್ರ ಬಿಟ್ಟುಕೊಂಡು ಮುಖಕ್ಕೆಲ್ಲಾ ಕರಿಬಟ್ಟೆ ಸುತ್ತಿಕೊಂಡಿರುತ್ತಿದ್ದವನು ಇವನೇನಾ ಎಂದು ಆಚ್ಚರಿಯಾಯಿತು. ಅದಕ್ಕಿಂತಲೂ ನೂರುಪಟ್ಟು ಹೆಚ್ಚಿನ ಅಚ್ಚರಿಯಾದದ್ದು ಗನ್ ಸಂನ್ಯಾಸಿಯ ನಿಜರೂಪ ತಿಳಿದಾಗ. ಭೂಗತನಾಗಿದ್ದುಕೊಂಡು ಇಡೀ ಗೆರಿಲ್ಲಾ



## ಕಾಯುತ್ತಿದ್ದಾಳೆ ಅವ್ವ

ಕಾಯುತ್ತಿದ್ದಾಳೆ ಅವ್ವ
ಬದುಕ ಕತ್ತಲು ಕಳೆದು
ಬೆಳಗಾಗುವ ಸಮಯಕ್ಕಾಗಿ
ಉದಯಿಸುವ ಸ್ವಾತಂತ್ರ್ಯ ಸೂರ್ಯನಿಗೆ
ಅಂಗಳದ ತುಂಬ
ರಂಗೋಲಿ ಹಾಕಿ
ಸ್ವಾಗತಿಸುವ ಸಂಭ್ರಮಕ್ಕಾಗಿ
ಕಾಯುತ್ತಿದ್ದಾಳೆ ಅವ್ವ
ತೆರೆದ ಕಣ್ಣಿನ ರೆಪ್ಪೆ ಬಡಿಯದೆ
ಕಾಯುತ್ತಿದ್ದಾಳೆ ಅವ್ವ
ಶಬರಿಯಂತೆ.
ಮುಂಜಾನೆಯ ರಂಗಿನಲ್ಲಿ
ಹೂವು ಅರಳಿ
ಹಕ್ಕಿ ಹಾಡುವುದನ್ನು
ನೋಡುವುದಕ್ಕಾಗಿ
ಕಾಯುತ್ತಿದ್ದಾಳೆ ಅವ್ವ
ರಂಗೋಲಿ ಬಟ್ಟಲು
ಹಿಡಿದು ಕೈಯಲ್ಲಿ.
ಕಾಲಚಕ್ರ ಉರುಳುತ್ತಲೇ ಇದೆ.

ಅವ್ವನಿಗೀಗ ಅರವತ್ತು ವರುಷ
ಕಿತ್ತು ತಿನ್ನುವ ಹಸಿವು
ನೇಣುಗಂಬದಲ್ಲಿ ನೇತಾಡುವ
ಮಕ್ಕಳ ಹೆಣಗಳ ಸಾಲು
ಹರಿದ ನೆತ್ತರು
ಇನ್ನೆಷ್ಟು ದಿನ ಈ ಗೋಳು !
ಕಣ್ಣೀರಿಡುತ್ತಿದ್ದಾಳೆ ಅವ್ವ
ಕಾಯುತ್ತಾ ಕುಳಿತು.
ಅವ್ವನಿಗೆ ಆಸೆ
ಉದಯಿಸುವ ಸೂರ್ಯನಿಗೆ
ಆರತಿ ಬೆಳಗಿ,
ಹಬ್ಬ ಮಾಡುವ ಆಸೆ.
ಹಸಿದ ಮಕ್ಕಳ ಹೊಟ್ಟೆಯ ತುಂಬ
ಊಟ ಹಾಕುವ ಆಸೆ.
ಹರಿದ ಸೀರೆಗೆ
ತೇಪೆ ಹಾಕುವ ಬದಲು
ಹೊಸ ಸೀರೆ ಉಟ್ಟು
ನಲಿಯುವ ಆಸೆಯಲಿ
ಕಾಯುತ್ತಿದ್ದಾಳೆ ಅವ್ವ
ಹೊಸ ಬದುಕಿಗಾಗಿ

ಹುಲಿಕಟ್ಟೆ ಚನ್ನಬಸಪ್ಪ
ಇ.ಡಬ್ಲ್ಯು.ಎಸ್. ೬೦, ಹುಡ್ಕೋ ಬಡಾವಣೆ, ಸಿರುಗುಪ್ಪ - ೫೮೩ ೧೨೧

ಕಾರ್ಯಾಚರಣೆಯನ್ನು ನಿರ್ದೇಶಿಸುತ್ತಿದ್ದವನು ಇವನೇ! ಇನ್ನು ಮುಂದೆ ನಮ್ಮ ಈ ಸ್ವಾತಿನಾಡಿನ ಅಧಿಕೃತ ಧಾರ್ಮಿಕ-ರಾಜಕೀಯ ನೇತಾರ! ನಮ್ಮ ಪ್ರಭು! ಅವನನ್ನೇ ಎವೆಯಿಕ್ಕದೆ ನೋಡಿದೆ.

ಗೆರಿಲ್ಲಾ ಕಮ್ಯಾಂಡರ್ ಅಷ್ಟ ದಿಕ್ಕುಗಳಿಗೂ, ಆಕಾಶಕ್ಕೂ ಗುಂಡುಹಾರಿಸಿ ಸಭೆಯನ್ನು ವಿಧ್ಯುಕ್ತವಾಗಿ ಉದ್ಘಾಟಿಸಿದ. ನಂತರ ಪ್ರಧಾನಮಂತ್ರಿಗಳ ಭಾಷಣ.

ಅವರು ಹೆಚ್ಚೇನೂ ಮಾತಾಡಲಿಲ್ಲ. ಕದನವಿರಾಮಕ್ಕೆ ಸರಕಾರ ಒಪ್ಪಿಕೊಂಡದ್ದರ ಬಗ್ಗೆ ತಗ್ಗಿದ ದನಿಯಲ್ಲಿ ಪುಟ್ಟ ವಿವರಣೆ ಕೊಟ್ಟರು, ಅಷ್ಟೆ. ಗಡಿಗಳಲ್ಲಿ ಶತ್ರುಗಳು ರಣಹದ್ದುಗಳಂತೆ ಕಾದು ಕೂತಿರುವಾಗ ನಮ್ಮ ಸೇನೆ ನಮ್ಮದೇ ಒಂದು ಪ್ರದೇಶದ ಮೇಲೆ ಯುದ್ಧನಿರತವಾಗಿರುವುದು ರಾಷ್ಟ್ರದ ಸುರಕ್ಷತೆಯ ದೃಷ್ಟಿಯಿಂದ ಸರಿಯಾದ ಬೆಳವಣಿಗೆಯಾಗಿರಲಿಲ್ಲ, ಇದನ್ನು ನಿಲುಗಡೆಗೆ ತರಬೇಕಾದ್ದು ಪ್ರಧಾನ ಮಂತ್ರಿಯಾಗಿ ತನ್ನ ಗುರುತರ ಜವಾಬ್ದಾರಿಯಾಗಿತ್ತು ಎಂದವರು ಹೇಳಿದಾಗ ನಾವೆಲ್ಲರೂ ಸಮ್ಮತಿಯಲ್ಲಿ ತಲೆಯಾಡಿಸಿದೆವು. ಗನ್ ಸಂನ್ಯಾಸಿ ಮುಗುಳ್ನಕ್ಕ. ಪ್ರಧಾನ ಮಂತ್ರಿಗಳು ಮುಂದುವರಿದು ''ಈ ಸ್ವಾತಿ ಒಪ್ಪಂದ ನಮ್ಮ ಜಾತ್ಯತೀತ ಸಂವಿಧಾನಕ್ಕೆ ಅನುಗುಣವಾಗಿಯೇ ಇದೆ. ಈ ಪ್ರದೇಶದಲ್ಲಿ ಒಂದು ಧರ್ಮಕ್ಕೆ ಪ್ರಾಧಾನ್ಯತೆ ನೀಡಿದ ಮಾತ್ರಕ್ಕೆ ಉಳಿದೆಲ್ಲಾ ಧರ್ಮಗಳನ್ನೂ ನಮ್ಮ ಸರಕಾರ ನಿರ್ಲಕ್ಷಿಸಿದೆ ಎಂದು ತಿಳಿಯಬಾರದು. ಬೇರೆಬೇರೆ ಪ್ರದೇಶಗಳಲ್ಲಿ ಬೇರೆಬೇರೆ ಧರ್ಮಗಳಿಗೆ ಅಥವಾ ಜಾತಿಗಳಿಗೆ ಪ್ರಾಧಾನ್ಯತೆ ನೀಡಿ ಎಲ್ಲ ಜಾತಿಧರ್ಮಗಳ ನಡುವೆ ಸಮತೋಲನವನ್ನು ಕಾಪಾಡುವುದಕ್ಕೆ ನಮ್ಮ ಸರಕಾರ ಬದ್ಧವಾಗಿದೆ'' ಎಂದು ಘೋಷಿಸಿ ''...ನಾವು ಈ ದಾರಿಯಲ್ಲೇ ಸಾಗಬೇಕೆಂಬುದು ವಿಧಿಲಿಖಿತ. ಈ ಐತಿಹಾಸಿಕ ಒಪ್ಪಂದದ ಮೂಲಕ ನಾವೀಗ ನಮಗೆ ಮೀಸಲಾದ ಹಾದಿಯಲ್ಲಿ ನಮ್ಮ ಪಯಣವನ್ನು ಆರಂಭಿಸಿದ್ದೇವೆ, ನಮ್ಮ ವಿಧಿಯೊಡನೆ ಮುಖಾಮುಖಿಯಾಗುತ್ತಿದ್ದೇವೆ... ಈ ಮುಖಾಮುಖಿಗೆ ಇಂಗ್ಲಿಷಿನಲ್ಲಿ ಅದೇನೋ ಒಂದು ಚಂದದ ಮಾತಿದೆ. ನಂಗೆ ನೆನಪಿಗೇ ಬರವಲ್ದು. ವಯಸ್ಸಾಯ್ತು ನೋಡಿ'' ಎಂದು ಪೇಚಾಡಿಕೊಂಡರು. ತಕ್ಷಣ ಸ್ವಯಂಸೇವಕರು ಎಳೆದುತಂದು ನನ್ನ ಹಿಂದಿನ ಸಾಲಿನಲ್ಲಿ ಕೂರಿಸಿದ್ದ ಯುವಕ ಎದ್ದುನಿಂತು ''ಟ್ರೈಸ್ಟ್ ವಿತ್ ಡೆಸ್ಟಿನಿ'' ಅಂತ ನಮ್ಮ ಮುತ್ತಾತ ಹೇಳಿದ್ರು ಎಂದು ಕೂಗಿ ಹೇಳಿದ. ಪ್ರಧಾನಮಂತ್ರಿಗಳು ''ಹ್ಞಾ ಹ್ಞಾ ಅದೇ. ಸರಿಯಾದ ಸಮಯದಲ್ಲಿ ನೆನಪು ಮಾಡಿಕೊಟ್ಟೆ. ಥ್ಯಾಂಕ್ ಯೂ ಯಂಗ್ ಮ್ಯಾನ್. ಹಾಗೇ ನಿಮ್ಮ ಮುತ್ತಾತಂಗೂ, ನಿಮ್ಮ ಇಡೀ ಖಾನ್‌ದಾನ್‌ಗೂ ಥ್ಯಾಂಕ್ಸ್'' ಅಂದರು ಮೆಚ್ಚಿಕೆಯಿಂದ.

''ಈಗ ತಮ್ಮ ಅಧ್ಯಕ್ಷ ಭಾಷಣವನ್ನು ನೀಡುವಂತೆ ಹಿರಿಯ ಧರ್ಮಗುರುಗಳನ್ನು ವಿನಂತಿಸಿಕೊಳ್ಳುತ್ತೇನೆ'' ಅಂದರು ಗೃಹಮಂತ್ರಿ. ಗನ್ ಸಂನ್ಯಾಸಿ ನಿಧಾನವಾಗಿ ಎದ್ದು ಎಡಗೈಯಲ್ಲಿ ಗನ್ ಹಿಡಿದಂತೇ ಪೋಡಿಯಂನತ್ತ ನಡೆದ. ಒಮ್ಮೆ ನಸುಕೆಮ್ಮಿ ಭಾಷಣ ಆರಂಭಿಸಿದ. ''ನನ್ನ ಧರ್ಮಬಾಂಧವರೇ!''

ಶಸ್ತ್ರಚಿಕಿತ್ಸಕನ ಕತ್ತಿನ ಅಲುಗಿನಂತೆ ಹರಿತವಾದ, ನಿಖರವಾದ, ತಣ್ಣನೆಯ ನಿರ್ಭಾವುಕ ದನಿ ಅದು. ಯಾವುದೋ ಪುರಾತನ ಮಂತ್ರವನ್ನು ಉಚ್ಚರಿಸುತ್ತಿರುವಂತೆ ರಾಗವಾಗಿ ಮಾತುಗಳು ಹರಿದುಬಂದವು.

''ಇದು ಪುರಾತನ ನಾಡು, ಧರ್ಮಭೀರುಗಳ ಬೀಡು. ಹಿಂದೆ ಇಲ್ಲಿ ನಮ್ಮದೇ ಆಡಳಿತವಿತ್ತು, ಆಗ ಧರ್ಮವಿಲ್ಲಿ ನಾಲ್ಕು ಕಾಲುಗಳಲ್ಲಿ ನಡೆಯುತ್ತಿತ್ತು. ಆಮೇಲೆ ಆ ಪರಂಗಿಯವರು ಬಂದಾಗ ಅದು ಮೂರು ಕಾಲುಗಳಲ್ಲಿ ನಡೆಯತೊಡಗಿತು. ನಂತರದ ಪ್ರಜಾಪ್ರಭುತ್ವದ ಮುಖವಾಡ ತೊಟ್ಟ ಭ್ರಷ್ಟಾಚಾರದ ದಿನಗಳಲ್ಲಿ ಅದು ಎರಡೇ ಕಾಲುಗಳಲ್ಲಿ ನಡೆಯುತ್ತಿತ್ತು. ಈಗಂತೂ ಈ ಸೆಕ್ಯೂಲರಿಸ್ಟರ ಹಾವಳಿ ವಿಪರೀತವಾಗಿ ಧರ್ಮ ಒಂದೇ ಕಾಲಿನಲ್ಲಿ ನಡೆಯುವ ದುರ್ಗತಿಗೀಡಾಗಿದೆ. ಧರ್ಮವನ್ನು ಮತ್ತೆ ನಾಲ್ಕು ಕಾಲುಗಳಲ್ಲಿ ನಡೆಯುವಂತೆ ಮಾಡುವ ಪರಮೋದ್ದೇಶದಿಂದ ನಾವು ಆಯುಧಗಳನ್ನು ಕೈಗೆತ್ತಿಕೊಂಡೆವು.

''ನಮ್ಮ ಸಮರ ಪ್ರಜೆಗಳ ವಿರುದ್ಧವಲ್ಲ, ಪ್ರಜಾಪ್ರಭುತ್ವದ ವಿರುದ್ಧವೂ ಅಲ್ಲ, ಧರ್ಮಕ್ಕೂ ತನಗೂ ಸಂಬಂಧವಿಲ್ಲ ಎಂದು ಹೇಳುವ ಸರಕಾರದ ಧೋರಣೆಯ ವಿರುದ್ಧ ಅಷ್ಟೆ. ಯಾಕೆಂದರೆ ಧರ್ಮ ಮತ್ತು ರಾಜಕಾರಣ ಬೇರೆಬೇರೆ ಎಂದು ವಾದಿಸುವುದು ನಮ್ಮ ಧರ್ಮದ ಮೌಲ್ಯಗಳಿಗೆ ಸಂಪೂರ್ಣ ವಿರುದ್ಧವಾಗಿದೆ. ವಾಸ್ತವವಾಗಿ ಧರ್ಮ ಹಾಗೂ ರಾಜಕಾರಣಗಳೆರಡಕ್ಕೂ ಅವಿನಾಭಾವ ಸಂಬಂಧವಿದೆ. ಅವು ಒಂದಕ್ಕೊಂದು ಪೂರಕವಾಗಿವೆ. ಎರಡರ ಅಸ್ತಿತ್ವಗಳೂ ಬೇರ್ಪಡಿಸಲಾಗದಷ್ಟು ನಿಕಟವಾಗಿ ಬೆಸೆದುಕೊಂಡಿವೆ. ಧರ್ಮವೆಂಬುದು ಅಮೃತ, ಅದನ್ನು ತುಂಬಿಸಿಟ್ಟಿರುವ ಕಲಶವೇ ಸರಕಾರ. ಸರಕಾರವಿಲ್ಲದೆ ಧರ್ಮಕ್ಕೆ ನಿಲ್ಲಲು ನೆಲೆಯಿಲ್ಲ, ಧರ್ಮವಿಲ್ಲದ ಸರಕಾರ ಖಾಲಿ ಖಾಲಿ, ವ್ಯರ್ಥ. ಸರಕಾರವೆಂಬ ಕಲಶದಲ್ಲಿರುವ ಧರ್ಮವೆಂಬ ಅಮೃತವನ್ನು ಜನತೆಗೆ ಹಂಚುವುದೇ ಸೇನೆಯ ಕರ್ತವ್ಯ. ಇದು ದೈವವಾಣಿ, ಕಟ್ಟಳೆ. ಈ ಕಟ್ಟಳೆಗೆ ವಿರುದ್ಧವಾಗಿ ನಡೆದುಕೊಂಡು ಧರ್ಮದ ಜತೆ ತನಗೂ ತನ್ನ ಸೇನೆಗೂ ಯಾವುದೇ ಸಂಬಂಧವಿಲ್ಲ ಎಂದು ಅನೀತಿಯ, ಅಧಾರ್ಮಿಕ, ಅವಾಸ್ತವ ನಿಲುವು ತಳೆದ ಸರಕಾರದ ವಿರುದ್ಧ ಶಸ್ತ್ರವೆತ್ತಲೇಬೇಕು ಎಂದು ನಮ್ಮ ಧರ್ಮಗ್ರಂಥಗಳು ಕರೆ ನೀಡುತ್ತವೆ. ಆ ಕರೆಗೆ ನಾವು ಓಗೊಟ್ಟೆವು.



... ಏನ್ರೀ ಇದು ಆಶ್ಚರ್ಯ ಮೇಡಂ...! ನಿಂ ವಯಸ್ಸು 'ಮೂವತ್ತ ಮೂರು...!! ಮಹಿಳಾ ಮೀಸಲಾತಿಯ ಶೇಕಡ ಮೂವತ್ತಮೂರು...!!!

''ನಮ್ಮ ಸಮರಕ್ಕೆ ಜಯ ದೊರೆತಿದೆ. ನೂರಾರು ವರ್ಷಗಳ ನಂತರ ಇಲ್ಲಿ ಧರ್ಮ ಮತ್ತೆ ನಾಲ್ಕು ಕಾಲುಗಳಲ್ಲಿ ನಡೆಯತೊಡಗಿದೆ. ಧರ್ಮವೆಂಬ ಅಮೃತವನ್ನು ತುಂಬಿಕೊಂಡ ಕಲಶವಾಗಿ ನನ್ನ ಸರಕಾರ ಇಂದು ಅಸ್ತಿತ್ವಕ್ಕೆ ಬಂದಿದೆ. ಧರ್ಮದ ಅಮೃತವನ್ನು ನಿಮಗೆಲ್ಲರಿಗೂ ಹಂಚುವ ಕರ್ತವ್ಯವನ್ನು ಸೇನೆ ಈಗಿಂದೀಗಲೇ ಆರಂಭಿಸುತ್ತಿದೆ. ನಮ್ಮ ಮಿಲಿಟರಿ ಕಮ್ಯಾಂಡರ್ ಈ ಪುಣ್ಯಕಾರ್ಯಕ್ಕೆ ಕಂಕಣಬದ್ಧರಾಗಿದ್ದಾರೆ. ಎಲ್ಲವೂ ನಮ್ಮ ಧರ್ಮದ ವಿಧಿಗಳಿಗನುಗುಣವಾಗಿಯೇ ನೆರವೇರುತ್ತವೆ. ಆ ವಿಧಿಗಳ ಮೊದಲ ನಿಯಮದಂತೆ ಇಲ್ಲಿ ನೀವು ಒಂದು ಸಾವಿರದ ಎಂಬತ್ತಾರು ಮಂದಿ ಸೇರಿದ್ದೀರಿ. ಐನೂರ ನಲವತ್ತಮೂರು ಪುರುಷರು, ಅಷ್ಟೇ ಸಂಖ್ಯೆಯ ಸ್ತ್ರೀಯರು. ನಮ್ಮ ಧರ್ಮದಲ್ಲಿ ಸ್ತ್ರೀಗೆ ಸರಿಸಮಾನ ಸ್ಥಾನವಿದೆ, ಅಧಿಕಾರವಿದೆ.

''ನಮ್ಮ ಶಾಸನಸಭೆಯನ್ನು ರಚಿಸುವ ಜವಾಬ್ದಾರಿ ನಿಮ್ಮ ಮೇಲಿದೆ. ನಮ್ಮ ಸಂವಿಧಾನದ ಪ್ರಕಾರ ಶಾಸನಸಭೆಯಲ್ಲಿ ಐನೂರ ನಲವತ್ತೈದು ಸದಸ್ಯರಿರುತ್ತಾರೆ. ಅವರಲ್ಲಿ ಇಬ್ಬರನ್ನು ನಾಮಿನೇಟ್ ಮಾಡುವ ಅಧಿಕಾರವನ್ನು ಸಂವಿಧಾನವು ಅಧ್ಯಕ್ಷನಾದ ನನಗೆ ನೀಡಿದೆ. ಉಳಿದ ಐನೂರ ನಲವತ್ತಮೂರು ಸದಸ್ಯರನ್ನು ಶಾಸನಸಭೆಗೆ ನೀಡುವ ಪೂರ್ಣ ಅಧಿಕಾರ ಹಾಗೂ ಗುರುತರ ಜವಾಬ್ದಾರಿ ಇಲ್ಲಿ ನೆರೆದಿರುವ ಸಾವಿರದ ಎಂಬತ್ತಾರು ಘನಪ್ರಜೆಗಳಾದ ನಿಮ್ಮದು. ನಮ್ಮ ಧರ್ಮ ಪ್ರಜಾಪ್ರಭುತ್ವದ ಭದ್ರ ಬುನಾದಿಯ ಮೇಲೆ ನಿಂತಿದೆ.''

ಮಾತು ನಿಲ್ಲಿಸಿ ನೀರಿನ ಲೋಟವನ್ನು ಕೈಗೆತ್ತಿಕೊಂಡ.

''ಅಂದರೆ ನಮ್ಮಲ್ಲಿ ಸರಿಯಾಗಿ ಅರ್ಧದಷ್ಟು ಜನ ಶಾಸನಸಭೆಗೆ ಚುನಾಯಿತರಾಗುತ್ತಾರೆ. ಉಳಿದರ್ಧ ಮನೆಗೆ, ಬಂದ ದಾರಿಗೆ ಸುಂಕ ಇಲ್ಲ ಅನ್ನೋ ಹಾಗೆ'' ಗೆಳೆಯನ ಹೆಂಡತಿಯ ಕಿವಿಯಲ್ಲಿ ಪಿಸುಗುಟ್ಟಿದೆ. ಅವಳು ನಿಶ್ಶಬ್ದವಾಗಿ ನಕ್ಕಳು. ''ಅದೆಂಥಾ ಶಾಸನಸಭೆಯೋ. ನೀವೇ ಹೋಗೀಪ್ಪಾ ಅಲ್ಲಿಗೆ. ನಾನಂತೂ ಮನೆಗೆ ಹೋಗ್ತೀನಿ. ಮಕ್ಕಳು ಕಾಯ್ತಾ ಇರ್ತಾರೆ. ಇವರಂತೂ ಗಾಬರಿಯಾಗಿಬಿಟ್ಟಿರಬೇಕು.''

''ಗಮನವಿಟ್ಟು ಕೇಳಿ'' ಗನ್ ಸನ್ಯಾಸಿಯ ದನಿ ಮತ್ತೆ ಮೊಳಗಿತು. ''ಇನ್ನು ಸರಿಯಾಗಿ ಏಳು ನಿಮಿಷಗಳಿಗೆ ಮಾನವ ಇತಿಹಾಸದ ಒಂದು ಅಪೂರ್ವ ಗಳಿಗೆ ಆರಂಭವಾಗುತ್ತದೆ ಎಂದು ನಮ್ಮ ಧರ್ಮಗ್ರಂಥಗಳಲ್ಲಿ ಲಿಖಿತವಾಗಿದೆ. ಯುಗಕ್ಕೊಮ್ಮೆ ಬರುವ ಮಹಾನ್ ಪುಣ್ಯಕಾಲ ಇದು. ಈ ಗಳಿಗೆಯಲ್ಲಿ ಆರಂಭವಾದ ಯಾವುದೇ ಕೆಲಸ ಕಾರ್ಯ ಅನೂಚಾನವಾಗಿ ಮುಂದುವರಿಯುತ್ತದೆ. ಒಂದೂವರೆ ಗಂಟೆಗಳವರೆಗೆ ಸಾಗುವ ಈ ಪುಣ್ಯಕಾಲದಲ್ಲಿ ಶಾಸನಸಭೆಯ ಬೀಜಾಂಕುರವಾಗಬೇಕು. ಧರ್ಮದ ವಿಧಿವಿಧಾನಗಳಂತೆಯೇ ಆಯ್ಕೆಯಾಗಿ ಇಲ್ಲಿ ನೆರೆದಿರುವ ನೀವುಗಳು, ಐನೂರ ನಲವತ್ತಮೂರು ಜೋಡಿಗಳು ಶಾಸನಸಭೆಯ ಬೀಜಾಂಕುರಕಾರ್ಯವನ್ನು ಸಾಂಗವಾಗಿ ನೆರವೇರಿಸಬೇಕು.''

''ಅದೇನು ಹೇಳ್ತಿದಾನೆ? ನಂಗೊಂದೂ ಅರ್ಥ ಆಗ್ತಿಲ್ಲ'' ಎಂದು ಕಿವಿಯಲ್ಲಿ ಪಿಸುಗುಟ್ಟಿದಳು ಗೆಳೆಯನ ಹೆಂಡತಿ. ''ನಂಗೂ ಅರ್ಥ ಆಗ್ತಾ ಇಲ್ಲ'' ಅಂದೆ. ''ಗಲಾಟೆ

ಮಾಡಬೇಡಿ. ತೆಪ್ಪಗೆ ಕೇಳಿಸ್ಕಳ್ರೀ, ಅರ್ಥ ಆಗುತ್ತೆ'' ಗೌರ್ಮೆಂಟಣ್ಣನ ಹೆಂಡತಿ ನನ್ನ ಸೊಂಟ ತಿವಿದಳು.

ಗನ್ ಸನ್ಯಾಸಿ ಹೇಳುತ್ತಿದ್ದ :

''ಪುಣ್ಯಕಾಲಕ್ಕೆ ಇನ್ನು ಮೂರೇ ನಿಮಿಷಗಳಿವೆ. ನಾನೀಗ ನನ್ನ ಬಲಗೈ ಮೇಲೆತ್ತುತ್ತೇನೆ. ನಿಮ್ಮೆಲ್ಲರ ವಸ್ತ್ರಗಳು ನಿಮ್ಮ ಮೈಮೇಲಿಂದ ತಾವಾಗಿಯೇ ಕಳಚಿಕೊಂಡು ನನ್ನತ್ತ ಹಾರಿಬರುತ್ತವೆ.'' ಅವನು ಬಲಗೈ ಮೇಲೆತ್ತಿದ.

ಏನಾಗುತ್ತಿದೆಯೆಂದು ನನ್ನ ಅರಿವಿಗೆ ಬರುವಷ್ಟರಲ್ಲಿ ನನ್ನ ಪ್ಯಾಂಟು, ಶರಟು, ಒಳಚಡ್ಡಿ ಬನಿಯನ್‌ಗಳೆಲ್ಲವೂ ತಾವಾಗಿಯೇ ಕಳಚಿಕೊಂಡು ವೇದಿಕೆಯತ್ತ ಸಾಲುಗಟ್ಟಿ ಹಾರ ತೊಡಗಿದವು. ''ಅಯ್ಯಯ್ಯೋ'' ಎನ್ನುತ್ತಾ ಗಾಬರಿಯಲ್ಲಿ ಹಿಡಿಯಲು ಹೋದರೆ ಬೆರಳು ಗಳಿಗೆ ಅವುಗಳ ಸ್ಪರ್ಶದ ಅನುಭವವೇ ಆಗುತ್ತಿರಲಿಲ್ಲ. ಪಕ್ಕ ತಿರುಗಿದರೆ ಗೆಳೆಯನ ಹೆಂಡತಿಯ ಸೀರೆ ಈರುಳ್ಳಿಯ ಸಿಪ್ಪೆ ಬಿಡಿಸಿದಂತೆ ಸುಲಿದುಕೊಳ್ಳುತ್ತಿತ್ತು. ಅವಳು ''ಅಯ್ಯೋ ಅಯ್ಯಯ್ಯೋ ದೇವ್ರೇ, ಅದನ್ನ ಹಿಡಕೊಳ್ರೀ, ಪ್ಲೀಸ್ ಹಿಡಕೊಳ್ಳಿ ಸಾರ್'' ಎಂದು ಕೂಗುತ್ತಾ ಹಿಡಿಯಲು ಹೆಣಗುತ್ತಿದ್ದಳು. ಅದು ಅವಳ ಬೆರಳುಗಳ ನಡುವಿಂದ ನುಸುಳಿ ಜಾರಿ ಹೋಗುತ್ತಿತ್ತು. ಸೀರೆಯ ಹಿಂದೆಯೇ ಲಂಗ...

ದಿಕ್ಕೆಟ್ಟು ಸುತ್ತಲೂ ನೋಡಿದರೆ ಎಲ್ಲರದೂ ಅದೇ ಗತಿ. ಎಲ್ಲರ ಬಟ್ಟೆಗಳೂ ಮೇಲೆದ್ದು ಒಂದರ ಹಿಂದೊಂದು ಅಂಟಿಕೊಂಡು ನೀಳ ಸಾಲಾಗಿ ಸಾಗಿ ಗನ್ ಸನ್ಯಾಸಿಯ ಎತ್ತಿ ಹಿಡಿದ ಬಲಅಂಗೈಯಲ್ಲಿ ಕರಗಿಹೋಗುತ್ತಿದ್ದವು.

ಅರೆಕ್ಷಣದಲ್ಲಿ ಇಡೀ ಜನಸಮೂಹ ಬಟಾಬೆತ್ತಲೆ. ಎಲ್ಲರೂ ಗಾಬರಿಯಲ್ಲಿ ಅಳುತ್ತಾ ಅರಚಾಡುತ್ತಾ ಮಾನ ಮುಚ್ಚಿಕೊಳ್ಳಲೆಂದು ಗಕ್ಕನೆ ನಡು ಬಾಗಿಸಿಕೊಂಡು ಮಂಡಿಗಳ ಮೇಲೆ ತಲೆಯಿಟ್ಟುಕೊಂಡುಬಿಟ್ಟರು. ಗೆಳೆಯನ ಹೆಂಡತಿಯೂ ಮುದುರಿ ಹೋಗಿದ್ದಳು. ನಾನೂ ಮುದುರಿಕೊಂಡೆ. ಎಲ್ಲ ಸದ್ದನ್ನೂ ಮೀರಿ ಗನ್ ಸನ್ಯಾಸಿಯ ದನಿ ಮತ್ತೆ ಮೊಳಗಿತು :

''ನೀವು ಐನೂರ ನಲವತ್ತಮೂರು ಜೋಡಿಗಳ ಆಯ್ಕೆಯೂ ನಮ್ಮ ಧರ್ಮ ಗ್ರಂಥಗಳಿಗನುಗುಣವಾಗಿಯೇ ನಡೆದಿದೆ ಎಂದು ಈಗಾಗಲೇ ಹೇಳಿದ್ದೇನೆ. ನಾನೀಗ ನನ್ನ ಎಡಗೈಯನ್ನು ಮೇಲೆತ್ತುತ್ತೇನೆ. ನಿಮ್ಮದೇ ವಸ್ತ್ರಗಳು ನನ್ನ ಎಡಅಂಗೈಯಿಂದ ಹೊರಟುಬಂದು ಒಂದೊಂದು ಜೋಡಿಯ ಸುತ್ತಲೂ ಗೋಡೆಗಳಾಗಿ ನಿಲ್ಲುತ್ತವೆ. ಅಗತ್ಯವಾದ ಖಾಸಗೀತನ ನಿಮಗೆ ದೊರೆಯುತ್ತದೆ. ದೈವನಿಯಮದಂತೆ ನಿರ್ಯೋಚನೆಯಿಂದ, ನಿರ್ವಂಚನೆಯಿಂದ ಸೃಷ್ಟಿಕಾರ್ಯದಲ್ಲಿ ತೊಡಗಿ. ಹೊಚ್ಚಹೊಸ ಶಾಸನಸಭೆಯ ಅಸ್ತಿತ್ವಕ್ಕೆ ನಾಂದಿ ಹಾಡಿ.''

ಗೆಳೆಯನ ಹೆಂಡತಿ ನನ್ನ ಕೈ ಹಿಡಿದುಕೊಂಡಳು. ''ಸಾರ್, ನೀವೇ ನನ್ ಜೊತೆ ಇರ್ರೀ. ನಿಮ್ ದಮ್ಮಯ್ಯಾ. ನಂಗೆ ಭಯವಾಗುತ್ತೆ ಕಣಣ್ಣಾ'' ಎನ್ನುತ್ತಾ ದನಿಯೆತ್ತಿ ಅಳತೊಡಗಿದಳು. ಅವಳಿಗೆ ಭಯವಾಗುತ್ತಿದ್ದರೆ, ನನಗೆ ತಲೆಕೆಟ್ಟುಹೋಗುತ್ತಿತ್ತು. ಹೇಗೋ ಸಾವರಿಸಿಕೊಂಡು ''ನಿಮಗೇನೂ ಆಗಲ್ಲ, ಹೆದರಬೇಡಿ, ನಾನಿದ್ದೀನಿ'' ಎನ್ನುತ್ತಾ ಅವಳ ಬೆನ್ನು ಸವರಿದೆ. ಬೆತ್ತಲೆ ಬೆನ್ನು ಕೈಗೆ ತಾಗಿದೊಡನೆ ಹೇಳಲಾಗದ ಮುಜುಗರವಾಗಿ, ಮರುಕ್ಷಣ ನನ್ನದೇ ನಗ್ನತೆ ಮತ್ತೊಮ್ಮೆ ಅರಿವಿಗೆ ರಾಚಿ ಕೈಯನ್ನು ಗಕ್ಕನೆ ಹಿಂತೆಗೆದು ನನ್ನ ಮಾನ ಮುಚ್ಚಿಕೊಳ್ಳುತ್ತಿದ್ದಂತೆ ಕಾಲ ಬಳಿ ಮೊಬೈಲ್ ಫೋನ್ ಸದ್ದು ಕೇಳಿಸಿತು. ಶರಟು ಹಾರಿಹೋಗುವಾಗ ಅದು ಕೆಳಗೆ ಬಿದ್ದುಹೋಗಿತ್ತೇನೋ. ಕೈ ಯಾಂತ್ರೀಕೃತವಾಗಿ ಛಕ್ಕನೆ ಅತ್ತ ಸರಿಯಿತು.

''ರೀ ರೀ ! ಕೇಳಿಸ್ತಿದೆಯಾ ?'' ಲಲಿತೆ ಗಾಬರಿಯಲ್ಲಿ ಕೂಗುತ್ತಿದ್ದಳು. ''ಹ್ಞೂ'' ಅಂದೆ.

''ರೀ, ಅಲ್ಲಿ ಅದೇನೋ ಸಭೆ ನಡೆಸ್ತಾರಂತಲ್ಲ? ನೀವು ಅಲ್ಲಿಗೆ ಒಬ್ರೇ ಹೋಗಬೇಡ್ರೀ. ನಿಮಗೆ ಕೈ ಮುಗೀತೀನಿ. ಇನ್ನು ಹತ್ತು ನಿಮಿಷ ಕಾಯ್ರೀ. ನಾನು ಬಂದುಬಿಡ್ತೀನಿ.'' ಅವಳು ಏದುಸಿರು ಹಾಕುತ್ತಿದ್ದಳು.

''ನಾನೀಗ ಆ ಸಭೆಯಲ್ಲೇ ಇದ್ದೀನಿ.'' ಪ್ರಯಾಸಪಟ್ಟು ದನಿ ಹೊರಡಿಸಿದೆ. ''ಅಯ್ಯೋ, ಕೆಟ್ಟೆನಲ್ಲಾ ದೇವ್ರೇ...'' ಅವಳು ಹೃದಯವಿದ್ರಾವಕವಾಗಿ ಚೀರಿದಳು. ಛಟ್ಟನೆ ಫೋನ್ ಸಂಪರ್ಕ ಕತ್ತರಿಸಿಹೋಯಿತು.

ಹುಚ್ಚು ಹಿಡಿದವನಂತೆ ಆತುರಾತುರವಾಗಿ ಅಂಕೆಗಳನ್ನು ಒತ್ತಿದೆ. ಸಂಪರ್ಕ ಸಿಗಲಿಲ್ಲ. ಇನ್ನೊಮ್ಮೆ... ಮತ್ತೊಮ್ಮೆ... ''ಅಯ್ಯಮ್ಮಾ !'' ಎಡದಲ್ಲಿ ಯಾರೋ ಚೀರಿದರು. ಥಟ್ಟನೆ ಅತ್ತ ತಿರುಗಿದೆ.

ಗೆಳೆಯನ ಹೆಂಡತಿ ಕಾಣಲಿಲ್ಲ. ಅಲ್ಲೊಂದು ಗೋಡೆ ಎದ್ದುನಿಂತಿತ್ತು. ಅದರಾಚೆ ಅವಳು ಮತ್ತೊಮ್ಮೆ ಚೀರಿದಳು. ''ಅಯ್, ತಿರುಗೇ ಇತ್ಲಾಗೆ.'' ರೌಡಿ ಗದುರುತ್ತಿದ್ದ.

ಗಾಬರಿಗೊಂಡು ಇತ್ತ ಹೊರಳಿದರೆ ಗೌರ್ಮೆಂಟಣ್ಣನ ಹೆಂಡತಿ ನನ್ನನ್ನೇ ನೇರವಾಗಿ ನೋಡುತ್ತಿದ್ದಳು. ನಮ್ಮಿಬ್ಬರ ಸುತ್ತಲೂ ಎತ್ತರದ ಗೋಡೆ ಎದ್ದುನಿಂತಿತ್ತು.

ದಿಕ್ಕೆಟ್ಟು ಸುತ್ತಲೂ ತಲೆ ಒದರಾಡಿಸಿದೆ.

ಎಡಭಾಗದಿಂದ ಈಗ ಯಾವ ಶಬ್ದವೂ ಬರುತ್ತಿರಲಿಲ್ಲ. ಬೆನ್ನ ಹಿಂದಿನ ಗೋಡೆಯಾಚೆ ಆ ಚಂದದ ಚಿಗುರು ಮೀಸೆಯ ಯುವಕ ''ಮಮ್ಮೀ, ನಂಗೆ ಸ್ವಲ್ಪ ಇಂಪಾರ್ಟೆಂಟ್ ಕೆಲ್ಸ ಇದೆ. ನಾನು ಮನೇಗೆ ಬರೋದು ಇನ್ನೂ ಒಂದೂವರೆ ಗಂಟೆ ಆಗುತ್ತೆ'' ಎಂದು ಫೋನ್‌ನಲ್ಲಿ ಹೇಳುತ್ತಿದ್ದ.

ಸುಶ್ರಾವ್ಯವಾದ ಸಂಗೀತದಂಥ ದನಿ ಬಲದಿಂದ ಕೇಳಿಬರುತ್ತಿತ್ತು. ''ನಿನ್ನಂಥವನಿಗೆ ಅಂತಲೇ ಮೀಸಲಾಗಿದ್ದೋಳು ನಾನು. ಈ ಗಳಿಗೆಗಾಗಿ ನಾನು ಅದೆಷ್ಟು ದಿನಗಳಿಂದ ಕಾಯ್ತಾ ಇದ್ದೆ ಗೊತ್ತಾ ?''

ಅಂಥಾ ಚಂದದ ದನಿ ಆ ಅಪ್ಸರೆಯಂಥ ಸುಂದರಿಯದೇ ಇರಬೇಕು. ಅದರಲ್ಲಿ ಅನುಮಾನವೇ ಇಲ್ಲ. ಮತ್ತೆ ಮತ್ತೆ ಕೇಳಬೇಕೆನಿಸುವಂಥ ದನಿ. ಇಡೀ ಪ್ರಸಂಗದ ದಾರುಣತೆಯನ್ನು ಸಹನೀಯಗೊಳಿಸುವಂಥ, ಮರೆಸಿಬಿಡುವಂಥ ದೈವಿಕ ದನಿ. ಅದು ಮುಂದುವರಿಯಿತು : ''ಇದೇನು ತಲೇಲಿ ಎರಡು ಬುಗುಟೆಗಳು ! ಒಂದೇನೋ ಇಲ್ಲೇ ಆದದ್ದು, ಆ ಸ್ವಯಂಸೇವಕರು ಮೊಟಕಿದಾಗ, ಇನ್ನೊಂದು ?''

''ಭಾಳಾ ಹಳೇ ಬುಗುಟೆ ಅದು. ನನ್ ಹೆಂಡ್ತಿ ಹೊಡೆದುಬಿಟ್ಟದ್ದು, ತೆಂಗಿನಕಾಯಿಂದ'' ಗೌರ್ಮೆಂಟಣ್ಣ ಸಣ್ಣಗೆ ಮುಲುಗಿದ.

ಕಣ್ಣು ಮುಚ್ಚಿದೆ. ಹಲವಾರು ಹೆಂಗಸರು ಅಳುವುದು ಕೇಳಿಸಿತು. ಅವರೆಲ್ಲರ ನಡುವೆ ಒಂದು ಗಂಡು ದನಿ. ಅದು ಸುಂದರಿಯ ಆಚೆ ಕಡೆ ಇದ್ದ ಗಡ್ಡದವನದು ಎಂದು ಗುರುತು ಹತ್ತಿತು. ಅವನು ಕಲ್ಲು ನೀರು ಕರಗುವಂತೆ ರೋದಿಸುತ್ತಿದ್ದ. ಆ ರೋದನದಲ್ಲಿ ಎಲ್ಲವನ್ನೂ ಕಳೆದುಕೊಂಡ ದುರಂತವಿತ್ತು, ಬದುಕೇ ಬರಿದಾಗಿಹೋದ ದಾರುಣತೆ ಇತ್ತು. ಅದು ನನ್ನೆದೆಯೊಳಗೇ ಬುಗ್ಗೆಯಾಗಿ ಉಕ್ಕುಕ್ಕಿ ಹೊರಚಿಮ್ಮುತ್ತಿದೆಯೆನಿಸಿ ಭಯವಾಗಿ ಕಣ್ಣು ತೆರೆದೆ. ಗೌರ್ಮೆಂಟಣ್ಣನ ಹೆಂಡತಿ ಎದೆ ಮುಚ್ಚಿಕೊಂಡಿದ್ದ ಕೈಗಳನ್ನು ತೆಗೆದು ಅತ್ತ ಒಂದು ಇತ್ತ ಒಂದು ಒಗೆದಳು. ಬಾಯಿಯನ್ನು ಕಿತ್ತುಹೋಗುವಷ್ಟು ಅಗಲವಾಗಿ ತೆರೆದು ಆಕಳಿಸಿದಳು. ಎಡತೊಡೆಯ ಮೇಲಿದ್ದ ಹಳೆಯ ಗಾಯದ ಕಲೆಯನ್ನು ಸವರಿಕೊಂಡಳು. ನಾಲ್ಕು ಹಲ್ಲುಗಳು ಆಳವಾಗಿ ಇಳಿದಿದ್ದ ಹಳ್ಳದಲ್ಲಿ ಬೆರಳಾಡಿಸುತ್ತಾ ಸಣ್ಣಗೆ ದನಿ ತೆಗೆದಳು : ''ಅನ್ಯಾಯಕಾರ, ಇಡೀ ಒಂದ್ ಕೇಜಿ ಮಾಂಸಾನೇ ಕಿತ್ಕಂಡ್‌ಬುಟ್ಟ ! ಅದೆಷ್ಟು ಜನ್ಮದಿಂದ ಬಾಡು ಕಂಡಿರಲಿಲ್ಲೋ, ರಾಕ್ಷಸ ವಂಶದೋನು.''

ನೋಟವನ್ನು ಪಕ್ಕಕ್ಕೆ ಸರಿಸಿದೆ. ಅವಳ ಚೀಲ ಅಲ್ಲೇ ಗೋಡೆಗೊರಗಿ ಕೂತಿತ್ತು. ಅದರತ್ತ ನನ್ನ ನೋಟ ಬಿದ್ದೊಡನೆ ಅವಳು ಸಣ್ಣಗೆ ನಕ್ಕಳು. ''ತೆಂಗಿನಕಾಯಿ ! ತಿಪಟೂರಿಂದು. ಮಾರ್ಕೆಟ್ ಕಡೆಯಿಂದಾನೇ ಬಂದೆ. ಬಲಿತ ಕಾಯಿ, ಈಗತಾನೆ ಹೊಸಾ ಲಾಟ್ ಬಂತು ಅಂದ ಅಂಗಡಿಯವ. ಇರಲಿ, ಬೇಕಾಗುತ್ತೆ ಅಂತ ಒಂದ್ ಹತ್ತು ತಗಂಬುಟ್ಟೆ.''

ಹತಾಶೆಯಲ್ಲಿ ತಲೆಯೆತ್ತಿದೆ.

ಸುತ್ತಲಿನ ಗೋಡೆ ಅಗಾಧ ಎತ್ತರಕ್ಕೆ ಎದ್ದುನಿಂತಿತ್ತು. ನೀರಿಲ್ಲದ ಬಾವಿಯಂತೆ... ಮೇಲೆ ಅದೆಷ್ಟೋ ಎತ್ತರದಲ್ಲಿ ಒಂದು ನಾಕಾಣೆಯಗಲದಷ್ಟು ಆಕಾಶ.

ಕಾಣದ ಕಾಲೊಂದು ನನ್ನನ್ನು ಪಾತಾಳಕ್ಕೆ ತುಳಿದುಬಿಟ್ಟಿತ್ತು.



ಎಲ್. ಪ್ರೇಮಶೇಖರ
ನಂ. ೭೩, ಎಸ್‌ಬಿಐ ಆಫೀಸರ್ಸ್ ಫ್ಲ್ಯಾಟ್ಸ್
'ಜೆ' ಬ್ಲಾಕ್, ಈಸ್ಟ್ ಆಫ್ ಕೈಲಾಶ್
ನವದೆಹಲಿ - ೧೧೦ ೦೬೫

ಅದೇ ಮುಂಜಾನೆ – ಅದೇ ಸಂಜೆ. ಮುಂಜಾನೆಯಾದರೆ ಸಂಜೆಯ ನಿರೀಕ್ಷೆ. ಸಂಜೆಯಾದರೆ ಮುಂಜಾನೆಯ ಪ್ರತೀಕ್ಷೆ. ಈ ನಿರೀಕ್ಷೆ-ಪ್ರತೀಕ್ಷೆಗಳಲ್ಲಿಯೇ ಕಳೆದುಹೋಯಿತು ಕಳೆದ ನನ್ನ ಹತ್ತು ವರ್ಷಗಳ ವಿಶ್ರಾಂತ ಜೀವನ. ಮುಂಜಾನೆಯಲ್ಲಿದ್ದ ನನ್ನ ಬಾಲ್ಯದ ದಿನಗಳಲ್ಲಿ ಕಂಡಿದ್ದ ನನ್ನ ಸಾವಿರಾರು ಆಸೆ-ಆಕಾಂಕ್ಷೆಗಳೆಲ್ಲಾ ನನ್ನ ಸಂಜೆಯ ಬಾಳಿನಲ್ಲಿ ಕತ್ತಲಿನೊಡನೆ ಲೀನವಾಗಲು ಸಜ್ಜಾಗಿವೆ. ಆಸೆ-ಆಕಾಂಕ್ಷೆಗಳೆಲ್ಲವೂ ಬರೇ ಕನಸಾಗಿ, ಎಚ್ಚೆತ್ತುಕೊಳ್ಳುವಷ್ಟರಲ್ಲಿ ಸಂಜೆಯ ಮೋಡವು ನನ್ನ ಜೀವನವನ್ನು ಆವರಿಸಿತು. ನಿರಾಸೆಯ ಕತ್ತಲಲ್ಲಿ, ಕನಸನ್ನೂ ನೆನಪಿಸಿಕೊಳ್ಳಲಾಗದೆ, ಆಸೆ-ಆಕಾಂಕ್ಷೆಗಳನ್ನೂ ಪೂರೈಸಲಾಗದೆ, ಅನಿಸಿದ್ದನ್ನು ಬರೆಯುವ ಶಕ್ತಿಯನ್ನೂ ಕಳೆದುಕೊಂಡು, ಎಪ್ಪತ್ತರ ಹರೆಯದಲ್ಲಿ, ನನಗೆ ಹೀಗೇಕಾಯಿತು ಎಂದು ಸದಾ ಚಿಂತನೆಯನ್ನು ಮಾಡುವುದರಲ್ಲಿಯೇ ಕಾಲ ಕಳೆಯಬೇಕಾಗಿದೆ. ಇದು ವಿಧಿ ನಿಯಮವೇ? ಅಥವಾ, ಮನುಷ್ಯನ ಅತೀ ಬುದ್ಧಿವಂತಿಕೆಯೆಂದು ಕಲ್ಪಿತವಾಗಿರುವ ಸಮಾಜದ ಕಟ್ಟು-ಕಟ್ಟಳೆಗಳೇ? ಅಥವಾ ಈ ಕಟ್ಟು-ಕಟ್ಟಳೆಗಳಿಗೆ ಪ್ರೇರಕವಾಗಿರುವ ಆರ್ಥಿಕ ವ್ಯವಸ್ಥೆಯೇ? – ಯಾವುದೂ ತಿಳಿಯದಾಗಿದೆ. ಆದರೂ ನನ್ನ ಚಿಂತನೆ ಸದಾ ಅಡೆತಡೆಯಿಲ್ಲದೆ ಮಳೆಗಾಲದಲ್ಲಿ ತುಂಬಿ ಹರಿವ ತೊರೆಯಂತೆ ಮುಂದೆ ಮುಂದೆ ಸಾಗಿದೆ.

ವೈ. ನಾರಾಯಣ ಭಟ್

ನನ್ನಂತಹ ಏನೂ ಅರಿಯದ ಮುಗ್ಧ ಬಾಲಕನಲ್ಲಿ, ಆಸೆ ಆಕಾಂಕ್ಷೆಗಳ ಕನಸನ್ನು ಬಿತ್ತಿರುವುದೇ ನನ್ನ ಅಧ್ಯಾಪಕರು. ಅಂದು ಆಗಸ್ಟ್ ತಿಂಗಳ ೧೫ನೇ ತಾರೀಖು. ನಾನು ಆಗ ೬ನೇ ತರಗತಿಯಲ್ಲಿ ನಮ್ಮ ಹಳ್ಳಿಯ ಹತ್ತಿರದ ಪೇಟೆಯ ಮಾಧ್ಯಮಿಕ ಶಾಲೆಯಲ್ಲಿ ಓದುತ್ತಿದ್ದೆ. ಬಡ ಕುಟುಂಬದ ನನ್ನ ತಂದೆಯವರು ಅರ್ಚಕ ವೃತ್ತಿಯಲ್ಲಿದ್ದು, ಇದ್ದ ಸ್ವಲ್ಪ ಗದ್ದೆಗಳಲ್ಲಿ ಬೇಸಾಯವನ್ನೂ ಮಾಡಿ, ತಮ್ಮ ೧೧ ಮಕ್ಕಳ ಒಡೆಯನಾಗಿ ಬವಣೆಪಡುತ್ತಿದ್ದರು. ಮನೆಯ ವಾತಾವರಣವೆಂದರೆ – ತಾಯಿಯ ಪ್ರೀತಿ, ಅಣ್ಣ-ತಮ್ಮಂದಿರ ಆಟ-ಕಾದಾಟ, ಹಸು-ಎಮ್ಮೆಗಳ ಒಡನಾಟ, ಊರ ಲಂಗೋಟಿ ಗೆಳೆಯರೊಡನೆ ಕುಟ್ಟದೊಣ್ಣೆ ಆಟ, ಒಪ್ಪೊತ್ತಿನ ಹೊಟ್ಟೆ ತುಂಬ ಗಂಜಿಯೂಟ, ಮನೆಯಲ್ಲಿನ ತುಂಟಾಟವನ್ನು ತಪ್ಪಿಸಲು ಮನೆಯ ಬಳಿಯಿರುವ ಪ್ರಾಥಮಿಕ ಶಾಲೆಯಲ್ಲಿ ಪಾಠ. ಆಗಸ್ಟ್ ೧೫, ೧೯೪೭ – ನನ್ನ ಬಾಲ್ಯದ ಜೀವನದಲ್ಲಿ ಅತ್ಯಂತ ಸಂಭ್ರಮದ ದಿನವಾಗಿತ್ತು. ಮುನ್ನಾದಿನವೇ ಹೊಸ ಉಡುಪುಗಳನ್ನು ಧರಿಸಿ, ಪಠ್ಯಪುಸ್ತಕ, ಕಡ್ಡಿ-ಬಳಪಗಳಿಲ್ಲದೆ, ಕೈಬೀಸಿಕೊಂಡು ಶಾಲೆಗೆ ಬರುವಂತೆ ನಮಗೆಲ್ಲಾ ಆಜ್ಞೆಯಿತ್ತಿದ್ದರು. ಬೆಳಿಗ್ಗೆ ೮ ಗಂಟೆಗೇ ಎಲ್ಲರೂ ಶಾಲೆಯ ಮೈದಾನದಲ್ಲಿ ಹಾಜರು. ಅಧ್ಯಾಪಕರು ಬಂದು ನಮ್ಮನ್ನು ಸಾಲಾಗಿ ನಿಲ್ಲಿಸಿ ಪೇಟೆಯ ೩ ಬೀದಿಗಳಲ್ಲಿ ಸುಮಾರು ಒಂದು ಗಂಟೆ ಶಿಸ್ತಿನಿಂದ ''ಭಾರತ್ ಮಾತಾ ಕಿ ಜೈ!'' ''ಗಾಂಧಿ, ನೆಹರು ಚಿರಾಯುವಾಗಲಿ!'' ಎಂದೆಲ್ಲಾ ಘೋಷಣೆಗಳನ್ನು ಕೂಗಿಸಿ, ಕೊನೆಗೆ ಅದೇ ಮೈದಾನಿನಲ್ಲಿ ಸಾಲಾಗಿ ಕುಳ್ಳಿರಿಸಿ ಸುಮಾರು ೫ ನಿಮಿಷ ಮಾತನಾಡಿದರು. ಆ ಮಾತು ಇಂದಿಗೂ ನನ್ನ ಕಿವಿಯಲ್ಲಿ ಗುಯ್‌ಗುಡುತ್ತಿದೆ – ''ನಾವು ನಮ್ಮ ದೇಶವನ್ನು ಇದುವರೆಗೆ ಆಳುತ್ತಿದ್ದ ಬ್ರಿಟಿಷರನ್ನು ಶಾಂತಿಯುತವಾಗಿ ದೇಶದಿಂದ ಹೊರಗಟ್ಟಿ ಸ್ವತಂತ್ರರಾಗಿದ್ದೇವೆ. ನೀವೆಲ್ಲರೂ ಮುಂದೆ ದೊಡ್ಡವರಾಗಿ ಈ ದೇಶಕ್ಕಾಗಿ ದುಡಿದು ನಮ್ಮ ಭಾರತವನ್ನು ರಾಮರಾಜ್ಯವಾಗಿಸಬೇಕು. ಸತ್ಯ, ನ್ಯಾಯ, ಧರ್ಮದಲ್ಲಿ ನಡೆದುಕೊಳ್ಳಬೇಕು...'' ಇತ್ಯಾದಿ ಇತ್ಯಾದಿ.

ನನಗೆ ಬಾಲ್ಯದಿಂದಲೂ ಪ್ರಕೃತಿಯೊಂದಿಗೆ ಬೆರೆತು, ಪ್ರಕೃತಿಯನ್ನು ಪೂಜಿಸಿ, ಅದರೊಡನೆ ಒಂದಾಗಿ ಜೀವಿಸುವ ಆಸೆಯಿತ್ತು, ಆಸಕ್ತಿಯೂ ಇತ್ತು. ಈ ಆಸೆಯೇ ನನ್ನನ್ನು ಕೃಷಿ ಆಧಾರಿತ ಜೀವನಕ್ಕೆ ಪ್ರೇರೇಪಿಸುತ್ತಿತ್ತು. ಕೃಷಿಕನಾಗಿ, ಧಾರಾಳವಾಗಿ ಬೆಳೆ ಬೆಳೆಸಿ, ಸಾಧ್ಯವಾದರೆ ಭಾರತದ ಎಲ್ಲರಿಗೂ, ಇಲ್ಲವಾದಲ್ಲಿ ನಮ್ಮೂರಿನವರೆಲ್ಲರಿಗೂ ಹೊಟ್ಟೆ ತುಂಬ ಮೂರು ಹೊತ್ತು ಉಣಿಸಿ, ನನ್ನ ಪಾಲಿನ ದೇಶ ಸೇವೆ ಮಾಡಬಹುದೆಂದೂ, ಅದೇ ರೀತಿ ಇತರರಿಗೂ ತಿಳಿಯ ಹೇಳಿ ಸಮಗ್ರ ಭಾರತದಲ್ಲಿ ಹಸಿವಿನ ಬಾಧೆಯಿಂದ ಜನರನ್ನು ಮುಕ್ತಗೊಳಿಸಬಹುದೆಂದೂ ಕನಸು ಕಂಡೆ... ಪರಿಸ್ಥಿತಿಯ ಒತ್ತಡದಿಂದ ಕೃಷಿಕನಾಗುವ ಬದಲು, ನನ್ನ ಜೀವನದ ಮೊದಲ ಹಂತದ ೯ ವರ್ಷಗಳಲ್ಲಿ ಅಧ್ಯಾಪಕನಾಗಿಯೂ, ನಂತರದಲ್ಲಿ ಬ್ಯಾಂಕ್ ನೌಕರನಾಗಿಯೂ ಗೊತ್ತು-ಗುರಿ ಇಲ್ಲದ ಬಾಳ್ವೆ ಮಾಡಿದೆನು. ನನ್ನ ಸಂಸಾರವೇ ನನ್ನ ಸರ್ವಸ್ವವಾಯಿತು. ನನ್ನ ಕಾರ್ಯಕ್ಷೇತ್ರದಲ್ಲಿ ಸ್ವತಂತ್ರವಾಗಿ ಏನನ್ನೂ ಕನಸು ಕಾಣುವಂತೆ ಇರಲಿಲ್ಲ. ಗಾಣದ ಎತ್ತಿನಂತೆ ದುಡಿದು, ಇನ್ನು ದುಡಿಯಲು ಅಯೋಗ್ಯನೆಂದು ಪರಿಗಣಿಸಿದಾಗ ನನ್ನ ನಿವೃತ್ತಿ ಜೀವನ ಪ್ರಾರಂಭವಾಯಿತು.

ನನ್ನ ರಾಮರಾಜ್ಯದ ಕನಸು ಕನಸಾಗಿಯೇ ಉಳಿಯಿತು. ಕನಸು ಕಂಡು ಇಂದಿಗೆ ಸುಮಾರು ೬೦ ವರ್ಷಗಳಾಗಿವೆ. ನನ್ನ ಕನಸಿನ ರಾಮರಾಜ್ಯವು ರಾವಣನ ರಾಜ್ಯದ ಕಡೆಗೆ ವಾಲಿರುವಂತೆ ಭಾಸವಾಗುತ್ತಿದೆ. ಪ್ರತಿದಿನದ ಮುಂಜಾನೆ ಪತ್ರಿಕೆಯನ್ನು ಓದುವಾಗ 'ಅಯ್ಯೋ' ಎಂದೆನಿಸುತ್ತಿದೆ. ಆ 'ಅಯ್ಯೋ'ಗಳನ್ನು ಸರಿಪಡಿಸುವ ಶಕ್ತಿಯನ್ನೂ ಕಳೆದುಕೊಂಡಿರುವ ನಾನು 'ಅಯ್ಯೋ'ಗೆ ಒಳಗಾಗಿರುವವರ ಬಗ್ಗೆ ಬರೀ ಅನುಕಂಪ ತೋರುವ ದುಃಸ್ಥಿತಿಗೆ ಬಂದಿರುವೆನಲ್ಲಾ ಎಂದು ಕೊರಗಿ ಕೊರಗಿ, ಯಾಕಾಗಿ ಪ್ರತೀ ದಿನ ಆ 'ನಾಳೆ'ಯ ಎದುರು ನೋಡುವಂತಾಯಿತಲ್ಲಾ ಎಂಬ ಚಿಂತನೆ. ಈ ಚಿಂತನೆಯಲ್ಲೇ ಸಂಜೆ ಬರುವುದು – ನಂತರ ನನಗೆ ತಿಳಿಯದಂತೇ ಆ 'ನಾಳೆ' ಬಂದೇ ಬಿಡುತ್ತದೆ.

ಹೀಗಿರುವಾಗ ಒಂದು ದಿನ ಬೇಸರದಲ್ಲಿ ಮುಖ್ಯಾಂಶಗಳನ್ನು ಓದಿ, ಪತ್ರಿಕೆ ಬಿಸಾಡಿ, ನನ್ನ ಸ್ವಂತ ಪ್ರಪಂಚವನ್ನು ಅವಲೋಕಿಸಿದೆ. ಪರಿಹರಿಸಲಾಗದ ಅಗಾಧ ಪ್ರಶ್ನೆಗಳ ಸರಮಾಲೆಗಳೇ ನನ್ನ ಮುಂದೆ ಬಂದವು. ನನ್ನ ಸ್ವಂತ ಪ್ರಶ್ನೆಗಳಿಗೇ ಉತ್ತರ ಕಂಡುಕೊಳ್ಳಲಾಗದ ನಾನು, ಇನ್ನು ದೇಶದ ಬಗ್ಗೆ ಯೋಚಿಸುವುದು ನಿಷ್ಪ್ರಯೋಜಕವೆಂದು ಅಸಹಾಯಕ ಭಾವ ತಳೆಯಬೇಕಾಯಿತು. ಆದರೂ ಇದನ್ನು ನಿಮ್ಮೊಂದಿಗೆ ಹಂಚಿಕೊಂಡಲ್ಲಿ ನಿಮ್ಮಲ್ಲಿ ಕೆಲವರಾದರೂ, ಇಲ್ಲವಾದಲ್ಲಿ ಪ್ರಶ್ನೆಗಳನ್ನು ಸೃಷ್ಟಿಸಿದವರಾದರೂ,



# ರಾಮರಾಜ್ಯವೋ! ರಾವಣರಾಜ್ಯವೋ!!

ಇದಕ್ಕೆ ಪರಿಹಾರೋಪಾಯವನ್ನು ತೋರಿಸಬಹುದೆಂದು ನನ್ನ ನಂಬಿಕೆ.

ಈಗ ನಾನೊಬ್ಬ ನಿವೃತ್ತ ಬ್ಯಾಂಕ್ ನೌಕರ. ಬ್ಯಾಂಕ್‌ನಿಂದ ನಿವೃತ್ತಿ ಹೊಂದಿ ಸುಮಾರು ೧೦ ವರ್ಷಗಳು ಸಂದವು. ನಿವೃತ್ತಿಯ ಸಮಯದಲ್ಲಿ ಮುಂದಿನ ಜೀವನವನ್ನು, ನನಗೆ ಬಂದಿರುವ ಪ್ರಾವಿಡೆಂಟ್ ಫಂಡ್ ಹಾಗೂ ಗ್ರ್ಯಾಚುಯಿಟಿಯ ಹಣ ಮತ್ತು ಸಿಗಲಿರುವ ಮಾಸಿಕ ಪಿಂಚಿಣಿಯಲ್ಲಿ ಸುಖವಾಗಿ ಜೀವನವನ್ನು ನಡೆಸಬಹುದೆಂದು ಕನಸು ಕಂಡಿದ್ದೆ. ನಿವೃತ್ತಿಯಾದಾಗ ಸುಮಾರು ರೂ. ೭ ಲಕ್ಷದಷ್ಟು ಹಣವು ಕೈ ಸೇರಿತ್ತು. ನೌಕರನಾಗಿರುವಾಗ ಬ್ಯಾಂಕಿನ ನೌಕರರಿಗೆ ಸಿಗುವ ಗೃಹಸಾಲ ಯೋಜನೆಯಡಿ ಮನೆಯೊಂದನ್ನು ಖರೀದಿಸಿ, ಇಂದಿನವರೆಗೂ ಸ್ವಂತ ಮನೆಯಲ್ಲೇ ವಾಸಿಸುತ್ತಿರುವೆನು. ನಿವೃತ್ತಿ ಧನದಲ್ಲಿ ಅರ್ಧ ಭಾಗಕ್ಕೂ ಮಿಕ್ಕಿ ಖರ್ಚು ಮಾಡಿ ಮಕ್ಕಳ ಮದುವೆ ಮುಗಿಸಿ, ಸಂಸಾರದಲ್ಲಿ ನನ್ನ ಕರ್ತವ್ಯವನ್ನು ನಿಭಾಯಿಸಿದೆ.

ನನ್ನ ಅಳಿದುಳಿದ ಉಳಿತಾಯದ ಮೊತ್ತ ೩ ಲಕ್ಷ. ಈಗಲೂ ನನ್ನ ಬಳಿ ಇರುವುದು ಅಷ್ಟು ಮಾತ್ರ. ನಾನು ನಿವೃತ್ತಿಯಾದಾಗ ರೂ. ೩,೦೦,೦೦೦ಕ್ಕೆ ಇದ್ದ ಬೆಲೆ ಇಂದಿಗೆ ರೂ. ೩,೦೦೦ ಆಗಿದ್ದು, ಇನ್ನು ಮುಂದಿನ ಹತ್ತು ವರ್ಷಗಳಲ್ಲಿ ರೂ. ೩೦ಕ್ಕೆ ಇಳಿಯುತ್ತಿರುವುದೇ ನನ್ನ ಈ ಲೇಖನ ರೂಪದಲ್ಲಿ ಬಂದಿರುವ ಚಿಂತನೆಗೆ ಕಾರಣ ವಾಯಿತು. ನಿವೃತ್ತಿಯ ನಂತರ, ಅಲ್ಪ ಆದಾಯ ಬರುವ ಅಡ್ಡವೃತ್ತಿಯ ಆಮಿಷಗಳಿಗೆ ಬಲಿಯಾಗದೆ, ಮನೆಯಲ್ಲಿ ಕುಳಿತು ಈ ವಿಚಾರವಾಗಿ ದೀರ್ಘ ಚಿಂತನೆ ಮಾಡುತ್ತಿದ್ದೆ. ನನ್ನ ಗೆಳೆಯರಲ್ಲಿ ಇದರ ಬಗ್ಗೆ ಆಗಾಗ ಚರ್ಚಿಸುತ್ತಿದ್ದೆ. ಯಾರಿಂದಲೂ ಸಮಂಜಸ ಹಾಗೂ ಸಮಾಧಾನಕರ ಉತ್ತರ ದೊರಕುತ್ತಿರಲಿಲ್ಲ. ಕೆಲವರಂತೂ ಹಾರಿಕೆ ಮಾತುಗಳನ್ನಾಡಿ ಜಾರಿಕೊಳ್ಳುತ್ತಿದ್ದರೆ, ಇನ್ನು ಕೆಲವರು ಆಧ್ಯಾತ್ಮಿಕವಾದ ಸಮಾಧಾನ ನೀಡುತ್ತಿದ್ದರು. ಒಬ್ಬರಂತೂ ನನಗೆ ಬುದ್ಧಿವಾದದ ಮಾತು ಹೇಳಿ – ''ಈ ವಿಚಾರಕ್ಕೆಲ್ಲ ತಲೆಕೆಡಿಸಿಕೊಳ್ಳದೆ, ನಿನ್ನ ಮುಂದಿನ ಕೆಲವು ವರ್ಷಗಳ ಕೊನೆಯ ದಿನಗಳನ್ನು ಆರಾಮವಾಗಿ ಕಳಿ'' – ಎಂದು ಸಲಹೆ ನೀಡಿದರು.

ನನ್ನ ಈ ಸಣ್ಣ ಪ್ರಶ್ನೆಗಳಿಗೆ ಇಂದಿಗೂ ಉತ್ತರವಿಲ್ಲ. ದಿನವಿಡೀ ದುಡಿದು, ಎಣಿಸಲಾಗದ 'ನಾಳೆ'ಗಳ ಬಗ್ಗೆ ಚಿಂತನೆ ಮಾಡಿ, ಬೆಂದು ಬಸವಳಿದಿರುವ ನಿಮ್ಮಲ್ಲಿ ಯಾರಿಗಾದರೂ ಇದರ ಉತ್ತರ ಗೊತ್ತಿದ್ದಲ್ಲಿ ನನಗೆ ತಿಳುವಳಿಕೆ ಮೂಡಿಸಿದರೆ, ನಾನು ನಿಮಗೆ ಎಂದೆಂದಿಗೂ ಋಣಿಯಾಗಿದ್ದು, ನಿಶ್ಚಿಂತೆಯಿಂದ ನನ್ನ ಉಳಿದ ಬದುಕಿನ ಪಯಣವನ್ನು ಮುಂದುವರಿಸುವೆನು.

**ಪ್ರಶ್ನೆ ೧** : ನನ್ನ ಹಣದ ಮೊತ್ತ ಲೇಶವೂ ಬದಲಾಗದೆ, ಭದ್ರವಾಗಿ ಸರಕಾರದ ವಶದಲ್ಲಿದ್ದು, ಅದರ ಬೆಲೆ ಪ್ರತಿ ವರ್ಷವೂ ಏಕೆ ಕುಗ್ಗುತ್ತಿದೆ ? ನನ್ನ ಹಣದ ಬೆಲೆಯನ್ನು ನನಗೆ ತಿಳಿಯದೇ ಹಾಗೂ ಹಣವನ್ನು ಕೈಯಲ್ಲಿಯೂ ಮುಟ್ಟದೇ ಕದಿಯುವ ಜಾಣ ಕಳ್ಳನು ಯಾರು ?

**ಪ್ರಶ್ನೆ ೨** : ರೈತರು ಬೆಳೆಯುವ ದವಸ-ಧಾನ್ಯ, ಹಣ್ಣು-ಹಂಪಲು ಹಾಗೂ ತರಕಾರಿಗಳನ್ನು ಮಾರಲು ಹೋದಾಗ, ಕೊಂಡುಕೊಳ್ಳುವ ವ್ಯಾಪಾರಿ ಅದರ ಬೆಲೆ ಕಟ್ಟುವನು. ದವಸ-ಧಾನ್ಯ, ಹಣ್ಣು-ಹಂಪಲು ಹಾಗೂ ತರಕಾರಿಗಳ ಒಡೆಯರು ರೈತರಾಗಿದ್ದರೂ, ವ್ಯಾಪಾರಿ ಏಕೆ ಬೆಲೆ ಕಟ್ಟಬೇಕು ? ಅದೇ ರೈತರು ಅದೇ ವ್ಯಾಪಾರಿಯಿಂದ ಮರುದಿನ ಅದೇ ವಸ್ತುಗಳನ್ನು ಕೊಂಡುಕೊಳ್ಳಲು ಹೋದಾಗಲೂ ವ್ಯಾಪಾರಿಯೇ ಬೆಲೆಕಟ್ಟುವುದು ಹೇಗೆ ? ಮಾರಲು ಹೋದಾಗ ಕೊಂಡುಕೊಳ್ಳುವವನು ಬೆಲೆ ಕಟ್ಟುವುದೇ ನ್ಯಾಯವಾದರೆ, ಮರುದಿನದ ವ್ಯಾಪಾರದಲ್ಲಿ ಈ ನ್ಯಾಯವನ್ನು ಏಕೆ ಅನುಸರಿಸುವುದಿಲ್ಲ? ಈ ನಿಯಮವನ್ನು ಕೃಷಿಕ್ಷೇತ್ರಕ್ಕೆ ಮಾತ್ರ ಸೀಮಿತವಾಗಿಟ್ಟು ಕೈಗಾರಿಕಾ ಕ್ಷೇತ್ರಕ್ಕೆ ಯಾಕೆ ಅನ್ವಯಿಸುವುದಿಲ್ಲ ?

**ಪ್ರಶ್ನೆ ೩** : ಪ್ರಪಂಚದಲ್ಲಿ ಎಲ್ಲಾ ವಸ್ತುಗಳ ಬೆಲೆ ನಿಖರ ಹಾಗೂ ನಿಗದಿಯಾಗಿದ್ದು, ಚಿನ್ನದ ಬೆಲೆ ಮಾತ್ರ ಏಕೆ ಮೇಲೆ-ಕೆಳಗೆ ತಕ್ಕಡಿ ತೂಗಿದಂತೆ ಏರುಪೇರಾಗಿ, ವರ್ಷಾಂತ್ಯದಲ್ಲಿ ಹಿಂದಿನ ವರ್ಷಕ್ಕಿಂತ ಮೇಲೇರಬೇಕು ?

**ಪ್ರಶ್ನೆ ೪** : ಚಿನ್ನದ ಬೆಲೆಗೂ, ಷೇರು ಮಾರುಕಟ್ಟೆಗೂ ಏನು ಸಂಬಂಧವಿದೆ ? ಚಿನ್ನದ ಏರುಪೇರಿಗೂ, ಷೇರು ಮಾರುಕಟ್ಟೆಯ ಏರುಪೇರಿಗೂ ಸಾಮರಸ್ಯವೇನು ? ಅಂದರೆ, ವರ್ಷಾಂತ್ಯದಲ್ಲಿ ಸೂಚ್ಯಂಕ ಮೇಲೇರುವುದಾದರೂ ಹೇಗೆ ?

**ಪ್ರಶ್ನೆ ೫** : ಸೂಚ್ಯಂಕದ ಏರುಪೇರಿಗೂ, ಮಾರುಕಟ್ಟೆಯಲ್ಲಿ ವ್ಯಾಪಾರದಲ್ಲಿರುವ ಆಹಾರ ಸಾಮಗ್ರಿಗಳ ಹಾಗೂ ಇತರ ವಸ್ತುಗಳ ಬೆಲೆ ಏರಿಕೆಗೂ ಇರುವ ಸಂಬಂಧವೇನು ? ಸೂಚ್ಯಂಕ ಮೇಲೇರಿದಾಗ ಏರುತ್ತಿರುವ ಸಾಮಗ್ರಿಗಳ ಬೆಲೆ, ಸೂಚ್ಯಂಕ ಕೆಳಗಿಳಿದಾಗ ಯಾಕೆ ಕೆಳಗಿಳಿಯುವುದಿಲ್ಲ?

**ಪ್ರಶ್ನೆ ೬** : ಸರಕಾರ ಪ್ರತಿವರ್ಷವೂ ತನ್ನ ಬಜೆಟ್‌ನಲ್ಲಿ, ಖರ್ಚಿನ ಮೊತ್ತವನ್ನು ಆದಾಯಕ್ಕಿಂತ ಜಾಸ್ತಿ ತೋರಿಸಿ, ಜನರ ಮೇಲೆ ವಿವಿಧ ಕರಗಳನ್ನೂ ಹೇರಿ, ಅಂತರರಾಷ್ಟ್ರೀಯ ಮಟ್ಟದಲ್ಲಿ ಎಲ್ಲರಿಂದಲೂ ಸಾಲ ಮಾಡಿ, ಏಕೆ ನಮ್ಮ ದೇಶವನ್ನು ಸಾಲಿಗರಿಗೆ ಒಪ್ಪಿಸಬೇಕು ?

**ಪ್ರಶ್ನೆ ೭** : ಕೈಗಾರಿಕೆಗಳಿಗೆ ಕರಭಾರ ಹಾಕಿದಾಗ ಈ ಭಾರವನ್ನು, ತಮ್ಮ ಉತ್ಪಾದನೆಗಳ ಮೂಲಕ, ಸಾಮಾನ್ಯ ಜನರಿಗೆ ದಾಟಿಸುವವರು, ಕರಭಾರ ಕಡಿಮೆ ಮಾಡಿದಾಗ, ಆ ಲಾಭವನ್ನು ತಮ್ಮ ಉತ್ಪಾದನೆಗಳಲ್ಲಿ ಸಾಮಾನ್ಯ ಜನರಿಗೆ ಯಾಕೆ ಹಂಚುವುದಿಲ್ಲ ?

**ಪ್ರಶ್ನೆ ೮** : ಮಾರಾಟದ ವಸ್ತುಗಳಿಗೆ ಎಂ.ಆರ್.ಪಿ. ಚೀಟಿಯನ್ನು ತಗಲಿಸಿ, ಅದರ ತಯಾರಕರು ಆ ವಸ್ತುಗಳ ಉತ್ಪಾದನಾ ವೆಚ್ಚ + ಮಧ್ಯವರ್ತಿಗಳ ಕಮಿಷನ್ + ಸಾಗಾಣಿಕೆಯ ಖರ್ಚುವೆಚ್ಚ + ಸಗಟು ವ್ಯಾಪಾರಿಗಳ ಲಾಭ + ಚಿಲ್ಲರೆ ಮಾರಾಟಗಾರರ ಲಾಭ + ತಮ್ಮ ಮಹತ್ವಾಕಾಂಕ್ಷಿ ಲಾಭ – ಮುಂತಾದವುಗಳನ್ನು ಅನಿಯಂತ್ರಿತ ಪ್ರಮಾಣದಲ್ಲಿ ಸೇರಿಸಿ, ಗ್ರಾಹಕರನ್ನು ಹಗಲುದರೋಡೆ ಮಾಡುವಾಗಲೂ, ಜನರ ಅಭಿವೃದ್ಧಿಯೇ ತನ್ನ ಮೂಲೋದ್ದೇಶವೆಂದು ಘೋಷಿಸಿರುವ ಸರಕಾರವೇಕೆ ಮೂಕಪ್ರೇಕ್ಷಕನಾಗಿದೆ ?

**ಪ್ರಶ್ನೆ ೯** : ಮಧ್ಯಮವರ್ಗದವನೆಂದು ಗುರುತಿಸಿ ಕೊಂಡಿರುವ ನನಗೆ, ಮುಂದಿನ ಜೀವನ ಬಲು ದೂರ ಸಾಗುವುದಿದ್ದರೆ, ಅದನ್ನು ನಿಭಾಯಿಸುವ ಪರಿ ಎಂತು ಎಂದು ನಾನೇ ಚಿಂತಿಸುತ್ತಿರಬೇಕಾದರೆ, ಕೆಳವರ್ಗದ ಕೋಟ್ಯಂತರ ಜನರ ಬವಣೆ ಏನು ? ಸ್ವತಂತ್ರ ಭಾರತವು ಪ್ರಗತಿ ಪಥದಲ್ಲಿದ್ದು, ನಿನ್ನೆಯ ಬಲ್ಲಿದನು, ಇಂದು ಮಧ್ಯಮ ವರ್ಗದವನಾಗಿ, ಮಧ್ಯಮವರ್ಗದವನು ಬಡವನಾಗಿ, ಬಡವನು ಭಿಕ್ಷುಕನಾಗಿ, ಕೊನೆಗೆ ಭಿಕ್ಷುಕನಿಗೆ ಬೇಡುವ ಹಕ್ಕೂ ಇಲ್ಲದೆ ಯಮನ ಅತಿಥಿಯಾಗುವ ಕಾಲ ಸನ್ನಿಹಿತವಾಗಿದೆ. ರಾಮರಾಜ್ಯವೇಕೆ ರಾವಣರಾಜ್ಯದತ್ತ ಸಾಗಿದೆ ?

**ವೈ. ನಾರಾಯಣ ಭಟ್**
ನಂ. ೨೮೧, ೧೮ನೇ ಅಡ್ಡರಸ್ತೆ, ೭ನೇ ಮುಖ್ಯರಸ್ತೆ, ಐಡಿಯಲ್ ಹೋಮ್ಸ್ ಟೌನ್ ಷಿಪ್, ರಾಜರಾಜೇಶ್ವರಿನಗರ, ಬೆಂಗಳೂರು - ೯೮

# ಶುಕ್ರದ ಕಣ್ಣುಮುಚ್ಚಾಲೆ

**ನಭಾವಲೋಕನ**

**ಸಂ**ಜೆಯ ಆಕಾಶದಲ್ಲಿ ಶುಕ್ರ ಪಶ್ಚಿಮದ ಅಂಚಿನಲ್ಲಿ ಕಂಗೊಳಿಸುತ್ತದೆ. ಇದನ್ನು ಹುಡುಕಲು ಏನೇನೂ ಕಷ್ಟ ಪಡಬೇಕಾಗಿಲ್ಲ. ಪ್ರತಿ ಸಂಜೆ ಇದನ್ನು ಗಮನಿಸುತ್ತಾ ಬನ್ನಿ. ಇನ್ನೂ ಕತ್ತಲಾಗುವ ಮೊದಲೇ ಗುರುತಿಸುವ ಕಲೆಯನ್ನು ಹೀಗೆ ಬೆಳೆಸಿಕೊಳ್ಳಬಹುದು. ೧೬ರಂದು ಸಂಜೆ ಸುಮಾರು ಐದೂವರೆಯ ಹೊತ್ತಿಗೆ ಶುಕ್ರನನ್ನು ಹುಡುಕಿ. ಕಾಣಲಿಲ್ಲವೇ ? ಚಿಂತೆ ಇಲ್ಲ; ಚಂದ್ರನನ್ನು ಹುಡುಕಿ. ಈಗ ದುರ್ಬೀನು ಇರುವವರು ಚಂದ್ರನನ್ನು ಗಮನಿಸಿ. ಚಂದ್ರನಿಗೆ ವಜ್ರದ ಹರಳು ಅಂಟಿಕೊಂಡಿದೆಯೋ ಎಂಬಂತೆ ಭಾಸವಾಗುತ್ತದೆ. ಅದೇ ಶುಕ್ರ. ಕತ್ತಲು ಕವಿಯುತ್ತಿದ್ದ ಹಾಗೆ ಚಂದ್ರ ಶುಕ್ರದಿಂದ ದೂರ ಸರಿಯುತ್ತದೆ. ಈ ಅಪೂರ್ವವಾದ ಘಟನೆಯನ್ನು ಕ್ಯಾಮೆರಾದಲ್ಲಿ ಸೆರೆ ಹಿಡಿಯಲು ಪ್ರಯತ್ನಿಸಿ. ಗ್ರಹಣದಂತಹ ಈ ಘಟನೆಗೆ ಆಚ್ಛಾದನೆ ಎಂದು ಹೆಸರು. ಇದು ಸಂಜೆ ೫:೩೦ಗೆ ಮುಕ್ತಾಯವಾಗುತ್ತದೆ.

ಸ್ವಲ್ಪ ಪಕ್ಕಕ್ಕೆ ಕಂಗೊಳಿಸುವ ಗ್ರಹ ಮಂಗಳ ಕಟಕವನ್ನು ದಾಟಿ ಸಿಂಹದತ್ತ ಚಲಿಸುತ್ತಿದೆ. ಪಕ್ಕದಲ್ಲೇ ಇರುವ ಮಘ ನಕ್ಷತ್ರ ಬಣ್ಣಗಳ ಹೋಲಿಕೆಗೆ ಅವಕಾಶ ಕೊಡುತ್ತದೆ. ಮಘದ ಬಣ್ಣ ನೀಲಿ; ಮಂಗಳದ್ದು ತಿಳಿಗೆಂಪು. ಮಂಗಳ ಕ್ರಮೇಣ ಮಘವನ್ನು ಸಮೀಪಿಸುವುದನ್ನು ತಿಂಗಳುದ್ದಕ್ಕೂ ಗಮನಿಸಬಹುದು. ಸಿಂಹಕ್ಕೂ ಕನ್ಯಾಗೂ ಮಧ್ಯೆ ಇರುವ ಪ್ರಕಾಶಮಾನ ಚುಕ್ಕೆ ಶನಿ.

ಇನ್ನೊಂದು ಗ್ರಹ ಗುರು ಬೆಳಗಿನ ಜಾವ ಕಾಣುತ್ತದೆ. ೧೨ರಂದು ಪೂರ್ವ ದಿಕ್ಕಿನಲ್ಲಿ ಬಾಲಚಂದ್ರನ ಪಕ್ಕದಲ್ಲಿ ಕಾಣುತ್ತದೆ.

ಇನ್ನೊಂದು ಗ್ರಹ ಬುಧ ತಿಂಗಳ ಕೊನೆಗೆ ಬೆಳಗಿನ ಜಾವ ಕಾಣುತ್ತದೆ.




ಸಂಜೆಯ ಆಕಾಶದಲ್ಲಿ ಗಮನಿಸಲೇಬೇಕಾದ ಸುಂದರ ಪುಂಜಗಳಿವೆ. ಒರೈಯನ್ ಅಥವಾ ಮಹಾವ್ಯಾಧ ಮರೆಯಾಯಿತೆಂದು ವ್ಯಥೆ ಪಡಬೇಕಿಲ್ಲ. ದಕ್ಷಿಣದ ದಿಗಂತದುದ್ದಕ್ಕೂ ಗಮನಹರಿಸಿ. ಶಿಲುಬೆಯ ಆಕಾರದ ತ್ರಿಶಂಕುವನ್ನು ಪತ್ತೆ ಮಾಡಿ. ದುರ್ಬೀನಿದ್ದರೆ ಆ ಭಾಗವನ್ನು ಮರೆಯದೆ ವೀಕ್ಷಿಸಿ. ನಕ್ಷತ್ರಗಳ ಹಿಂಡು ಅಲ್ಲದೆ ನೆಬ್ಯುಲಾಗಳೂ ಇವೆ. ಮುಂದುವರಿದು ಪೂರ್ವಕ್ಕೆ ತಿರುಗಿ. ತಿಂಗಳ ಆರಂಭದಲ್ಲಿ ಸ್ವಾತಿ ಎಂಬ ಕೆಂಪು ನಕ್ಷತ್ರ ಕಾಣುತ್ತದೆ. ತಿಂಗಳ ಕೊನೆಗೆ ವೃಶ್ಚಿಕ ರಾಶಿಯ ಕೆಂಪು ನಕ್ಷತ್ರ ಜ್ಯೇಷ್ಠಾ ಕಾಣುತ್ತದೆ. ಇನ್ನೆರಡು ಗಂಟೆಗಳ ತರುವಾಯ ಆ ರಾಶಿಯ ಪೂರ್ಣ ದರ್ಶನ ಸಿಗುತ್ತದೆ. ೨೭ರಂದು ಚಂದ್ರ ಜ್ಯೇಷ್ಠಾದ ಪಕ್ಕದಲ್ಲೇ ಕಾಣುತ್ತದೆ. ಉತ್ತರದಲ್ಲಿ ಸಪ್ತರ್ಷಿ ಮಂಡಲದ ಪೂರ್ಣ ದರ್ಶನ ಸಿಗಲಿದೆ.

ಈ ತಿಂಗಳಲ್ಲಿ ಹ್ಯಾಲೀ ಧೂಮಕೇತುವಿನ ತುಣುಕುಗಳು ಉಲ್ಕೆಗಳಾಗಿ ಉದುರಲಿವೆ. ಗರಿಷ್ಠ ಮೇ ೬ರಂದು. ೧೯೮೩ರಲ್ಲಿ ಬಂದು ಹೋದ ಒಂದು ಚಿಕ್ಕ ಧೂಮಕೇತುವಿನ (ಇರಾಸ್ -ಆರಾಸಿ - ಅಲ್ಕಾಕ್ ) ತುಣುಕುಗಳು ಉಲ್ಕೆಗಳಾಗಿ ಕಾಣುವುವು. ಈ ಉಲ್ಕಾ ವೃಷ್ಟಿಗೆ ಏರೈಟಿಡ್ಸ್ (ಮೇಷ) ಎಂಬ ಹೆಸರು ಕೊಡಲಾಗಿದೆ. ಇದೂ ಈ ತಿಂಗಳಲ್ಲೇ ಕಾಣಬಹುದು.

**ಖಗೋಳ ದಿನಚರಿ**

೬ ಚಾಂದ್ರಮಾಸದ ಕೊನೆಯ ಪಾದ ; ಚಂದ್ರ - ಭೂಮಿ ನಡುವೆ ಗರಿಷ್ಠ ದೂರ; ಈಟಾ ಅಕ್ವಾರಿಡ್ಸ್ ಉಲ್ಕಾವೃಷ್ಟಿಯ ಗರಿಷ್ಠ ಚಟುವಟಿಕೆ

೧೦ ಗುರು - ಚಂದ್ರ ಜೋಡಿ*

೧೨ ಚಂದ್ರ - ಬುಧ ಜೋಡಿ

೧೪ ಅಮಾವಾಸ್ಯೆ ೫:೩೪ಕ್ಕೆ

೧೬ ಶುಕ್ರ - ಚಂದ್ರ ನಡುವೆ ಕನಿಷ್ಠ ಕೋನ* (ಆಚ್ಛಾದನೆ ಸಂಜೆ ೫:೩೦ಕ್ಕೆ ಮುಕ್ತಾಯ)

೨೦ ಚಾಂದ್ರಮಾಸದ ಮೊದಲ ಪಾದ ; ಮಂಗಳ - ಚಂದ್ರ ಜೋಡಿ ;* ಚಂದ್ರ - ಭೂಮಿ ನಡುವೆ ಕನಿಷ್ಠ ದೂರ

೨೩ ಶನಿ ಚಂದ್ರ ಜೋಡಿ*

೨೬ ಬುಧ ಗ್ರಹದ ಗರಿಷ್ಠ ಕೋನೋನ್ನತಿ* (ಮುಂಜಾವು)

೨೭ ಚಂದ್ರ ಜ್ಯೇಷ್ಠಾ ಜೋಡಿ*

೨೯ ಹುಣ್ಣಿಮೆ ೪:೩೭ಕ್ಕೆ

(* ಛಾಯಾಗ್ರಹಣಕ್ಕೆ ಸದವಕಾಶ)


**ಡಾ|| ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರೂ ತಾರಾಲಯ, ಹೈಗ್ರೌಂಡ್ಸ್
ಬೆಂಗಳೂರು - ೫೬೦ ೦೦೧


## ಸಂಧ್ಯಾಪ್ರಕಾಶದ ಸೊಬಗು

ಐಸ್‌ಲೆಂಡ್‌ನಲ್ಲಿ ಅಗ್ನಿಪರ್ವತ ಸ್ಫೋಟಿಸಿದೆ. ಇದು ಅಲ್ಲಿಯ ಜನರಿಗೆ ತೊಂದರೆಯನ್ನೇ ಉಂಟು ಮಾಡಿದರೂ ನಮಗೆ ಬಣ್ಣಬಣ್ಣದ ಸಂಧ್ಯಾ ಪ್ರಕಾಶದ ನೋಟಗಳನ್ನು ಒದಗಿಸಲಿದೆ. ಗಾಳಿ ಆ ದೂಳನ್ನು ನಿಧಾನವಾಗಿ ಎಲ್ಲೆಡೆಗೂ ಹರಡಿದಂತೆ ನಮ್ಮ ಆಕಾಶದಲ್ಲಿ ಬಣ್ಣ ಗಾಢವಾಗುತ್ತದೆ. ಹಿಂದೆಂದೂ ಕಾಣದಿರದ ನೇರಿಳೆ ಮುಂತಾದ ಬಣ್ಣಗಳು ಕಾಣತೊಡಗುತ್ತವೆ. ಆದ್ದರಿಂದ ಆಕಾಶ ಶುಭ್ರವಾಗಿ ಇದ್ದಾಗಲೆಲ್ಲಾ ಸೂರ್ಯಾಸ್ತವನ್ನು ಮರೆಯದೇ ನೋಡಿ.



೧೬ ರ ಸಂಜೆ ಶುಕ್ರ ಮತ್ತು ಚಂದ್ರ




## ಕಿರ್ಗಿಸ್ತಾನ : ಅಮೆರಿಕದ ಸಂಚಿಗೆ ಹೊಡೆತ

**ಕೆ**ಲದಿನಗಳ ಹಿಂದೆ ಏಷ್ಯಾ ಖಂಡದ ಮಧ್ಯಭಾಗದಲ್ಲಿರುವ ಪುಟ್ಟ ದೇಶ ಕಿರ್ಗಿಜಿಯ (ಜನಸಂಖ್ಯೆ ಸುಮಾರು ೪೬ ಲಕ್ಷ, ವಿಸ್ತೀರ್ಣ ೧,೯೮,೫೦೦ ಕಿ.ಮೀ.) ಅಧ್ಯಕ್ಷ ಅಲ್ಲಿನ ಜನತೆಯಿಂದ ತಿರಸ್ಕೃತನಾಗಿ ದೇಶಬಿಟ್ಟು ಪರಾರಿಯಾದ. ಐದು ವರ್ಷಗಳ ಹಿಂದೆ ಅಮೆರಿಕಾದ ಆಶೀರ್ವಾದದಿಂದ ಅಧಿಕಾರಕ್ಕೇರಿದ ಕುರ್ಮಾನ್‌ಬೆಕ್ ಬಕಿಯೆವ್ ರಾಜಧಾನಿ ಬಿಷ್‌ಕೆಕ್‌ನಲ್ಲಿ ನಡೆದ ಜನಾಂದೋಳನವನ್ನು ಎದುರಿಸಲಾಗದೆ ಅಧಿಕಾರ ತ್ಯಜಿಸಿದ. ಕುರ್ಚಿ ಉಳಿಸಿಕೊಳ್ಳಲು ಈತ ನಡೆಸಿದ ದಬ್ಬಾಳಿಕೆಯಲ್ಲಿ ೪೦ಕ್ಕೂ ಹೆಚ್ಚು ಮಂದಿ ಹತರಾಗಿ, ನೂರಾರು ಮಂದಿಗೆ ಗಾಯಗಳಾದುವು. ಅಮೆರಿಕಾದ 'ಟ್ಯುಲಿಪ್' ಹೆಸರಿನ ಸಂಚಿನಲ್ಲಿ ಅಧ್ಯಕ್ಷಪೀಠ ಅಲಂಕರಿಸಿದ ಈತ ಉಪಕಾರಸ್ಮರಣೆಗೆ ಪ್ರತಿಯಾಗಿ ನೀಡಿದ್ದು ವೈಮಾನಿಕ ನೆಲೆ. ಆಫ್ಘಾನಿಸ್ತಾನದ ಮೇಲೆ ದಾಳಿ ನಡೆಸಲು ಅಮೆರಿಕಾದ ವಿಮಾನಗಳಿಗೆ ಅನುಕೂಲ ಮಾಡಿಕೊಟ್ಟ ಅಗ್ಗದರದಲ್ಲಿ. ಇಂಥ ಸ್ವಾಮಿ ಭಕ್ತರು ಕೆಲವೇ ದಿನಗಳಲ್ಲಿ ಭ್ರಷ್ಟರಾಗಿ, ಲಂಚಕೋರರಾಗಿ ಬೆಳೆದು, ಜನವಿರೋಧಿಗಳಾಗುವುದು ಸರ್ವೇಸಾಮಾನ್ಯ.

ಕಿರ್ಗಿಜಿಯ ಸೋವಿಯೆತ್ ಒಕ್ಕೂಟದ ವಿಘಟನೆಯ ನಂತರ ಸ್ವತಂತ್ರ ರಾಷ್ಟ್ರವಾಯಿತು. ಆಗಿನಿಂದಲೂ ಇದು ಅಮೆರಿಕದ ಸಾಮ್ರಾಜ್ಯಶಾಹಿಗಳಿಗೆ ಆಡುಂಬೊಲ. ಆಯಕಟ್ಟಿನ ಪ್ರದೇಶದಲ್ಲಿರುವುದರಿಂದ ಅಮೆರಿಕಾಗೆ ಆಸಕ್ತಿ. ಸೋವಿಯೆತ್ ಒಕ್ಕೂಟ ಅಸ್ತಿತ್ವದಲ್ಲಿರುವವರೆಗೆ ಅದನ್ನು ಸುತ್ತುವರಿಯಲು ಅವಕಾಶವಿದ್ದೆಡೆಯಲ್ಲೆಲ್ಲ ಅಮೆರಿಕಾ ಸೈನಿಕ ನೆಲೆಗಳನ್ನು ಸ್ಥಾಪಿಸುತ್ತಿತ್ತು. ಅದು ವಿಘಟನೆಯಾದ ಮೇಲೆ ದುರ್ಬಲಗೊಂಡಿದ್ದು ಸ್ವತಂತ್ರ ರಾಷ್ಟ್ರಗಳಾದ ಅವು ಮತ್ತೆ ಒಂದಾಗದಂತೆ ಮಾಡಲು ಸಕಲ ಪ್ರಯತ್ನಗಳನ್ನು ಅಮೆರಿಕ ಮಾಡಿತು. ಉಕ್ರೇನಿನಿಂದ ಹಿಡಿದು ಜಾರ್ಜಿಯ, ಬೆಲಾರಸ್, ಕಜಖಿಸ್ತಾನ ಮೊದಲಾದ ಕಡೆಗಳಲ್ಲಿ ತನಗೆ ಅನುಕೂಲವಾಗಿರುವ ಸರಕಾರಗಳನ್ನು ಅಧಿಕಾರಕ್ಕೆ ತರಲು ಅಮೆರಿಕ ನೇರವಾಗಿ ಪ್ರಯತ್ನ ನಡೆಸಿತು. ಆಗಲೇ ಚಾಲ್ತಿಗೆ ಬಂದದ್ದು, 'ಆರೆಂಜ್‌ಕ್ರಾಂತಿ', 'ಟ್ಯುಲಿಪ್‌ಕ್ರಾಂತಿ' ಮುಂತಾದ ಪ್ರಯೋಗಗಳು. ಈ ಪ್ರಯತ್ನಗಳು ಪ್ರಾರಂಭದಲ್ಲಿ ತಕ್ಕಮಟ್ಟಿಗೆ ಯಶಸ್ವಿಯಾದರೂ ಹೆಚ್ಚು ಕಾಲ ಉಳಿಯಲಿಲ್ಲ. ಅಮೆರಿಕಾದ ಆಮಿಷಗಳಿಗೆ ಬಲಿಯಾದ ಸರಕಾರಗಳು ಭ್ರಮೆನಿರಸನಗೊಳ್ಳಲು ಹೆಚ್ಚುಕಾಲ ಹಿಡಿಯಲಿಲ್ಲ. ಭ್ರಷ್ಟ ಸರಕಾರಗಳ ವಿರುದ್ಧ ಜನಸಾಮಾನ್ಯರು ಆಂದೋಳನ ನಡೆಸಿ ಸರಕಾರಗಳನ್ನು ಉರುಳಿಸಿದ ಪ್ರಕರಣಗಳು ನಡೆದಿವೆ. ಕಿರ್ಗಿಜಿಯದ ಪ್ರಕರಣ ಈಗಿನದು.

ಆಫ್ಘಾನಿಸ್ತಾನವನ್ನು ಆಕ್ರಮಿಸಿಕೊಂಡಿರುವ ಅಮೆರಿಕಾಗೆ ಈಗ ಸ್ಥಿತಿ ಜೇಡನಬಲೆಯಲ್ಲಿ ಸಿಕ್ಕಿರುವ ಹುಳುವಿನಂತಾಗಿದೆ. ಒಂದು ಕಾಲದಲ್ಲಿ ಅಮೆರಿಕದ ಬೆಂಬಲದಿಂದ ಅಫ್ಘಾನಿಸ್ತಾನದಲ್ಲಿ ಅಧಿಕಾರಕ್ಕೆ ಬಂದಿದ್ದು, ಅದರಿಂದಲೇ ಅಧಿಕಾರ ಕಳೆದುಕೊಂಡ ತಾಲಿಬಾನ್‌ಗಳು ಈಗ ಅಮೆರಿಕಾದ ಆಡಳಿತಗಾರರಿಗೆ ಮುಳ್ಳಾಗಿದ್ದಾರೆ. ಚುನಾವಣೆಯ ಅಣಕ ಮಾಡಿ ಕೈಗೊಂಬೆ ಸರಕಾರ ಅಧಿಕಾರದಲ್ಲಿದ್ದರೂ ಅದರ ಅಧಿಕಾರ ರಾಜಧಾನಿ ಕಾಬೂಲಿಗಿಂತ ಆಚೆಗೆ ಕಾಣದಾಗಿದೆ. ದೇಶದ ಬಹುಭಾಗ ಈಗ ತಾಲಿಬಾನ್‌ಗಳ ಹಿಡಿತಕ್ಕೆ ಬಂದಿದ್ದು, ಅದು ಪಾಕಿಸ್ತಾನದಲ್ಲೂ ಹರಡಿದೆ. ಪಾಕಿಸ್ತಾನಿ ಸರಕಾರದ ಗುಪ್ತಚರದಳ ಐಎಸ್‌ಐನ ಬೆಂಬಲ ಪಡೆದಿರುವ ತಾಲಿಬಾನ್, ಅಲ್‌ಖೈದಾ, ಜೈಷೆಮಹಮದ್‌ನಂಥ ಉಗ್ರಗಾಮಿ ತಂಡಗಳು ಕ್ರಿಯಾಶೀಲರಾಗಿರುವುದು ಅಮೆರಿಕಾಗೆ ತಲೆನೋವಾಗಿದೆ. ತಾಲಿಬಾನ್‌ಗಳನ್ನು ನಿಗ್ರಹಿಸಲು ಒಬಾಮಾ ಸರಕಾರ ಇನ್ನೂ ೩೦,೦೦೦ ಸೈನಿಕರನ್ನು ರವಾನಿಸಿದೆ. ಆಂತರಿಕವಾಗಿ ವಿಷಮ-ಪರಿಸ್ಥಿತಿಯಲ್ಲಿರುವ ಪಾಕಿಸ್ತಾನ ಸರಕಾರವನ್ನು ಕೈಬಿಡಲೂ ಆಗದೆ ಕಟ್ಟಿಕೊಳ್ಳಲೂ ಆಗದೆ ಅಮೆರಿಕ ಆಫ್ಘಾನಿಸ್ತಾನದ ತಾಲಿಬಾನ್ ವಿರುದ್ಧ ಸಮರ ಮುಂದುವರಿಸುತ್ತಿದೆ. ಈ ಸಮರದಲ್ಲಿ ಕಿರ್ಗಿಜಿಯದ ವಾಯುನೆಲೆ ಅಮೆರಿಕಾಗೆ ಬಹಳ ಮುಖ್ಯ. ಹಾಗಾಗಿ ಈಗ ಅಸ್ತಿತ್ವಕ್ಕೆ ಬಂದಿರುವ ಹೊಸ ಸರಕಾರದೊಂದಿಗೆ ಒಂದು ವರ್ಷಕಾಲ ವೈಮಾನಿಕ ನೆಲೆ ಬಳಸಿಕೊಳ್ಳಲು ಒಪ್ಪಂದ ಮಾಡಿಕೊಂಡಿದೆ. ಆಫ್ಘಾನಿಸ್ತಾನದಲ್ಲಿ ನಡೆಸುತ್ತಿರುವ ಸಮರದಲ್ಲಿ ಭಾರತವನ್ನೂ ಎಳೆಯಲು ಅಮೆರಿಕಾ ಸನ್ನಾಹ ನಡೆಸಿದೆ. ತಾಲಿಬಾನ್ ಭೂತದ ಬೆದರಿಕೆ ಮುಂದೆ ಮಾಡುತ್ತಿದೆ. ಕಿರ್ಗಿಸ್ತಾನದ ಚಾಲನೆಯಿಂದ ಮನಮೋಹನ ಸಿಂಗ್ ಸರಕಾರ ಪಾಠ ಕಲಿಯುವುದು ಒಳಿತು.

## ನ್ಯೂಕ್ಲಿಯಾರ್ ಅಸ್ತ್ರ: ಸದಾಶಯದಿಂದ ಅಪಾಯ ತಪ್ಪದು

**ಜ**ಪಾನಿನ ನಾಗಸಾಕಿ, ಹಿರೋಷಿಮಾ ನಗರಗಳ ಮೇಲೆ ಅರವತ್ತೈದು ವರ್ಷಗಳ ಹಿಂದೆ ಪರಮಾಣು ಬಾಂಬು ಪ್ರಯೋಗ ತಂದ ದುರಂತವನ್ನು ಮಾನವಕುಲ ಎಂದೂ ಮರೆಯದು. ಆಗಿನಿಂದ ಈ ಜಗತ್ತು ನ್ಯೂಕ್ಲಿಯರ್ ಅಸ್ತ್ರಗಳ ಭೀತಿಯ ನೆರಳಿನಲ್ಲಿಯೇ ಮುಂದುವರಿದಿದೆ. ಇಡೀ ಭೂಮಂಡಲವನ್ನು ಹತ್ತುಪಟ್ಟು ಧೂಳೀಪಟ ಮಾಡಲು ಶಕ್ತವಾಗಿರುವ ನ್ಯೂಕ್ಲಿಯರ್ ಅಸ್ತ್ರಗಳ ರಾಶಿಯ ಮೇಲೆ ಮನುಕುಲ ಏಕೆ, ಎಲ್ಲ ಜೀವಿಗಳೂ ಬದುಕು ಸಾಗಿಸುತ್ತಿವೆ. ಅಮೆರಿಕಾ ಅಂದು ಪ್ರಾರಂಭಿಸಿದ ಶಸ್ತ್ರಾಸ್ತ್ರ ಪೈಪೋಟಿಯ ಫಲ ಈಗ ಅನುಭವಿಸುತ್ತಿದ್ದೇವೆ. ಐವತ್ತು-ಅರವತ್ತರದ ದಶಕಗಳಲ್ಲಿ ದಾಸ್ತಾನಾಗಿರುವ ನ್ಯೂಕ್ಲಿಯರ್ ಅಸ್ತ್ರಗಳು ಹಾಗೇ ಉಳಿದುಕೊಂಡಿವೆಯಷ್ಟೇ ಅಲ್ಲ, ನ್ಯೂಕ್ಲಿಯರ್ ಅಸ್ತ್ರ ತಯಾರಿಕೆಯ ತಂತ್ರಜ್ಞಾನ ಸೋರಿಕೆಯಾಗಿ ಹಲವರಿಗೆ ಲಭ್ಯವಿದೆ. ಅದನ್ನು ರೂಢಿಸಿಕೊಳ್ಳಲು ಅಗತ್ಯವಾದ ಸಂಪತ್ತು ಮತ್ತು ಪರಿಜ್ಞಾನ ಅಪೇಕ್ಷಿಸುವ ದೇಶಗಳಲ್ಲಿದ್ದರೆ ಸಾಕು. ಭಾರತ, ಪಾಕಿಸ್ತಾನ, ಉತ್ತರ ಕೊರಿಯ, ಇಸ್ರೇಲ್ ಮೊದಲಾದ ರಾಷ್ಟ್ರಗಳು ನ್ಯೂಕ್ಲಿಯರ್ ಕೂಟ ಸೇರಿವೆ; ಅಧಿಕೃತ ಪ್ರವೇಶ ದೊರೆತಿಲ್ಲ ಅಷ್ಟೆ. ಬೇರೆ ದೇಶಗಳು ಇಂಥ ಸಾಹಸ ಕೈಗೊಳ್ಳುವುದಿಲ್ಲ ಎನ್ನುವ ಭರವಸೆ ಏನಿಲ್ಲ. ಹಾಗಾಗಿ ನ್ಯೂಕ್ಲಿಯರ್ ಅಸ್ತ್ರಗಳ ಭೀತಿ ತಪ್ಪಿದ್ದಲ್ಲ. ಅದಕ್ಕಾಗಿಯೇ ನ್ಯೂಕ್ಲಿಯರ್ ಅಸ್ತ್ರಗಳ ಸಂಪೂರ್ಣ ವಿಸರ್ಜನೆಗಾಗಿ ೧೯೫೦ರ ದಶಕದಲ್ಲೇ ಜಗತ್ತಿನಾದ್ಯಂತ ಚಳವಳಿ ನಡೆಯಿತು. ಕೋಟಿ ಕೋಟಿ ಸಹಿ ಸಂಗ್ರಹಣ ಮಾಡಿ ವಿಶ್ವಸಂಸ್ಥೆಗೆ ಮನವಿ ಮಾಡಿಕೊಂಡರು ಪ್ರಪಂಚದ ಜನ. ಆದರೆ ಅಧಿಕಾರಸ್ಥರು ಅದಕ್ಕೆ ಕಿವಿಗೊಡಲಿಲ್ಲ. ಇತ್ತೀಚೆಗೆ ಇರಾನಿಗೆ ಬಾಂಬ್ ಬೆದರಿಕೆ !

ಈಗ ನ್ಯೂಕ್ಲಿಯರ್ ಅಸ್ತ್ರಗಳ ಸಂರಕ್ಷಣೆ ಮತ್ತು ಭದ್ರತೆ ಬಗ್ಗೆ ಕಾಳಜಿ. ವಾಷಿಂಗ್ಟನ್‌ನಲ್ಲಿ ಈಚೆಗೆ ಈ ಬಗ್ಗೆ ನ್ಯೂಕ್ಲಿಯರ್ ರಾಷ್ಟ್ರಗಳ ನಾಯಕರ ಶೃಂಗಸಭೆಯೊಂದು ಎರಡು ದಿನಗಳು ನಡೆಯಿತು. ಭಾರತವೂ ಅದರಲ್ಲಿ ಭಾಗವಹಿಸಿತ್ತು. ಎರಡು ದಿನಗಳ ಈ ಸಭೆಯ ಫಲಿತಾಂಶ ಕೇವಲ ಶಬ್ದಾಡಂಬರ ಮತ್ತು ಸದಾಶಯ ಬಿಟ್ಟರೆ ಬೇರೇನೂ ಇಲ್ಲ. ಕಳೆದ ವರ್ಷ ವಿಶ್ವಸಂಸ್ಥೆಯ ಮಹಾಸಭೆಯನ್ನು ಉದ್ದೇಶಿಸಿ ಅಮೆರಿಕದ ಅಧ್ಯಕ್ಷ ಬರಾಕ್ ಒಬಾಮಾ ನ್ಯೂಕ್ಲಿಯರ್ ಅಸ್ತ್ರಗಳ ವಿಸರ್ಜನೆ, ನಿರಾಯುಧೀಕರಣ ಮೊದಲಾದ ವಿಷಯಗಳನ್ನು ಪ್ರಸ್ತಾಪ ಮಾಡಿ ವ್ಯಕ್ತಗೊಳಿಸಿದ ಸದಾಶಯಗಳೇ ಈಚೆಗೆ ಜರುಗಿದ ಶೃಂಗಸಭೆಗೆ ಪ್ರೇರಣೆ. ವಿಶ್ವಸಂಸ್ಥೆ ಭಾಷಣ ಒಬಾಮಾಗೆ ನೊಬೆಲ್ ಪುರಸ್ಕಾರ ತಂದುಕೊಟ್ಟದ್ದೊಂದೇ ಭಾಗ್ಯ. ಶೃಂಗಸಭೆಯಲ್ಲಿ ನ್ಯೂಕ್ಲಿಯರ್ ಅಸ್ತ್ರಗಳ ವಿಸರ್ಜನೆಯ ಕುರಿತಾಗಲಿ, ನಿರಾಯುಧೀಕರಣದ ಬಗ್ಗೆಯಾಗಲಿ ಯಾವುದೇ ನಿರ್ದಿಷ್ಟ ಕ್ರಮಗಳ ಕಾರ್ಯಸೂಚಿ ಪ್ರಕಟವಾಗಲಿಲ್ಲ. ಚರ್ಚೆಯೆಲ್ಲ ಇರುವ ದಾಸ್ತಾನನ್ನು ಸುರಕ್ಷಿತವಾಗಿ, ಸುಭದ್ರವಾಗಿ ಕಾಪಾಡುವುದು ಹೇಗೆ ಎಂಬುದರ ಬಗ್ಗೆ, ಬೇರೆ ದೇಶಗಳಿಗೆ ಅದು ದಕ್ಕದ ಹಾಗೆ ನೋಡಿಕೊಳ್ಳುವುದು ಹೇಗೆ ಎನ್ನುವುದರ ಮೇಲೆಯೇ. ನ್ಯೂಕ್ಲಿಯರ್ ತರೆತ್ರಜ್ಞಾನ ಸುಲಭವಾಗಿ ಲಭ್ಯವಾಗಿರುವ ಇಂದು ನ್ಯೂಕ್ಲಿಯರ್ ಅಸ್ತ್ರ ಉಗ್ರಗಾಮಿಗಳ ಕೈವಶವಾಗುವ ಭೀತಿ ಹೆಚ್ಚಾಗಿದೆ. ಅದರಲ್ಲೂ ಮುಖ್ಯವಾಗಿ ಪಾಕಿಸ್ತಾನದಂಥ ಅಸ್ಥಿರ ದೇಶದ ಬಳಿ ನ್ಯೂಕ್ಲಿಯರ್ ಅಸ್ತ್ರ ಇರುವುದು ತಲೆನೋವಾಗಿದೆ. ಅದೇ ಗಾಬರಿ ಈಗ.

ನ್ಯೂಕ್ಲಿಯರ್ ಅಸ್ತ್ರಗಳು ಎಲ್ಲಿಯವರೆಗೆ ಇರುವುವೋ ಅಲ್ಲಿಯವರೆಗೆ ಅಪಾಯ ತಪ್ಪಿದ್ದಲ್ಲ. ಅವನ್ನು ದೊಡ್ಡ ಪ್ರಮಾಣದಲ್ಲಿ ಹೊಂದಿರುವ ರಾಷ್ಟ್ರಗಳು ಮಾತ್ರ ಜವಾಬ್ದಾರಿಯುತವಾದವು, ಬೇರೆಯವು ಅಲ್ಲ ಎನ್ನುವ ವಿಚಾರ ಅರ್ಥವಿಲ್ಲದ್ದು. ಯಾರ ಬಳಿಯಿದ್ದರೂ ಮಾರಕಾಸ್ತ್ರ ಮಾರಕಾಸ್ತ್ರವೆ. ಆಕಸ್ಮಿಕವಾಗಿ ಸ್ಫೋಟಗೊಂಡರೂ ಸರ್ವನಾಶ. ಹಾಗಿರುವಾಗ ಅವುಗಳ ವಿಸರ್ಜನೆಗೆ ಮಾರ್ಗೋಪಾಯ ಹುಡುಕುವುದು ಕ್ಷೇಮ. ಅಸ್ತ್ರಗಳು ಅಸ್ತಿತ್ವದಲ್ಲಿರುವವರೆಗೆ ಅಪಾಯ ಇದ್ದೇ ಇರುತ್ತದೆ. ಅಮೆರಿಕಾ ನ್ಯೂಕ್ಲಿಯರ್ ಶಕ್ತಿವಿಚಾರದಲ್ಲಿ ದ್ವಿಮುಖ ನೀತಿ ಅನುಸರಿಸುತ್ತಿರುವುದು ಅಪಾಯಕಾರಿ. ಇಸ್ರೇಲಿನಂಥ ದೇಶದ ನ್ಯೂಕ್ಲಿಯರ್ ಕಾರ್ಯಕ್ರಮದ ಬಗ್ಗೆ ಆಕ್ಷೇಪವಿಲ್ಲ, ಆದರೆ ಇರಾನಿನ ಮೇಲೆ ಕೆಂಗಣ್ಣು. ಇಂಥ ಇಬ್ಬಗೆ ನೀತಿ ನಿಜಕ್ಕೂ ಸಲ್ಲದು. ಇದರಿಂದ ಬಿಕ್ಕಟ್ಟು ತೀವ್ರಗೊಳ್ಳುತ್ತದೆ. ಎಲ್ಲ ದೇಶಗಳಿಗೂ ಒಂದೇ ಬಗೆಯ ನಿಯಂತ್ರಣ ನೀತಿ ಇರಬೇಕು. ನಿರ್ದಿಷ್ಟ ಕಾರ್ಯಸೂಚಿ ಇಲ್ಲದ ಶೃಂಗಸಭೆಗಳಿಂದ ಪ್ರಯೋಜನಲಿಲ್ಲ. ಪರಮಾಣು ಅಸ್ತ್ರಗಳ ಸಂಪೂರ್ಣ ನಿರ್ನಾಮ ಒಂದೇ ಸುರಕ್ಷತೆಗೆ, ಮಾನವ ಕುಲದ ಉಳಿವಿಗೆ ಇರುವ ನಿಶ್ಚಯ.

**ಸೀಯಾರ್ಕೆ**

'ಚೌಬೀನ', ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ, ೩ನೇ ಬ್ಲಾಕ್, ಕತ್ರಿಗುಪ್ಪೆ ಬೆಂಗಳೂರು - ೮೫

# ಸಾಲುದೀಪಗಳ ಹಾವನೂರರು



ಸುಮಾರು ಹತ್ತು ವರ್ಷಗಳ ಹಿಂದೆ ನಾನೊಂದು ಮುದ್ರಣಾಲಯದಲ್ಲಿ ಕರಡು ತಿದ್ದುವ ಕೆಲಸ ಮಾಡುತ್ತಿದ್ದೆ. ಒಂದು ದಿನ ಮುದ್ರಣಾಲಯದ ಮಾಲೀಕರು ತಮ್ಮ ಕೊಠಡಿಗೆ ನನ್ನನ್ನು ಬರ ಹೇಳಿದರು. ಅವರ ಎದುರಿಗೆ ಒಬ್ಬರು ಕುಳಿತಿದ್ದರು. ಅವರನ್ನು ಕೇಳಿಬಲ್ಲೆ, ಮತ್ತೆ ಪತ್ರಿಕೆಗಳಲ್ಲೂ ಅವರ ಚಿತ್ರ ನೋಡಿ ಇವರು ಶ್ರೀನಿವಾಸ ಹಾವನೂರರು ಎಂದು ಗೊತ್ತಾಯಿತು. ''ಇವರು ಶ್ರೀನಿವಾಸ ಹಾವನೂರ್ ಅಂತ. ಇವರ ಒಂದು ಪುಸ್ತಕದ ಪ್ರೂಫ್ ಓದಬೇಕಂತೆ. ನೀವು ಓದಿಕೊಡಿ'' ಎಂದು ಯಜಮಾನರು ಒಂದು ಫೈಲನ್ನು ನನ್ನ ಕೈಗೆ ಕೊಟ್ಟರು. ''ಆದಷ್ಟು ಬೇಗ, ಒಂದು ವಾರದೊಳಗೆ ಓದಿಕೊಡಿ. ಓದಿದ ಮೇಲೆ ನಿಮ್ಮ ಯಜಮಾನರ ಹತ್ತಿರ ಕೊಡಿ. ಅವರು ನನಗೆ ತಲುಪಿಸುತ್ತಾರೆ'' ಎಂದರು ಹಾವನೂರರು. ನಾನು ಒಂದು ವಾರದಲ್ಲೇ ಅದನ್ನು ಓದಿ ಯಜಮಾನರ ಕೈಗೆ ಕೊಟ್ಟೆ. ಅದನ್ನು ಅವರು ಹಾವನೂರರಿಗೆ ತಲುಪಿಸಿದರು. ಇದಾದ ಸುಮಾರು ಒಂದು ತಿಂಗಳ ಮೇಲೆ ಹಾವನೂರರಿಂದ ನನಗೊಂದು ಪತ್ರ ಬಂತು. ಅದರ ಜೊತೆಯಲ್ಲಿ ಇನ್ನೂರು ರೂಪಾಯಿಗಳ ಒಂದು ಚೆಕ್ ಇತ್ತು. ''ತಾವು ಪ್ರೂಫ್ ಚೆನ್ನಾಗಿ ಓದಿದ್ದೀರಿ. ಈ ಹಣ ಓದಿದ್ದರ ಶುಲ್ಕ ಎಂದು ಕೊಟ್ಟಿಲ್ಲ, ಇದು ಖುಷಿಯಿಂದ ಕೊಟ್ಟ ಹಣ'' ಎಂದು ಬರೆದಿದ್ದರು.

ಬಹಳ ದಿನಗಳ ನಂತರ ಅವರಿಂದ ನನಗೊಂದು ಫೋನ್ ಬಂತು. ''ಶಾಸ್ತ್ರಿಯವರು ಇದ್ದಾರೇನ್ರಿ ?'' ''ನಾನೇ ಸಾರ್, ಶಾಸ್ತ್ರಿ ಮಾತಾಡ್ತಿರೋದು.'' ''ನನ್ನದೊಂದು ಪುಸ್ತಕ ರೀಪ್ರಿಂಟ್ ಆಗ್ತಾ ಇದೆ. ಡಿ.ಟಿ.ಪಿ. ಮಾಡಿದವರು ಒಮ್ಮೆ ಓದಿದ್ದಾರಂತೆ. ನೀವೊಮ್ಮೆ ಓದಿಕೊಡ್ತೀರೇನು ?'' ಎಂದು ಹೇಳಿ ಮನೆಯ ವಿಳಾಸ ಕೊಟ್ಟರು. ಆಗ ಅವರು ಬೆಂಗಳೂರಿನ ವಿಜಯನಗರದ ಸುಬ್ಬಣ್ಣ ಗಾರ್ಡನ್‌ನಲ್ಲಿ ಒಂದು ಅಪಾರ್ಟ್‌ಮೆಂಟಿನಲ್ಲಿದ್ದರು. ಸಂಜೆ ಅವರ ಮನೆಗೆ ಹೋದೆ. ''ಶಾಸ್ತ್ರಿಯವರೇನ್ರಿ ಬನ್ರಿ, ಕೂಡ್ರಿ'' ಎಂದು ಒಳಗೆ ಹೋದರು. ನಾನು ಹಾಲ್‌ನಲ್ಲಿ ನಿಂತುಕೊಂಡೇ ಇದ್ದೆ. ''ಏನ್ರಿ ಅಲ್ಲೇ ನಿಂತೀರಲ್ಲ, ಬರ್ರಿ , ಒಳಗೆ ಬರ್ರಿ'' ಎಂದು ಅವರ ಓದುವ-ಬರೆಯುವ ಕೊಠಡಿಗೇ ಕರೆದರು. ಅಲ್ಲೂ ಹೋಗಿ ನಿಂತುಕೊಂಡೇ ಇದ್ದೆ. ''ಕೂಡ್ರಿ ಕೂಡ್ರಿ'' ಎಂದು ಸೋಫಾದ ಮೇಲೆ ಕುಳ್ಳಿರಿಸಿದರು. ಅವರೂ ನನ್ನ ಪಕ್ಕದಲ್ಲೆ ಒಂದು ಫೈಲು ಹಿಡಿದು ಕುಳಿತರು. ''ಇದು 'ಹೊಸಗನ್ನಡದ ಅರುಣೋದಯ' ಎನ್ನುವ ನನ್ನ ಕೃತಿಯ ಪ್ರೂಫ್ ಈಗ ಮರುಮುದ್ರಣವಾಗುತ್ತಾ ಇದೆ. ಹಿಂದೆ ಇದು ಲೆಟರ್‌ಪ್ರೆಸ್‌ನಲ್ಲಿ ಆಗಿದ್ದು. ಈಗ ಡಿ.ಟಿ.ಪಿ. ಮಾಡಿಸೇನಿ. ಡಿ.ಟಿ.ಪಿ. ಮಾಡಿದವರೂ ಒಮ್ಮೆ ಓದ್ಯಾರಂತ. ನೀವೂ ಒಮ್ಮೆ ಓದಿಬಿಡ್ರಿ. ಇದರಲ್ಲಿ ಪೂರ್ಣ ಪುಸ್ತಕದ ಪ್ರೂಫ್ ಇಲ್ಲ, ಡಿ.ಟಿ.ಪಿ. ಆದ ಹಾಗೆ ಕೊಡ್ತೀನಿ, ಓದಿ ಕೊಡ್ರಿ'' ಎಂದರು. ''ಆಯ್ತು ಸಾರ್'' ಎಂದು ನಾನು ಪ್ರೂಫ್ ತೆಗೆದುಕೊಂಡೆ, ಹೊರಟೆ. ''ಹೊರಡಬ್ಯಾಡ್ರಿ, ಇರ್ರಿ ಚಾ ಕುಡಿದು ಹೋಗುವಂತೆ'' ಎಂದು ಚಹ ತಂದುಕೊಟ್ಟರು.

ಹೀಗೆ 'ಹೊಸಗನ್ನಡದ ಅರುಣೋದಯ' ಪುಸ್ತಕ ಪೂರ್ಣ ಕಂಪೋಸ್ ಆಗಿ, ಪ್ರೂಫ್ ನೋಡಿ, ಮುದ್ರಣಕ್ಕೆ ಹೋಗುವವರಿಗೆ ಅವರ ಮನೆಗೆ ಹೋಗಿ-ಬಂದು ಮಾಡುತ್ತಿದ್ದೆ. ಈ ರೀತಿ ಹೋಗಿ-ಬರುವುದು ಅಷ್ಟಕ್ಕೇ ನಿಲ್ಲಲಿಲ್ಲ, ಪ್ರೂಫ್ ಓದಿಕೊಡುವ ಕೆಲಸಕ್ಕೆ ಮಾತ್ರ ನಿಲ್ಲಲಿಲ್ಲ. ಬರಬರುತ್ತಾ ಅವರು ನನ್ನನ್ನು ಆತ್ಮೀಯವಾಗಿ ''ಬಾರಪ್ಪ ಶಾಸ್ತ್ರಿ ಬಾ'' ಎಂದೇ ಕರೆಯುತ್ತಿದ್ದರು. ನಾನು ಓದಿಕೊಟ್ಟ ಪ್ರೂಫ್ ನೋಡಿ ''ಏನಪ್ಪಾ ಶಾಸ್ತ್ರಿ, ಏನೇನೋ ಮಾರ್ಕ್ ಮಾಡೀಯಲ್ಲಾ'' ಎಂದು ಒಮ್ಮೆ ಪ್ರೂಫ್ ಮೇಲೆ ಕಣ್ಣಾಡಿಸಿ ''ಚಲೋ ಓದೀಯಪ್ಪ. ಎಲ್ಲಿ ಕಲ್ತಿ ?'' ಎಂದು ಕೇಳಿದರು. ಪ್ರತಿಸಾರಿ ಅವರ ಮನೆಗೆ ಹೋದಾಗಲೂ ವಿಚಾರಿಸಿ ಕೊಳ್ಳುತ್ತಿದ್ದರು. ''ಎಷ್ಟು ಸಂಬಳ ಬರುತ್ತದೆ ? ಮನೆ ಬಾಡಿಗೆ ಎಷ್ಟು? ಮಕ್ಕಳು ಎಷ್ಟು? ಏನು ಓತ್ತಾರ ? ಇಷ್ಟು ಕಡಿಮಿ ಸಂಬಳ ತಗೊಂಡು ಹ್ಯಾಂಗಪ್ಪಾ ಈ ಬೆಂಗಳೂರಾಗ ಜೀವನ ಮಾಡ್ತಿ ?'' ಎಂದು ಬಹಳ ಅಂತಃಕರಣಪೂರ್ವಕವಾಗಿ ಮಾತನಾಡಿಸುತ್ತಿದ್ದರು. ಒಮ್ಮೆಯಂತೂ ಹೀಗೆ ಏನೇನೊ ಮಾತನಾಡುತ್ತಾ ನಾನು ''ನಾಳೆ ನನ್ನ ಮಕ್ಕಳ ಶಾಲಾ ಅಡ್ಮಿಶನ್ ಮಾಡಬೇಕು. ನಾಳೆಯೇ ಕೊನೆಯ ದಿನಾಂಕ. ಒಂದು ಸಾವಿರ ರೂಪಾಯಿ ಕಡಿಮೆ ಆಗಿದೆ. ಏನು ಮಾಡುವುದೆಂದು ತಿಳಿಯುತ್ತಿಲ್ಲ'' ಎಂದು ಮಾತಿನ ಮಧ್ಯೆ ಅಂದುಬಿಟ್ಟೆ. ''ನೀನೇನೂ ಚಿಂತಿ ಮಾಡಬೇಡ ಶಾಸ್ತ್ರಿ'' ಎಂದು ತಕ್ಷಣ ಟೇಬಲ್ ಡ್ರಾ ಎಳೆದು ಒಂದು ಸಾವಿರ ರೂಪಾಯಿ ಎಣಿಸಿ ಕೊಟ್ಟೇಬಿಟ್ಟರು. ನನಗೆ ಏನು ಹೇಳಬೇಕೊ ತಿಳಿಯಲಿಲ್ಲ. ಹಣವನ್ನು ಹಾಗೇ ಕೈಯಲ್ಲೇ ಹಿಡಿದುಕೊಂಡೇ ಇದ್ದೆ. ''ತಗೋ ಅಪ್ಪ ತಗೋ, ಮಕ್ಕಳ ಶಾಲಿ ಅಡ್ಮಿಶನ್ ನಡೀಲಿ'' ಎಂದರು.

ನಾನೂ ಕೂಡ ಅವರ ಹತ್ತಿರ ಪ್ರೂಫ್ ಓದಿದ್ದಕ್ಕೆ ಇಷ್ಟು ಹಣ ಕೊಡಿ ಎಂದು ಯಾವತ್ತೂ ಕೇಳಲಿಲ್ಲ. ಅವರು ಕೊಟ್ಟ ಹಣವನ್ನು ಎಣಿಸದೆ ಜೇಬಿನಲ್ಲಿಟ್ಟುಕೊಳ್ಳುತ್ತಿದ್ದೆ. 'ಹೊಸಗನ್ನಡದ ಅರುಣೋದಯ'ದ ಪ್ರೂಫ್ ಆದಮೇಲೆ ಇನ್ನೂ ಯಾವಾವುದೋ ಪ್ರೂಫ್ ಓದಲು ಕೊಟ್ಟಿದ್ದರು, ತಮ್ಮ ಸ್ನೇಹಿತರಿಗೂ ಹೇಳಿ ಅವರ ಪುಸ್ತಕಗಳ ಪ್ರೂಫ್‌ಅನ್ನೂ ಕೊಡಿಸುತ್ತಿದ್ದರು. ''ಇರು ಶಾಸ್ತ್ರಿ, ಒಂದು ಯೋಜನೆ ಅದ. ಅದೇನಾದ್ರೂ ನಡೆದ್ರ, ಆ ಎಲ್ಲಾ ಪುಸ್ತಕಗಳ ಪ್ರೂಫ್ ನೀನೇ ಓದು. ನಿನಗೆ ತಿಂಗಳಲ್ಲಿ ಪ್ರಾವಿಷನ್‌ಗೋ ಹಾಲಿಗೋ ಯಾವುದಕ್ಕಾದರೂ ಆಗುತ್ತದ'' ಎಂದಿದ್ದರು. ಆದರೆ ಈ ಯೋಜನೆ ಏನಾಯಿತೋ ತಿಳಿಯಲಿಲ್ಲ. ಈ ನಡುವೆ ಕಾರಣಾಂತರದಿಂದ ನಾನು ಕೆಲಸ ಮಾಡುತ್ತಿದ್ದ ಮುದ್ರಣಾಲಯ ಬಿಟ್ಟು ಬೇರೆಡೆ ಕೆಲಸಕ್ಕೆ ಸೇರಬೇಕಾಯಿತು. ಎಷ್ಟೇ ಅನುಭವವಿದ್ದರೂ ಕೆಲಸಕ್ಕೆ ಸೇರಿದ ಪ್ರಾರಂಭದಲ್ಲಿ ಸಂಬಳ ಕಡಿಮೆಯೇ. ಈ ವಿಚಾರ ಕೇಳಿ ಹಾವನೂರರು ಬಹಳ ನೊಂದುಕೊಂಡರು. ನನ್ನ ಕೆಲಸಕ್ಕಾಗಿ ಒಂದೆರಡು ಕಡೆ ಫೋನ್ ಕೂಡ ಮಾಡಿದ್ದರು. ಒಂದು ವೃತ್ತಪತ್ರಿಕಾ ಕಚೇರಿಗೂ ಅವರೇ ಕಳುಹಿಸಿದ್ದರು. ಆದರೆ ಅಲ್ಲಿ ಕೆಲಸ ಇಲ್ಲ ಎಂದು ಹೇಳಲಿಲ್ಲ, ಆದರೆ ಅವರು ಕೆಲಸ ಕೊಡಲಿಲ್ಲ. ''ಬಿಡಪ್ಪಾ ಅದಲ್ಲದಿದ್ದರೆ ಇನ್ನೊಂದು ನಾಲ್ಕಾರು ಕಡೆ ವಿಚಾರಿಸು'' ಎಂದರು. ನೀನು ಕೆಲಸ ಕೇಳಲು ಹೋದೆಡೆಯಲ್ಲಿ ''ನನ್ನ ಹೆಸರನ್ನು ಹೇಳು'' ಎನ್ನುವ ಸ್ವಾತಂತ್ರ್ಯವನ್ನೂ ಕೊಟ್ಟಿದ್ದರು. ಈ ನಡುವೆ ನನಗೆ ಬೇರೊಂದು ಕಂಪನಿಯಲ್ಲಿ ಕೆಲಸ ಸಿಕ್ಕು ದಿನ ಸಾಗುವಂತಾಯಿತು.

ನನಗೆ ಮುಖ್ಯವಾಗಿ ಹಾವನೂರರನ್ನು ಜ್ಞಾಪಿಸಿಕೊಂಡಾಗ ಅವರು ತೋರುತ್ತಿದ್ದ ಪ್ರೀತಿ- ವಿಶ್ವಾಸ- ಆತ್ಮೀಯತೆ ನೆನಪಿಗೆ ಬರುತ್ತದೆ. ಯಾವಾಗಲೂ ಒಳಗೆ (ತಾವು ಓದುವ ಕೊಠಡಿ) ಕರೆದು ಕುಳ್ಳಿರಿಸಿ ಚಾ ಕೊಟ್ಟು ನಂತರ ಮಾತು. ಚಾ ಇಲ್ಲದಿದ್ದರೆ ಅವರ ಬರೆಯುವ ಟೇಬಲ್‌ನ ಪಕ್ಕದ ಡ್ರಾನಲ್ಲಿ ಇಟ್ಟಿರುತ್ತಿದ್ದ ಉಂಡೆಯನ್ನೊ, ಹುರಿದ ಅವಲಕ್ಕಿಯನ್ನೊ ತಟ್ಟೆಯಲ್ಲಿ ಹಾಕಿಕೊಡುತ್ತಿದ್ದರು. ಒಮ್ಮೆಯಂತೂ ''ಶಾಸ್ತ್ರಿ, ನಾನೊಂದು ಸಾರ ಮಾಡೇನಿ'' ಎಂದು ಒಂದು ಲೋಟ ಸಾರು ತಂದುಕೊಟ್ಟರು. ಅದು ಹುಣಿಸೆಹಣ್ಣು-ಮೆಣಸಿನಕಾಳು ಹಾಕಿ ನಮ್ಮಲ್ಲಿ ಮಾಡುತ್ತಿದ್ದ ಸಾರಿನಂತಿತ್ತು. ಕುಡಿದು ನನಗೆ ಬಹಳ ಹಿತವೆನಿಸಿತು. ಹಾಗೆ ಇನ್ನೊಂದು ವಿಚಾರ : ಅವರು ಅಚ್ಚ ಧಾರವಾಡ ಕನ್ನಡದಲ್ಲಿ ಆಡುವ ಮಾತು, ಮಾತಿನಲ್ಲಿ ತುಂಬಿರುತ್ತಿದ್ದ ಆತ್ಮೀಯತೆ. ಅವರ ಮನೆಗೆ ಹೋದಾಗ ಹಾಗೇ ಕಳುಹಿಸಿದ್ದೇ ಇಲ್ಲ. ಏನೂ ಇಲ್ಲ ಎಂದರೆ ''ತಗೋ ಅಪ್ಪ ಒಂದು ಬಾಳಿಹಣ್ಣು. ಇಂದು ಚಾ ಇಲ್ಲ'' ಅನ್ನುತ್ತಿದ್ದರು.

ನಾನು ಹಾವನೂರರ ಬಗ್ಗೆ ಹೇಳುವುದೇನಿದ್ದರೂ ಅವರ ಪ್ರೀತಿ-ವಿಶ್ವಾಸ-ಆತ್ಮೀಯತೆ ಬಗ್ಗೆ ಮಾತ್ರ. ಅವರ ವ್ಯಕ್ತಿ ಚಿತ್ರಣ ಮಾಡುವುದಾಗಲೀ ಅವರ ಕೃತಿಗಳ ಬಗ್ಗೆ ಹೇಳುವುದಕ್ಕಾಗಲೀ ನಾನು ಸಮರ್ಥನಲ್ಲ, ಅಷ್ಟು ಧೈರ್ಯ ನನ್ನಲ್ಲಿಲ್ಲ. ಆದರೆ ಅವರ ಮಹತ್ವದ ಕೃತಿ, ಪುಣೆ ವಿಶ್ವವಿದ್ಯಾಲಯ ಡಾಕ್ಟರೇಟ್ ನೀಡಿದ ಕೃತಿ 'ಹೊಸಗನ್ನಡದ ಅರುಣೋದಯ'ದ ಪ್ರೂಫ್ ಓದಲು ಸಿಕ್ಕಿದ್ದು ನನ್ನ ಭಾಗ್ಯವೇ ಸರಿ. ಈ ಕೃತಿಯಲ್ಲಿ ಕನ್ನಡಕ್ಕೆ ಕ್ರೈಸ್ತ ಮಿಶನರಿಗಳ ಕೊಡುಗೆ, ನವೋದಯ ಸಾಹಿತ್ಯ ಬೆಳೆದು ಬಂದದ್ದು, ಮುದ್ರಣ ಯಂತ್ರ, ಅಚ್ಚುಮೊಳೆ, ಕನ್ನಡ ಮುದ್ರಣ ಕ್ಷೇತ್ರದಲ್ಲಿ ಇವುಗಳ ಬಳಕೆ ಬಗ್ಗೆ ಸಾದ್ಯಂತವಾಗಿ ಚರ್ಚಿಸಿದ್ದಾರೆ. ಈ ಮಹತ್ವದ ಕೃತಿಯಲ್ಲದೆ ಇವರು 'ಕಂಪ್ಯೂಟರ್ ಸಾಹಿತ್ಯ', 'ಕನ್ನಡದಲ್ಲಿ ಕ್ರೈಸ್ತ ಸಾಹಿತ್ಯ', 'ಬೈರಪ್ಪನವರ ಕಾದಂಕಥನಗಳು', 'ಗೋವಾದ ಪೈ ವಾಙ್ಮಯ ದರ್ಶನ', 'ರೆ. ಫ. ಕಿಟೆಲ್ ಕುರಿತು ಅಧ್ಯಯನಗಳು' ಇತ್ಯಾದಿ ಕೃತಿಗಳನ್ನು ರಚಿಸಿದ್ದಾರೆ. ಅವರ ಸಂಪಾದಿತ ಕೃತಿಗಳು : ಕನ್ನಡ ದಾಸ ಸಾಹಿತ್ಯ : ೧೬ ಸಂಪುಟಗಳು, ಬೆಂಗೇರಿಯವರ ಬರೆಹಗಳು, ಪಾ. ವೆಂ. ಆಚಾರ್ಯರ ಸಮಗ್ರ ಕೃತಿಗಳು, ಮುದ್ದಣ, ಕನಕದಾಸರ ಪದ, ಗಳಗನಾಥ ಮಾಸ್ತರರು, ವಾದಿರಾಜತೀರ್ಥ ಪ್ರಬಂಧ, ಮುಂತಾದವು. ಅಲ್ಲದೆ ನೂರಾರು ಇಂಗ್ಲಿಷ್ ಹಾಗೂ ಕನ್ನಡ ಬಿಡಿ ಲೇಖನಗಳು.

ಅವರ 'ಹೊಸಗನ್ನಡದ ಅರುಣೋದಯ' ಪುಸ್ತಕದ ಪ್ರೂಫ್ ಓದಿ ಮುಗಿಸಿಕೊಟ್ಟು ಹೊರಟು ನಿಂತಾಗ ''ಶಾಸ್ತ್ರಿ ನಿಲ್ಲಪ್ಪಾ, ನಾನು ನಿನಗೊಂದು ಪುಸ್ತಕ ಕೊಡತೇನಿ'' ಎಂದು ಹೇಳಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಕಟಿತ ಕನ್ನಡದ ಹಿಂದಿನ-ಇಂದಿನ ಸಾಹಿತಿಗಳ ವ್ಯಕ್ತಿ ಚಿತ್ರಣವಿರುವ ಉತ್ತಮ ಕೃತಿ 'ಸಾಲುದೀಪಗಳು' ಎನ್ನುವ ಕೃತಿಯನ್ನು ತಮ್ಮ ಪುಸ್ತಕದ ಕಪಾಟಿನಿಂದ ತೆಗೆದು ಸಹಿಮಾಡಿ ನನಗೆ ಕೊಟ್ಟರು. ಈಗ ಉರಿಯುವ ಆ ಸಾಲುದೀಪಗಳ ಸಾಲಿನಲ್ಲಿ ನನಗೆ ಮೊದಲು, ಮಧ್ಯೆ ಎಲ್ಲೆಲ್ಲೂ ಹಾವನೂರರೇ ಕಾಣುತ್ತಾರೆ.

ಎ. ರಾಮಚಂದ್ರ ಶಾಸ್ತ್ರಿ
ನಂ. ೧೦೫೪, 'ಶಾರದಾಂಬ', ೬ನೇ ಅಡ್ಡರಸ್ತೆ, ಬನಶಂಕರಿ ೧ನೇ ಹಂತ
೨ನೇ ಬ್ಲಾಕ್, ಅಶೋಕನಗರ, ಬೆಂಗಳೂರು - ೫೬೦ ೦೫೦



ಅತ್ಯಂತ ಬಡತನದ ಹಿನ್ನೆಲೆಯಿಂದ ಕ್ರಿಶ್ಚಿಯನ್ ಬರ್ನಾರ್ಡ್ ಬಂದಿದ್ದು, ಅವನ ತಂದೆ ವರ್ಣೀಯ ಜನರ ಕ್ರೈಸ್ತ ಧರ್ಮ ಗುರುವಾಗಿದ್ದು, ಕುಟುಂಬವೇ ಉದಾರ ಮನೋಭಾವದ ಮಾನವತಾವಾದಿಗಳಾಗಿದ್ದರು. ಕ್ರಿಶ್ಚಿಯನ್ ಬರ್ನಾರ್ಡ್ ತಮ್ಮ ವಿದ್ಯಾರ್ಥಿ ದೆಸೆಯಿಂದಲೇ ಅತ್ಯಂತ ಶಿಸ್ತು, ಶ್ರದ್ಧೆ, ಕಠಿಣ ಪರಿಶ್ರಮ ಪಡುವ ವ್ಯಕ್ತಿಯಾಗಿದ್ದರು. ಈ ಬಾಲಕನಿಗೆ ಸುಲಭವಾಗಿಯೇ ಮೆಡಿಕಲ್ ಕಾಲೇಜಿನಲ್ಲಿ ಪ್ರವೇಶ ದೊರಕಿತು. ಅಲ್ಲೂ ಅವರೊಬ್ಬ ಅಸಾಧಾರಣ ಪ್ರತಿಭೆಯ ವಿದ್ಯಾರ್ಥಿಗಳಾಗಿದ್ದರು. ನಮ್ಮ ಈಗಿನ ವಿದ್ಯಾರ್ಥಿಗಳು, ವಿಶೇಷವಾಗಿ ವೈದ್ಯಕೀಯ ವ್ಯಾಸಂಗ ಮಾಡುವ ಯುವಜನರು ಬರ್ನಾರ್ಡ್ ಕ್ರಿಶ್ಚಿಯನ್‌ರ ವಿದ್ಯಾರ್ಥಿ ದೆಸೆ ಮತ್ತು ತದನಂತರ ಕ್ರಿಯಾಶೀಲವಾದ ಅವರ ವೈದ್ಯಕೀಯ ವೃತ್ತಿಯಿಂದ ಕಲಿಯಬೇಕಾದುದು ಬಹಳಷ್ಟಿದೆ.

# ಉದಾರ ಚರಿತರ ಚರಿತ್ರೆ

ವಿಜಯ ಶ್ರೀಧರ್



ಕನ್ನಡ ವೈದ್ಯಸಾಹಿತ್ಯ ಲೋಕದಲ್ಲಿ ಡಾ॥ ಎಚ್. ಡಿ. ಚಂದ್ರಪ್ಪಗೌಡರದು ಬಹುದೊಡ್ಡ ಹೆಸರು. ಈಗ ೮೦ರ ಇಳಿವಯಸ್ಸಿನಲ್ಲಿ ಅವರು ರಚಿಸಿರುವ 'ಡಾಕ್ಟರ್ ಕ್ರಿಶ್ಚಿಯನ್ ಬರ್ನಾರ್ಡ್' ಜೀವನ ಚರಿತ್ರೆ ೨೦೦೮ರಲ್ಲಿ ಬಂದಿರುವ ಒಂದು ಮಹತ್ವದ ಕೃತಿಯಾಗಿದೆ. ೧೪೪ ಪುಟಗಳ ಈ ಕೃತಿಯು ವೈದ್ಯಕೀಯ ವಿದ್ಯಾರ್ಥಿಗಳಿಗೆ ಮಾರ್ಗದರ್ಶಕವಾಗಿರುವುದಲ್ಲದೆ, ಜನಸಾಮಾನ್ಯರು ವೈದ್ಯಕೀಯ ವಿಜ್ಞಾನ ಕ್ಷೇತ್ರದ ಹಲವಾರು ಅದ್ಭುತ ಪ್ರಯೋಗಗಳ ಕುರಿತು ಅರಿಯಲು ಸಹಾಯಕವಾಗಿದೆ.

ಡಾ॥ ಎಚ್. ಡಿ. ಚಂದ್ರಪ್ಪಗೌಡರು ತಮ್ಮ ಸುದೀರ್ಘ ಸರಕಾರಿ ವೈದ್ಯ ವೃತ್ತಿಯಲ್ಲಿ ಅತ್ಯಂತ ಪ್ರಾಮಾಣಿಕರಾಗಿದ್ದವರು, ದಕ್ಷರು, ನಿಷ್ಠುರವಾದಿಗಳು. ತಮ್ಮ ವೃತ್ತಿಯಲ್ಲಿದ್ದಾಗ ಪ್ರಾಮಾಣಿಕ ಸೇವೆಯನ್ನೇ ವ್ರತವಾಗಿ ಸ್ವೀಕರಿಸಿದ್ದ ಡಾ॥ ಚಂದ್ರಪ್ಪಗೌಡರು, ವೈದ್ಯಸಾಹಿತ್ಯ ರಚನೆ ಮೂಲಕವೂ ಜನರಲ್ಲಿ ಜಾಗೃತಿ ಮೂಡಿಸಲು ಹೆಣಗಿದವರು, ಹೆಣಗುತ್ತಿರುವವರು. ತಮ್ಮ ಮನೋಭಾವಕ್ಕೆ ತಕ್ಕಂತೆ ವೈದ್ಯಕೀಯ ಕ್ಷೇತ್ರಕ್ಕೆ ಅಮೂಲ್ಯ ಕೊಡುಗೆ ಸಲ್ಲಿಸಿದ, ಉದಾರ ಚರಿತರ ಜೀವನಗಾಥೆ ಅವರನ್ನು ಸೆಳೆದಿದೆ. ಕನ್ನಡಿಗರಿಗೆ ಅಪರಿಚಿತವಾಗೆ ಉಳಿಯಬಹುದಾಗಿದ್ದ ಅಂಥ ದಿಗ್ಗಜರ ಕುರಿತು ತಿಳಿಸಬೇಕೆಂಬ ಕಾತುರ ಅವರದು. ಹಾಗಾಗಿಯೇ ಪ್ರಪ್ರಥಮ ಮಾನವ ಹೃದಯ ಟ್ರಾನ್ಸ್‌ಪ್ಲಾಂಟೇಶನ್ ಖ್ಯಾತಿಯ ಡಾಕ್ಟರ್ ಕ್ರಿಶ್ಚಿಯನ್ ಬರ್ನಾರ್ಡ್‌ರ ಜೀವನ ಚರಿತ್ರೆಯನ್ನು ಅವರೀಗ ಕನ್ನಡ ಭಾಷೆಗೆ ಕೊಡುಗೆಯಾಗಿ ನೀಡಿದ್ದಾರೆ. ಗುಲಬರ್ಗಾದ ಡಾ॥ ಪಿ. ಎಸ್. ಶಂಕರ್ ಪ್ರತಿಷ್ಠಾನ ಅದನ್ನು ಸಾಧ್ಯ ಮಾಡಿದೆ.

ಡಾ॥ ಚಂದ್ರಪ್ಪಗೌಡರದು ಸರಳ ಶೈಲಿ. ಅದು ಜನರನ್ನು ರಂಜಿಸಲು, ಆಕರ್ಷಿಸುವ ಯಾವ ಅಲಂಕಾರವನ್ನೂ ಬಳಸುವುದಿಲ್ಲ, ಆದರೆ ಆಯ್ದುಕೊಳ್ಳುವ ವಿಷಯಗಳೇ ಗಹನ - ಗಂಭೀರ - ಮಹತ್ವಪೂರ್ಣವಾದದ್ದರಿಂದ ಮನಸ್ಸನ್ನು ತಟ್ಟುತ್ತದೆ.

ವಿಚಿತ್ರವೆಂದರೆ ೨೦ನೇ ಶತಮಾನದಲ್ಲಿ ನಡೆದ ಬಾಹ್ಯಾಕಾಶ ಸಂಶೋಧನೆಗಳು, ಚಂದ್ರಗ್ರಹದ ಮೇಲೆ ಮಾನವ ನಡೆದಾಡಿದ ಸಾಧನೆ ಜಗತ್ತಿನ ಗಮನ ಸೆಳೆದಷ್ಟು, ಅದಕ್ಕಿಂತ ಎರಡು ವರ್ಷಗಳ (೧೯೬೭) ಮೊದಲು ವೈದ್ಯಕೀಯ ಕ್ಷೇತ್ರದಲ್ಲಿ ನಡೆದ ಸಾಧನೆ ಗಮನ ಸೆಳೆದಿರಲಿಲ್ಲ. ದಕ್ಷಿಣ ಆಫ್ರಿಕಾದಲ್ಲಿ ಆಗ ಮೊಟ್ಟಮೊದಲ ಬಾರಿ ಮಾನವ ಹೃದಯದ ನಾಟಿ ಶಸ್ತ್ರಚಿಕಿತ್ಸೆ ನಡೆದಿತ್ತು. ಅದರ ರೂವಾರಿ ಡಾ॥ ಕ್ರಿಶ್ಚಿಯನ್ ಬರ್ನಾರ್ಡ್.

ಇಂಥ ವ್ಯಕ್ತಿಯ ಬಾಲ್ಯ, ವಿದ್ಯಾಭ್ಯಾಸ, ಧ್ಯೇಯ, ಸಾಧನೆ, ಕೌಟುಂಬಿಕ ಜೀವನ ಹಲವು ಕಾರಣಗಳಿಂದ ಮನನಯೋಗ್ಯವಾಗಿದೆ. ಅದನ್ನು ಮನಗಂಡೇ ಡಾ॥ ಚಂದ್ರಪ್ಪಗೌಡರು ತಿಳಿಯಾದ ಕನ್ನಡದಲ್ಲಿ ಡಾ॥ ಕ್ರಿಶ್ಚಿಯನ್ ಬರ್ನಾರ್ಡ್‌ರ ಅಮೋಘವಾದ ಜೀವನ ಚರಿತ್ರೆಯನ್ನು ಬರೆದಿದ್ದಾರೆ. ಈ ಜೀವನ ಚರಿತ್ರೆ ಹಲವಾರು ದೃಷ್ಟಿಯಿಂದ ಗಮನ ಸೆಳೆಯುತ್ತದೆ. ವೈದ್ಯಕೀಯ ಸಂಶೋಧನೆಗಳು ನಡೆಯುವ ರೀತಿ, ಅದಕ್ಕಾಗಿ ವೈದ್ಯಕೀಯ ಸಿಬ್ಬಂದಿ ಪಡುವ ಶ್ರಮ, ತ್ಯಾಗ, ಅರ್ಪಣಾ ಮನೋಭಾವ ಮುಂತಾದವುಗಳು ಜೊತೆಗೆ, ಅಂದಿನ ಸಾಮಾಜಿಕ ಪರಿಸ್ಥಿತಿ ಡಾ॥ ಕ್ರಿಶ್ಚಿಯನ್ ಬರ್ನಾರ್ಡ್‌ನ ಕೌಟುಂಬಿಕ ಜೀವನ ಮುಂತಾದ ಕಾರಣಗಳಿಂದ ಕುತೂಹಲ ಕೆರಳಿಸುತ್ತದೆ, ಓದು ಆಕರ್ಷಕವಾಗುತ್ತದೆ.

ಅತ್ಯಂತ ಬಡತನದ ಹಿನ್ನೆಲೆಯಿಂದ ಕ್ರಿಶ್ಚಿಯನ್ ಬರ್ನಾರ್ಡ್ ಬಂದಿದ್ದು, ಅವನ ತಂದೆ ವರ್ಣೀಯ ಜನರ ಕ್ರೈಸ್ತ ಧರ್ಮಗುರುವಾಗಿದ್ದು, ಕುಟುಂಬವೇ ಉದಾರ ಮನೋಭಾವದ ಮಾನವತಾವಾದಿಗಳಾಗಿದ್ದರು. ಕ್ರಿಶ್ಚಿಯನ್ ಬರ್ನಾರ್ಡ್ ತಮ್ಮ ವಿದ್ಯಾರ್ಥಿ ದೆಸೆಯಿಂದಲೇ ಅತ್ಯಂತ ಶಿಸ್ತು, ಶ್ರದ್ಧೆ, ಕಠಿಣ ಪರಿಶ್ರಮ ಪಡುವ ವ್ಯಕ್ತಿಯಾಗಿದ್ದರು. ಈ ಬಾಲಕನಿಗೆ ಸುಲಭವಾಗಿಯೇ ಮೆಡಿಕಲ್ ಕಾಲೇಜಿನಲ್ಲಿ ಪ್ರವೇಶ ದೊರಕಿತು. ಅಲ್ಲೂ ಅವರೊಬ್ಬ ಅಸಾಧಾರಣ ಪ್ರತಿಭೆಯ ವಿದ್ಯಾರ್ಥಿಗಳಾಗಿದ್ದರು. ನಮ್ಮ ಈಗಿನ ವಿದ್ಯಾರ್ಥಿಗಳು, ವಿಶೇಷವಾಗಿ ವೈದ್ಯಕೀಯ ವ್ಯಾಸಂಗ ಮಾಡುವ ಯುವಜನರು ಬರ್ನಾರ್ಡ್ ಕ್ರಿಶ್ಚಿಯನ್‌ರ ವಿದ್ಯಾರ್ಥಿ ದೆಸೆ ಮತ್ತು ತದನಂತರ ಕ್ರಿಯಾಶೀಲವಾದ ಅವರ ವೈದ್ಯಕೀಯ ವೃತ್ತಿಯಿಂದ ಕಲಿಯಬೇಕಾದುದು ಬಹಳಷ್ಟಿದೆ. ವ್ಯಾಧಿ ಪೀಡಿತರ ನೋವು, ನರಳಾಟ, ಸಾವುಗಳಿಗೆ ಅವರು ತೀವ್ರವಾಗಿ ಸ್ಪಂದಿಸುತ್ತಿದ್ದರು.

ತರಬೇತಿ ಹಂತದಲ್ಲಿ ಅವರ ಮನ ಕಲಕಿದ ಘಟನೆಯನ್ನು ಡಾ॥ ಚಂದ್ರಪ್ಪಗೌಡರು ವರ್ಣಿಸುವುದು ಹೀಗೆ : "ಒಂದು ರಾತ್ರಿ ಡಾ॥ ಬರ್ನಾರ್ಡ್ ಸರದಿ ಪ್ರಕಾರ ಡ್ಯೂಟಿ ಡಾಕ್ಟರ್‌ರಾಗಿದ್ದರು. ವರ್ಣೀಯ ಮಹಿಳೆ ಮರಿಯಾ ತೀವ್ರ ಹೊಟ್ಟೆನೋವಿನಿಂದಾಗಿ ಆಸ್ಪತ್ರೆಗೆ ದಾಖಲಾಗಿದ್ದಳು. ...ಆಕೆ ಗರ್ಭಕಂಠದ ಕ್ಯಾನ್ಸರ್‌ನಿಂದ ಬಳಲುತ್ತಿದ್ದಳು. ...ಅವಳ ಸ್ಥಿತಿ ತೀರ ಉಲ್ಬಣಾವಸ್ಥೆಗೆ ತಲುಪಿದ್ದು ನೋವಿನ ತೀವ್ರತೆ ಸಹಿಸಲಸದಳವಾಗಿತ್ತು. ಅವಳ ಒದ್ದಾಟ-ಕಿರಿಚಾಟಗಳಿಂದ ಆ ವಾರ್ಡಿನ ಇತರ ರೋಗಿಗಳ ನೆಮ್ಮದಿಗೆ ಭಂಗವಾಗುತ್ತಿತ್ತು. ... ಆ ಗಳಿಗೆಯಲ್ಲಾದರೂ ನೆಮ್ಮದಿಯಿಂದ ಸಾಯಲು ಅವಕಾಶ ಮಾಡಿ ಕೊಡಿರೆಂದು ಬರ್ನಾರ್ಡ್‌ರನ್ನು ಅಂಗಲಾಚತೊಡಗಿದಳು."

ಮುಂದೆ ಅವಳಿಗೆ ನೋವು ನಿವಾರಕ ನೀಡುತ್ತ, ದಯಾಮರಣದ ಬಗ್ಗೆ ಚಿಂತಿಸುತ್ತ ಡಾ॥ ಬರ್ನಾರ್ಡ್ ಅನುಭವಿಸಿದ ತಳಮಳದ ವರ್ಣನೆ ಇದೆ. ಒಂದು ಕ್ಷಣ ಮರಿಯಾಳಿಗೆ ದಯಾಮರಣವೇ ಸೂಕ್ತವೆಂದು ಡಾ॥ ಬರ್ನಾರ್ಡ್ ಭಾವಿಸಿದ್ದಾಗಿಯೂ, ಆದರೆ ವೈದ್ಯಕೀಯ ನೀತಿಶಾಸ್ತ್ರದ ಶಪಥ ನೆನಪಾಗುತ್ತಿದ್ದುದು, ಸಿರಿಂಜ್‌ನಲ್ಲಿದ್ದ ಮಾರ್ಫೀನ್ ಇಂಜಕ್ಷನ್

ದ್ರಾವಣ ಹೊರಚೆಲ್ಲಿದ್ದು ಅತ್ಯಂತ ಹೃದಯಸ್ಪರ್ಶಿಯಾಗಿ ವರ್ಣನೆಯಾಗಿದೆ. ಮರುದಿನ ನಿದ್ರೆಯಿಂದ ಎಚ್ಚೆತ್ತ ಮರಿಯಾ ಕ್ಷೀಣ ದನಿಯಲ್ಲಿ ಕೃತಜ್ಞತೆ ಹೇಳಿದ್ದು, ಮುಂದೆ ಜೀವನದುದ್ದಕ್ಕೂ ದಯಾಮರಣದ ಬಗ್ಗೆ ವೈದ್ಯ ಕ್ರಿಶ್ಚಿಯನ್ ಬರ್ನಾರ್ಡ್ ಚಿಂತಿಸುವಂತೆ ಮಾಡಿತಂತೆ. ಆದರೆ ಸ್ವತಃ ಡಾ|| ಕ್ರಿಶ್ಚಿಯನ್ ಬರ್ನಾರ್ಡ್ ಮತ್ತು ಅವರ ಸಹೋದರ ಡಾ|| ಮೇರಿಯಸ್ ಬರ್ನಾರ್ಡ್ ಪರಸ್ಪರ ಒಪ್ಪಂದ ಮಾಡಿಕೊಂಡಿದ್ದರಂತೆ: ಅವರಿಬ್ಬರಲ್ಲಿ ಯಾರೊಬ್ಬರಿಗಾದರೂ ಅಂತಹ ದಾರುಣ ಪರಿಸ್ಥಿತಿ ಉದ್ಭವಿಸಿದರೆ ಅವರಲ್ಲೊಬ್ಬರು ದಯಾಮರಣ ಜರುಗಿಸಲು ಬದ್ಧರಾಗಿರಬೇಕೆಂಬುದು ಅವರ ನಡುವಿನ ಒಪ್ಪಂದವಾಗಿತ್ತು. ಆದರೆ ವಿಧಿಯ ವೈಚಿತ್ರ್ಯವೆಂದರೆ ೭೯ ವರ್ಷಗಳಷ್ಟು ದೀರ್ಘಕಾಲ ಕ್ರಿಯಾಶೀಲರಾಗಿದ್ದು, ಗ್ರೀಸ್‌ನ ಪಫೋಸ್ ಎಂಬ ವಿಹಾರಧಾಮದಲ್ಲಿ ೨೦೦೧ರ ಸೆಪ್ಟೆಂಬರ್ ೨ರಂದು ಹಠಾತ್ತಾಗಿ ಸಂಭವಿಸಿದ ಹೃದಯಾಘಾತದಿಂದ ಅಸುನೀಗಿದರು.

ಡಾ|| ಬರ್ನಾರ್ಡ್‌ರ ವೈದ್ಯಕೀಯ ವೃತ್ತಿಯೆಂದರೆ ಅದೊಂದು ಸಾಹಸಗಾಥೆ, ಮಾನವ ಹೃದಯದೊಡನೆ ಅವರು ನಡೆಸಿದ ಅನುಸಂಧಾನ, ಒಂದು ತಪಸ್ಸು! ಹಲವಾರು ಬಾರಿಯ ಪ್ರಯೋಗಗಳು, ಅದಕ್ಕೆ ಬಳಕೆಯಾಗುತ್ತಿದ್ದ ನಾಯಿಗಳು, ಅದಕ್ಕಾಗಿ ಸತತ ಪರಿಶ್ರಮಪಡುತ್ತಿದ್ದ ಡಾ|| ಬರ್ನಾರ್ಡ್ ಮತ್ತು ಅವರ ತಂಡದ ನಿಷ್ಠೆ ಮತ್ತೆ ಮತ್ತೆ ಓದುವಂತಿದೆ.

ಡಾ|| ಚಂದ್ರಪ್ಪಗೌಡರು ''ದಾರಿ ತೋರಲು ಶ್ರೀಕೃಷ್ಣನಿಲ್ಲದ ಅರ್ಜುನನಂತೆ'' ಎಂದು ಡಾ|| ಬರ್ನಾರ್ಡ್‌ರನ್ನು ವರ್ಣಿಸುತ್ತಾರೆ. ಈ ಕೃತಿಯ ಅತ್ಯಂತ ರೋಚಕ ವರ್ಣನೆಯೆಂದರೆ ಲೂಯಿ ವಾಷ್ಕಾನ್ಸ್‌ಕಿಗೆ ಸೂಕ್ತ ಹೃದಯ ದಾನಿ ಡೆವೀಸ್ ಡರ್ವಾಲ್‌ಳ ಪುಟಾಣಿ ಹೃದಯ ಜೋಡಿಸುವ ವರ್ಣನೆ! ಎಷ್ಟು ಪ್ರಯಾಸದ, ಎಷ್ಟೊಂದು ಪೂರ್ವ ಸಿದ್ಧತೆ, ತಜ್ಞತೆ, ಏಕಾಗ್ರತೆ ಬೇಡುವ ಪ್ರಸಂಗ ಅದು ! ಈ ಸಂದರ್ಭವನ್ನು ಡಾ|| ಚಂದ್ರಪ್ಪಗೌಡರ ಭಾಷೆಯಲ್ಲಿಯೇ ಓದಿ ತಿಳಿಯಬೇಕು. ಉದಾಹರಣೆಗೆ,

''ಅದರ ಮುಂದೆ ಡಾ|| ಕ್ರಿಶ್ಚಿಯನ್ ಬರ್ನಾರ್ಡ್‌ರ ''ಅಕ್ಷೋಹಿಣಿ'' ತಜ್ಞ ವೈದ್ಯರ ಪಡೆ ಮತ್ತು ಸಿಬ್ಬಂದಿ ವರ್ಗ ಸತತವಾಗಿ ಹದಿನೆಂಟು ದಿನಗಳು ಮಹಾಭಾರತ ಪುರಾಣ ಕಾವ್ಯದ ತದ್ರೂಪವೇ ಆಗಿ ಪರಿಣಮಿಸಿತೆಂದರೆ ಅತಿಶಯೋಕ್ತಿಯಲ್ಲ. ಅಂತಿಮವಾಗಿ ಡಿಸೆಂಬರ್ ೨೧ರ (೧೯೬೭) ನಸುಕಿನ ೬.೪೦ಕ್ಕೆ ಸರಿಯಾಗಿ ವಾಷ್ಕಿನ್ಸ್‌ಕಿಯ ಅಲ್ಲ ಡೆನೀಸ್ ಡರ್ವಾಲಳ ಹೃದಯದ ಇ.ಸಿ.ಜಿ. ರೇಖೆಗಳು ತಳಮುಟ್ಟಿ ನೇರವಾದ ಗೆರೆಯಾಗಿ ಸ್ಥಗಿತಗೊಂಡವು ! ಡಾ|| ಬರ್ನಾಡ್ ಮತ್ತವರ ತಂಡದ ಭಗೀರಥ ಪ್ರಯತ್ನ ವಿಫಲವಾಯಿತು.''

ತನ್ನ ಜೀವಿತಕಾಲದಲ್ಲಿಯೇ ದಂತಕತೆಯಾಗಿ ದೇಶ-ವಿದೇಶಗಳಲ್ಲಿ ಅತ್ಯಂತ ಗೌರವ – ಆಕರ್ಷಣೆಯ ಕೇಂದ್ರ ವ್ಯಕ್ತಿಯಾಗಿದ್ದ, ಡಾ|| ಬರ್ನಾರ್ಡ್. ೧೬೫ರಷ್ಟು ಮಾನವ ಹೃದಯ ಟ್ರಾನ್ಸ್‌ಪ್ಲಾಂಟೇಶನ್ ಮಾಡಿದ್ದ ವ್ಯಕ್ತಿಯ ಕೌಟುಂಬಿಕ ಜೀವನ ಮಾತ್ರ ಸುಖಕರವಾಗಿರಲಿಲ್ಲ. ಕಾರಣ ಎರಡು ವಿಭಿನ್ನ ವ್ಯಕ್ತಿತ್ವಗಳ ಸಂಸಾರ ಅದಾಗಿತ್ತು. ದೋಷ ಯಾರದ್ದೇ ಆಗಿದ್ದರೂ ಡಾ|| ಬರ್ನಾರ್ಡ್ ಮತ್ತು ಪತ್ನಿ (ಆಕೆ ಕೂಡ ನರ್ಸ್ ವೃತ್ತಿಯಲ್ಲಿದ್ದವಳು) ಲೋವುಟ್ಜಿಯ ಜೀವನ ವಿರಸದಿಂದಲೇ ಕೂಡಿದ್ದು ಕೊನೆಗೊಮ್ಮೆ ವಿಚ್ಛೇದನದಲ್ಲಿ ಕೊನೆಗೊಂಡಿತು. ಮುಂದೆ ಡಾ|| ಬರ್ನಾರ್ಡ್‌ರ ಕೀರ್ತಿ – ಹಣದ ಆಸೆಗೆ ಮೋಹಗೊಂಡು ಆತನನ್ನು ವರಿಸಿದವರು ಕೊನೆಯವರೆಗೆ ಅವರೊಡನೆ ಬಾಳಲಿಲ್ಲ.

ತುಂಬ ಅಚ್ಚರಿಯ ವಿಪರ್ಯಾಸದ ಸಂಗತಿಯೆಂದರೆ ಬಾಲ್ಯದಲ್ಲಿ, ಯೌವನದಲ್ಲಿ, ತನ್ನ ವೃತ್ತಿ ಜೀವನದಲ್ಲಿ ಅತ್ಯಂತ ಕಷ್ಟ, ತ್ಯಾಗ, ಪರಿಶ್ರಮದಿಂದ ಬಾಳಿದ ಈ ವ್ಯಕ್ತಿ, ಸ್ವಯಂ ನಿವೃತ್ತಿಯ ನಂತರ ತನಗೆ ದೊರೆತ ಕೀರ್ತಿ-ಧನ-ಪ್ರಚಾರಗಳಲ್ಲಿ ಮುಳುಗಿ ಅತ್ಯಂತ ವಿಲಾಸೀ ಜೀವನ ಕಳೆದದ್ದು. ತಮ್ಮ ವೃತ್ತಿ ಜೀವನಕಾಲದಲ್ಲಿ ಮತ್ತು ತದನಂತರವೂ ಡಾ|| ಬರ್ನಾರ್ಡ್ ದೇಶ-ವಿದೇಶಗಳಲ್ಲಿ ವೈದ್ಯಕೀಯ ವಿಷಯಗಳ ಕುರಿತು ನೂರಾರು ಉಪನ್ಯಾಸ ನೀಡಿದರು. ತಮ್ಮ ಜೀವನ ಕುರಿತಂತೆ, ಹೃದಯಾಘಾತ, ದಯಾಮರಣ... ಮುಂತಾಗಿ ಹಲವಾರು ಅಮೂಲ್ಯ ಕೃತಿಗಳನ್ನು ರಚಿಸಿದ್ದಾರೆ.

ಮಾನವ ಕುಲಕ್ಕೆ ಅತ್ಯಪೂರ್ವ ಸಂಶೋಧನೆಗಳನ್ನು ಕಾಣಿಕೆ ನೀಡಿದ ಈ ವ್ಯಕ್ತಿಯ ಜೀವನ ಪರಿಪೂರ್ಣ ಎನ್ನಬಹುದು. ಅವನ ವೈಯಕ್ತಿಕ ಜೀವನ ಕಪ್ಪು ಚುಕ್ಕಿಯಂತೆ ಇದೆ ! ಈ ಪುಸ್ತಕದ ಹೂರಣವೂ ಪರಿಪೂರ್ಣವಾಗಿದ್ದು ಮುದ್ರಣ ದೋಷಗಳು, ದೃಷ್ಟಿ ಬೊಟ್ಟಿನಂತಿವೆ.

ವಿಜಯ ಶ್ರೀಧರ್
ಡಾ|| ಶ್ರೀಧರ್ ನರ್ಸಿಂಗ್ ಹೋಂ, ೧ನೇ ಮುಖ್ಯರಸ್ತೆ,
ರಾಜೇಂದ್ರನಗರ, ಶಿವಮೊಗ್ಗ - ೫೭೭ ೨೦೪

# ಕ್ರಿಸ್ತನೊಡನೆ ಒಂದು ನಿಮಿಷ



**ಯೇಸು**

ನಿನ್ನ ಪೂರ್ವಜಾತಕ ಜನ್ಮಕುಂಡಲಿ ನೋಡಿ
ಪ್ರವಾದಿಗಳೆಲ್ಲಾ ಹೇಳಿದ್ದೇ ಹೇಳಿದ್ದು
ಚಿಕ್ಕೆ ನೋಡಿ ಕವಡೆ ಚೆಲ್ಲಿ ಪಂಚಾಂಗ ಬಿಚ್ಚಿ
ಪಂಡಿತರೆಲ್ಲಾ ಸಾರಿದ್ದೇ ಸಾರಿದ್ದು
ಕೊಟ್ಟಿಗೆ ಮೇಲೆ ಆ ಚಿಕ್ಕೆ ನಿಂತಿದ್ದೇ ನಿಂತದ್ದು
ನೀ ಮಿಂಚೋಕ್ಕಿಂತ ಮುಂಚೆ
ಇಷ್ಟೆಲ್ಲಾ ಗೊತ್ತಿದ್ರು
ಹುಟ್ಟಲು ನಿನಗಿರಲಿಲ್ಲ
ಛತ್ರದ ಅಂಗೈಯಗಲ ಜಾಗ
ಅಂತೂ ಇಂತೂ ಬಡಗಿಯ ಬಿಡಾರದಲ್ಲಿದ್ದು
ಕಳಿಸಿದವನ ಕೆಲಸ ಮಾಡಿದಿ
ಅಷ್ಟೆಲ್ಲಾ ನೀ ಮಾಡಿದೆಯಲ್ಲಾ
ನೀನಾಗ ನೋಡಿದ್ದಾದ್ರು ಏನು ?
ಕಿಲುಬಿದ ತೀರ್ಥ, ಸುಣ್ಣ ಹಚ್ಚಿದ ಸಮಾಧಿ
ಕುರಿ-ಕೋಟಿನ ತೋಳ, ದಾರಿತೋರಿಸುವ ಕುರುಡ
ಹೊರ ಮೈ ಹೊಳಪಿನ ಪಂಚ ಪಾತ್ರೆಯ ಬಟ್ಟಲು
ಬೆಳ್ಳಿ ಬಲೆಗೆ ಬಿದ್ದ ಆ ನಿನ್ನ ಶಿಷ್ಯ.
ಇಷ್ಟೆಲ್ಲಾ ಕಂಡುಂಡು
ಲೋಕದೆದೆ ಗುಂಡಿಗೆಯ ಮಿಡಿನಾಗರ ಕಿತ್ತು
ಮನ ಮಲ್ಲಿಗೆ ಹಚ್ಚಿದ ನಿನಗೆ
ಸಿಕ್ಕಿದ್ದಾದರೂ ಏನು ?
ಮೊಳೆ ಸುತ್ತಿಗೆ ಅಡಿಗಲ್ಲಿನ ಗಲ್ಲು
ಮತ್ಸರದ ಮಸೆಗತ್ತಿ, ಪಾಪದುರಿಯ ಉಗುಳು
ಸಿಡಿಲ ಸಿಲುಬೆ, ಮುಳ್ಳು ಮುಡಿ
ಗಾಣ ಯಾತನೆಯ ಗೆತ್ಸೆಮನೆ
ಆ ನಿನ್ನ ಕಣ್ಣೀರ ಮಹ ಮಸ್ತಕಾಭಿಷೇಕದಲ್ಲಿ
ನೀನಾಡಿದ ಮಾತು ಬಿಸಿಬಿಸಿಯಾಗಿದೆ ಇನ್ನೂ
''ಕ್ಷಮಿಸಿವರನೆಲೆ ತಂದೆ; ತಾವೇನನೆಸಗಿದಪೆ
ವೆಂದರಿಯರಿವರಿಂ''
ಹೋಗಲಿ ಬಿಡು
ಅವರೇನೋ ಅರಿಯದ ಬರಿ ಕಲ್ಲೆದೆಯವರು
ಕೈ ಕಾಲೆದೆಗೆ ಕೂರ್ಮೊಳೆ ಜಡಿದು ಖುಷಿ ಪಟ್ಟರೊಮ್ಮೆ
ನೋಡಪ್ಪ ಯೇಸು, ಕ್ರಾಸಿಂದೊಮ್ಮೆ
ಇತ್ತ ಬಗ್ಗಿನೋಡು
ಕಾಣೋದಿಲ್ಲವೇ ನಿನಗೆ
ಅದೇ ತೀರ್ಥ, ಅದೇ ಸಮಾಧಿ
ಅದೇ ತೋಳ, ಅದೇ ಕುರುಡ
ಅದೇ ಪಾತ್ರೆ, ಅದೇ ಶಿಷ್ಯ
ಅದೇ ಛತ್ರ, ಅದೇ ಮಿತ್ರ,
ಇಷ್ಟಾದರೂ ಮತ್ತದೆ ನಿನ್ನ
''ಕ್ಷಮಿಸಿವರನೆಲೆ ತಂದೆ; ತಾವೇನನೆಸಗಿದಪೆ
ವೆಂದರಿಯರಿವರಿಂ ?''

ವಿಲಿಯಂ
ನಂ. ೧೫/೧೩, ೨ನೇ ತಿರುವು, ನೆಹರು ನಗರ, ಸಾಗರ - ೫೭೭ ೪೦೧, ಶಿವಮೊಗ್ಗ ಜಿಲ್ಲೆ

# ದುರಂತಕ್ಕೆ ತಲುಪುವ ಮೊದಲು ಎಚ್ಚರವಾಗೋಣ

ನಮ್ಮ ಸಮಾಜದ ಮನಃಸ್ಥಿತಿಯ ಬಗೆಗೆ ಜ್ಞಾನಪೀಠ ಪ್ರಶಸ್ತಿ ವಿಜೇತ ಶಿವರಾಮ ಕಾರಂತರು ಒಂದು ವಿಶ್ಲೇಷಣೆಯನ್ನು ನೀಡಿದ್ದಾರೆ: ''ಹುಚ್ಚು ಮನಸ್ಸಿನ ಹತ್ತು ಮುಖಗಳು'' ಅದು. ಅದನ್ನೇ ಒಂದು ಸಂಸ್ಕೃತ ಶ್ಲೋಕದ ಮೂಲಕ ಅವರು ಚಿತ್ರಿಸಿದ್ದಾರೆ. ''ಮರ್ಕಟಸ್ಯ ಸುರಾಪಾನಂ ಮಧ್ಯೇ ವೃಶ್ಚಿಕ ದಂಶನಂ, ತನ್ಮಧ್ಯೇ ಭೂತ ಸಂಚಾರಂ, ಯದ್ವಾತದ್ವಾ ಭವಿಷ್ಯತಿ''. ಹೆಂಡ ಕುಡಿದ ಮಂಗನಿಗೆ ಚೇಳು ಕಡಿಯುತ್ತದೆ. ಭೂತ ಸಂಚಾರ ಆಗುತ್ತದೆ. ಮತ್ತೆ ನಡೆಯುವುದು ಏನೇನೋ ಎಂದು ಅದರ ಅರ್ಥ. ಇದು ನಮ್ಮನ್ನು ಕಳೆದ ೬ ದಶಕಗಳಿಂದ ಆಳುತ್ತಾ ಬಂದಿರುವವರ ಹುಚ್ಚು ಮನಸ್ಸಿನ ೧೦ ಮುಖಗಳುಳ್ಳ ಆಳ್ವಿಕೆಯ ಪರಿಣಾಮ. ಅದನ್ನೇ ಕುವೆಂಪು ಅವರು ಇನ್ನೂ ತೀಕ್ಷ್ಣವಾಗಿ ಹೇಳುತ್ತಾರೆ: ''ಕರಿಯರದೋ ಬಿಳಿಯರದೋ ಯಾರದ್ದಾದರೆ ಏನು? ಸಾಮ್ರಾಜ್ಯವಾವಗಂ ಸುಲಿಗೆ ರೈತರಿಗೆ! ವಿಜಯನಗರವೋ, ಮೊಗಲರಾಳ್ವಿಕೆಯೋ ಇಂಗ್ಲಿಷರೋ ಎಲ್ಲರೂ ಜಿಗಣೆಗಳೇ ನನ್ನ ನೆತ್ತರಿಗೆ! ಕತ್ತಿ ಪರದೇಶಿಯಾದರೆ ಮಾತ್ರ ನೋವೇ? ನಮ್ಮವರೇ ಹದ ಹಾಕಿ ತಿವಿದರದು ಹೂವೇ?'' ಈ ಕವಿ ಹೃದಯದ ಮಾತುಗಳು ಸ್ವಲ್ಪ ಹಳೆಯವು. ಆಗ ಆಳುತ್ತಿದ್ದವರು ಬೇರೆ, ಅನಂತರ ಬಂದವರು ಬೇರೆಬೇರೆ. ಈಗ ಇರುವವರು ಸಂಪೂರ್ಣ ಬೇರೆ. ಇವರ ಆಡಳಿತದಲ್ಲಂತೂ ಜನ ನುಚ್ಚುನೂರಾಗುತ್ತಿದ್ದಾರೆ.

'ರವಿ ಕಾಣದುದಂ ಕವಿ ಕಾಣ್ಬಂಗಡ' ಎಂದು ನಮ್ಮ ನಂದಳಿಕೆಯವರು ಸುಮ್ಮನೆ ಪ್ರಶ್ನಿಸಿಲ್ಲ. ಅಂದಿನವರ ನಡೆ ನುಡಿ ಗುರುತಿಸಿ ಇಂದಿನವರು ಎಲ್ಲಿಗೆ ತಲುಪುತ್ತಾರೆ ಎನ್ನುವುದು ಕವಿಗಳು ಅಂದೇ ಗುರುತಿಸಿದ್ದರು. ಮುಂದೆ ಆಗುವ ಅನಾಹುತಗಳನ್ನು ನಾವು ಇಂದಿನವರು ತಡೆಗಟ್ಟಬೇಕು. ಗತಕಾಲದ ವೈಭವ, ಪುರಾಣ ಹಾಗೂ ಶಾಸ್ತ್ರಗಳೆಂದು ಮನುವಿನಂಥವರು ಬರೆದಿಟ್ಟದ್ದನ್ನು ಇಂದು ಆಳುವವರು ಪುನರಾವರ್ತನೆ ಮಾಡಲು ಹೊರಟಿದ್ದಾರೆ. ಅದು ದುರಂತಕ್ಕೆ ತಲುಪುವ ಮೊದಲೇ ನಮ್ಮ ಜನ, ನಮ್ಮ ದುಡಿಮೆಗಾರರು, ನಮ್ಮ ಚಿಂತಕರು ಎಚ್ಚರಗೊಂಡು ಅನಾಹುತವನ್ನು ತಪ್ಪಿಸುವುದಕ್ಕೆ ಸನ್ನದ್ಧರಾಗಬೇಕಾಗಿದೆ.

'ರವಿ ಕಾಣದುದಂ ಕವಿ ಕಾಣ್ಬಂಗಡ' ಎಂದು ನಮ್ಮ ನಂದಳಿಕೆಯವರು ಸುಮ್ಮನೆ ಪ್ರಶ್ನಿಸಿಲ್ಲ. ಅಂದಿನವರ ನಡೆ ನುಡಿ ಗುರುತಿಸಿ ಇಂದಿನವರು ಎಲ್ಲಿಗೆ ತಲಪುತ್ತಾರೆ ಎನ್ನುವುದು ಕವಿಗಳು ಅಂದೇ ಗುರುತಿಸಿದ್ದರು. ಮುಂದೆ ಆಗುವ ಅನಾಹುತಗಳನ್ನು ನಾವು ಇಂದಿನವರು ತಡೆಗಟ್ಟಬೇಕು. ಗತಕಾಲದ ವೈಭವ, ಪುರಾಣ ಹಾಗೂ ಶಾಸ್ತ್ರಗಳೆಂದು ಮನುವಿನಂಥವರು ಬರೆದಿಟ್ಟದ್ದನ್ನು ಇಂದು ಆಳುವವರು ಪುನರಾವರ್ತನೆ ಮಾಡಲು ಹೊರಟಿದ್ದಾರೆ. ಅದು ದುರಂತಕ್ಕೆ ತಲುಪುವ ಮೊದಲೇ ನಮ್ಮ ಜನ, ನಮ್ಮ ದುಡಿಮೆಗಾರರು, ನಮ್ಮ ಚಿಂತಕರು ಎಚ್ಚರಗೊಂಡು ಅನಾಹುತವನ್ನು ತಪ್ಪಿಸುವುದಕ್ಕೆ ಸನ್ನದ್ಧರಾಗಬೇಕಾಗಿದೆ.

ಬಿ. ವಿ. ಕಕ್ಕಿಲ್ಲಾಯ

೭೬ನೆಯ ಅಖಿಲ ಭಾರತ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಪೀಠದಿಂದ ನಾಡೋಜ ಪ್ರಶಸ್ತಿ ವಿಜೇತೆ ಗೀತಾ ನಾಗಭೂಷಣ ಹೇಳಿರುವುದಕ್ಕೆ ಮತ್ತು ಚೆನ್ನಾಗಿ ಪ್ರತಿಭಟನೆಯ ಧ್ವನಿಯೊಂದಿಗೆ ನುಡಿದಿರುವ ಮಾತುಗಳಿಗೆ ನಾನೇನು ಹೆಚ್ಚು ಸೇರಿಸಬೇಕಿಲ್ಲ. ಇಂದಿನ ಆಡಳಿತಗಾರರು ಈಗ ಅನುಸರಿಸುತ್ತಿರುವ ದಾರಿಯಲ್ಲೇ ಈ ನಾಡನ್ನು ಆಳುವ ಅವಕಾಶ ಹೆಚ್ಚಿಗೆ ನೀಡಿದರೆ ನಮ್ಮನ್ನು ನಾವೇ ಎಂದೂ ಹಿಂದಿರುಗಲಾಗದ ದುರಂತಕ್ಕೆ ತಲುಪಿಸಿಕೊಂಡಂತಾಗುತ್ತದೆ. ಸಕಾಲದಲ್ಲಿ ಎಚ್ಚೆತ್ತು ಎಲ್ಲ ಭೇದಭಾವಗಳನ್ನು ಬದಿಗಿಟ್ಟು ನಾಡಿನ ಮತ್ತು ಜನರ ರಕ್ಷಣೆಗೆ ಮತ್ತು ಮುನ್ನಡೆಗೆ ನಮ್ಮ ಶ್ರಮಜೀವಿ ಹಾಗೂ ಬುದ್ಧಿಜೀವಿ ಜನರು ಇಂದು ಸನ್ನದ್ಧರಾಗಬೇಕಾಗಿದೆ.

ನಮ್ಮ ರಾಜ್ಯವನ್ನು ಆಳಿರುವ ೩ ಮುಖ್ಯಪಕ್ಷಗಳು ತಮ್ಮತಮ್ಮೊಳಗೇ ಜಗಳವಾಡುತ್ತಾ ಒಳಗಿಂದೊಳಗೆ ಕೈ ಜೋಡಿಸುತ್ತಾ ಈ ನಾಡನ್ನು ಎಲ್ಲಿಗೆ ತಲುಪಿಸುತ್ತಾರೆ ಎಂಬುವುದನ್ನು ಅಧ್ಯಯನ ಮಾಡುವುದಕ್ಕೆ ನಮ್ಮ ವಿಶ್ವವಿದ್ಯಾನಿಲಯಗಳು ಮುಂದಾಗಬೇಕು. ಕೇಂದ್ರ ಸರಕಾರ ಇದೀಗ ಸಂಸತ್ತಿನ ಮುಂದೆ ನಮ್ಮ ದೇಶಕ್ಕೆ ವಿದೇಶಿ ವಿಶ್ವವಿದ್ಯಾಲಯಗಳ ಮುಕ್ತ ಪ್ರವೇಶಕ್ಕೆ ಹಾಗೂ ವ್ಯವಹಾರ ಕುದುರಿಸುವುದಕ್ಕೆ ಅವಕಾಶ ನೀಡಲು ಹೊರಟಿದೆ. ಕರ್ನಾಟಕವಂತೂ ಈ ದಿಸೆಯಲ್ಲಿ ಮತ್ತೆಲ್ಲರಿಗಿಂತ ಮೊದಲು ವಿದೇಶಿಯರೊಂದಿಗೆ ತಾವೂ ಸೇರಿ ಶಿಕ್ಷಣ ಕ್ಷೇತ್ರವನ್ನು ಜಾಗತೀಕರಣಗೊಳಿಸಲು ತಯಾರಾಗಿದೆ. ಸ್ವಾತಂತ್ರ್ಯ ಬಂದಾಗ ರಾಜ್ಯಕ್ಕೊಂದು ವಿಶ್ವವಿದ್ಯಾನಿಲಯ ಉನ್ನತ ವ್ಯಾಸಂಗಕ್ಕೆ ಅವಕಾಶ ನೀಡುವುದಕ್ಕಾಗಿ ಸ್ಥಾಪನೆಗೊಂಡಿದ್ದವು. ಇಂದು ಒಂದೇ ರಾಜ್ಯದಲ್ಲಿ ಹತ್ತಾರು ವಿಶ್ವವಿದ್ಯಾನಿಲಯಗಳಿವೆ. ಸಾಲದುದಕ್ಕೆ ಡೀಮ್ಡ್ ಯೂನಿವರ್ಸಿಟಿಗಳು, ಅಂದರೆ ಪರಿಕಲ್ಪಿತ ವಿಶ್ವವಿದ್ಯಾನಿಲಯಗಳಿವೆ. ಕಲಿಸುವ ವಿಷಯಗಳು ಹಾಗೂ ಕಲಿಸುವವರ ಅರ್ಹತೆಗಳು, ವಿದ್ಯಾರ್ಥಿಗಳಿಂದ ವಸೂಲು ಮಾಡಬಹುದಾದ ಶುಲ್ಕಗಳು ಏನು ಎಷ್ಟು ಎಂಬುವುದನ್ನು ಆಯಾ ವಿದ್ಯಾಲಯಗಳೆಂದು ಪರಿಗಣಿಸಲಾಗುವ ಅಂಗಡಿಗಳೇ ನಿರ್ಣಯಿಸಬಹುದಾಗಿದೆ. ಹೀಗೆ ಸರಕಾರದಿಂದ ಅಧಿಕಾರ ಪಡೆದಿರುವ ಸಂಸ್ಥೆಗಳು ಅಧಿಕಾರ ಪತ್ರ ಕೈತಲುಪಿದ ಮರುಕ್ಷಣದಲ್ಲಿಯೇ ಸರಕಾರದ ಆಜ್ಞೆಗಳನ್ನು, ಸರ್ವೋಚ್ಚ ನ್ಯಾಯಾಲಯದ ತೀರ್ಪುಗಳನ್ನು, ಉಲ್ಲಂಘಿಸಿ ವರ್ತಿಸಲು ಆರಂಭಿಸಿವೆ ಎನ್ನುವುದು ಕಳವಳಕ್ಕೆ ಕಾರಣವಾಗಿದೆ. ಜಾತಿಗೊಂದು ಮಠ, ಮಠದ ವ್ಯಾಪ್ತಿಯಲ್ಲಿ ಊರಿಗೊಂದು ಸಂಸ್ಥಾನ, ಸಂಸ್ಥಾನಗಳೊಳಗಡೆ ಯೋಗವೋ, ಭೋಗವೋ, ರಾಸಕ್ರೀಡೆಯೋ, ಯಮುನಾ ತೀರದಲ್ಲಿ ನಡೆದಂತಹ ಮಹಿಳಾ ಮಣಿಗಳ ವಸ್ತ್ರಾಪಹರಣವೋ ಏನು ಬೇಕಾದರೂ ನಡೆಯಬಹುದು ಎಂಬ ಧರ್ಮ ಇಂದು ಸಾರ್ವಜನಿಕ ಜೀವನವನ್ನು ಕಲುಷಿತಗೊಳಿಸುತ್ತಿದೆ. ಅದೇ ಸಮಯದಲ್ಲಿ ಸರಕಾರದ ಅನುಮತಿ ಇದ್ದೇ ನಡೆಯುವ ಸಾರ್ವಜನಿಕ ನರ್ತನ ಗೃಹಗಳಲ್ಲಿಯೋ ಪಾನಮಂದಿರಗಳಲ್ಲಿಯೋ ಭೋಜನಶಾಲೆಗಳಲ್ಲಿಯೋ ಯಾವುದನ್ನು ತಿನ್ನಬೇಕು, ಯಾವುದನ್ನು ಕುಡಿಯಬೇಕು, ಯಾವ ರೀತಿ ಕುಣಿಯಬೇಕು ಎಂಬಿತ್ಯಾದಿಗಳನ್ನೆಲ್ಲ ಧರ್ಮವೊಂದರ ಹೆಸರಲ್ಲಿ ಧರ್ಮ ಸಂರಕ್ಷಕ ಪರಿವಾರದವರು ದೊಣ್ಣೆ ಹಿಡಿದಾದರೂ

ಆಚರಣೆಗೆ ತರಿಸುವ ಆಡಳಿತ ಇಂದು ನಡೆಯುತ್ತಿದೆ. ಇದಕ್ಕೆ ಕೊನೆ ಎಲ್ಲಿಯೊ ತಿಳಿಯದು.

೨೦೧೦-೧೧ರ ಮುಂಗಡ ಪತ್ರ ಸಲ್ಲಿಸುವುದಕ್ಕಿಂತ ಮೊದಲೇ ಹೆಚ್ಚು ಕಡಿಮೆ ೫೦೦ ಕೋಟಿಗಿಂತಲೂ ಹೆಚ್ಚು ತಮ್ಮವರೆಂದು ತೋರುವವರಿಗೆಲ್ಲ ಖಜಾನೆಯಿಂದ ಹಣ ವಿತರಿಸಿದ ವಿತ್ತ ಸಚಿವರೂ ಆಗಿರುವ ಮುಖ್ಯಮಂತ್ರಿಗಳು ಅದಕ್ಕೆ ಲೇಖಾನುದಾನದ ಮೂಲಕ ಒಪ್ಪಿಗೆ ಪಡೆದುದಲ್ಲದೆ ಮುಂದಿನ ವರ್ಷದಲ್ಲಿ ಮುಂಗಡವಾಗಿಯೇ ಕೋರಿರುವಂಥ ಸಾರ್ವಜನಿಕ ವಿತ್ತದ ದುರ್ವಿನಿಯೋಗದ ಪರಮಾವಧಿಯು ವಿಧಾನ ಸೌಧದಲ್ಲಿ ಪ್ರಕಟವಾಗಿದೆ. ಮುಂದಿನ ಸಾಲಿನಲ್ಲಿ ಅದೆಷ್ಟು ಯಜ್ಞಗಳು, ಯಾಗಗಳು, ಜಾತ್ರೆಗಳು, ಸಂತೆಗಳು, ಶತಮಾನಗಳ ಹಿಂದೆ ಅರಸರಾಗಿದ್ದವರ ಪಟ್ಟಾಭಿಷೇಕಗಳ ವೈಭವದ ಪುನರುತ್ಥಾನಗಳು ನಡೆಯಲಿವೆಯೋ ಕಾದು ನೋಡಬೇಕಿದೆ. ಅವೆಲ್ಲವೂ ಈ ದೇಶದ ಅಭಿವೃದ್ಧಿಯ ಸಂಕೇತವೆಂಬ ವಾದವನ್ನಂತೂ ಆಳುವವರು ಶಾಸನಸಭೆಗಳಲ್ಲಿ ಮಂಡಿಸಿದ್ದಾಗಿದೆ. ಧ್ವನಿಮತದ ಮೂಲಕವೋ, ಮೌನವಾಗಿಯೋ, ಆಪರೇಶನ್ ಕಮಲದ ಪ್ರಯೋಗದಿಂದಲೋ ಅಂಗೀಕಾರ ಪಡೆಯುವ ಪ್ರಯತ್ನವಂತೂ ನಡೆದೇ ಇದೆ.

ಇದೆಲ್ಲ ಯಾರ ತೃಪ್ತಿಗಾಗಿ, ಯಾರ ಪೋಷಣೆಗಾಗಿ ಎನ್ನುವ ಪ್ರಶ್ನೆ ಮಾತ್ರ ನಮ್ಮನ್ನು ಕಾಡುತ್ತದೆ. ದೇಶದೆಲ್ಲೆಡೆ ಪೆಟ್ರೋಲ್, ಡೀಸೆಲ್, ಮತ್ತಿತರ ರಾಸಾಯನಿಕ ಉತ್ಪನ್ನಗಳ ಬೆಲೆ ಏರಿಕೆಯಿಂದ ಎಲ್ಲ ದಿನಬಳಕೆಯ ವಸ್ತುಗಳ ಬೆಲೆ ಏರಿಕೆಗೆ ಚಾಲನೆ ನೀಡಲಾಗಿದೆ. ಸರಕಾರಿ ಮತ್ತು ಖಾಸಗಿ ಸಾರಿಗೆಯ ವೆಚ್ಚ ತೀವ್ರವಾಗಿ ಏರಿಕೆಯಾಗಿದೆ. ರೈತರಿಗೆ ಸಹಾಯವಾಗುತ್ತದೆಂಬ ಮುಸುಕಿನೊಳಗೆ ಹಾಲಿನ ಬೆಲೆ ಏರಿಸಿರುವುದು ಮಕ್ಕಳಿಗೂ, ವೃದ್ಧರಿಗೂ ಮಾರಕವಾಗುವಂಥ ಪರಿಣಾಮವನ್ನು ಉಂಟುಮಾಡುತ್ತದೆ. ಸರಕಾರಿ ಆಸ್ಪತ್ರೆಗಳಲ್ಲಿ ಪ್ರವೇಶ ದೊರಕಬೇಕಾದರೆ ಶುಲ್ಕ ತೆರಬೇಕೆಂಬ ನಿಯಮದ ಜೊತೆಗೆ ಔಷಧಿಗಳನ್ನೂ ಹಾಗೂ ಇತರ ಆವಶ್ಯಕ ವಸ್ತುಗಳನ್ನು ಪಡೆದುಕೊಳ್ಳುವುದಕ್ಕೆ ಬೆಲೆ ತೆರಬೇಕಾದಂಥ ಕ್ರಮ ಜಾರಿಗೆ ಬಂದಿದೆ. ಉತ್ಸವಗಳಿಗೆ ಸರಕಾರದ ಬೊಕ್ಕಸದಿಂದ ಹಣ ನೀಡುವುದಕ್ಕೆ ಬದಲಾಗಿ ಆ ಹಣವನ್ನು ಮಕ್ಕಳಿಗೂ ರೋಗಿಗಳಿಗೂ ಔಷಧೋಪಚಾರಕ್ಕೆ ಮತ್ತು ಚಿಕಿತ್ಸೆಗೆ ನೀಡಿದರೆ ಮುಂದಿನ ಚುನಾವಣೆಗೆ ಏನೂ ಪ್ರಯೋಜನವಾಗುವುದಿಲ್ಲ ಎಂಬ ತರ್ಕ ಇಂದಿನ ಸರಕಾರದ್ದಾಗಿದ್ದಂತಿದೆ.

ಕೇಂದ್ರ ಸರಕಾರಕ್ಕೆ ಮೊರೆ ಇಡೋಣ ಎಂದರೆ ಅಲ್ಲಿಯೂ ಪಕ್ಷ ಬೇರೆಯಾದರೂ ಆರ್ಥಿಕ ನೀತಿ, ಆಡಳಿತ ರೀತಿ ಇಲ್ಲಿಯವರದಂಥದ್ದೇ ಆಗಿರುತ್ತದೆ ಎಂದು ಹೇಳಬೇಕಾಗುತ್ತದೆ. ಮುಂಗಡ ಪತ್ರದಲ್ಲಿ ಬೆಲೆ ಏರಿಕೆ ತಡೆಗಟ್ಟುವ ಬಗ್ಗೆ ಸರಕಾರ ಯಾವುದೇ ಕ್ರಮ ಕೈಗೊಳ್ಳದೆ ಭಾಷಣ ಮಾತ್ರ ಬಿಗಿಯುವ ಹಳೆಯ ಜಾಡನ್ನು ಮುಂದುವರಿಸಿದೆ. ದುಬಾರಿ ಬೆಲೆ ತೆತ್ತು ಆಹಾರ ವಸ್ತುಗಳನ್ನು ವಿದೇಶಗಳಿಂದ ಆಮದುಮಾಡಿಕೊಳ್ಳುವ ದುಃಸ್ಥಿತಿಗೆ ನಮ್ಮ ದೇಶವನ್ನು ನಮ್ಮನ್ನು ಆಳುವವರು ತಂದು ನಿಲ್ಲಿಸಿದ್ದಾರೆ. ಒಂದು ಕಾಲದಲ್ಲಿ ಆಹಾರದಲ್ಲಿ ಸ್ವಾವಲಂಬನೆ ಸಾಧಿಸಿದ್ದ ಈ ನಾಡು ಇಂದು ಕೃಷಿ ಉತ್ಪಾದನೆಯೇ ಅಸಾಧ್ಯ ಎಂಬ ನೆಲೆಗೆ ಬಂದು ನಿಂತಿದೆ. ರಸಗೊಬ್ಬರಗಳು, ರಾಸಾಯನಿಕ ವಸ್ತುಗಳ ಬಳಕೆ ಮಿತಿ ಮೀರಬಾರದು, ನಿಜ. ಆದರೆ ಸಂಪೂರ್ಣ ನಿಷೇಧಗೊಂಡರೆ ಕೃಷಿಕನ ಭೂಮಿಯಲ್ಲಿ ಬೆಳೆ ಬರುವುದಾದರೂ ಹೇಗೆ? ಕರ್ನಾಟಕದ ಕೆಲವು ಕಡೆಗಳಲ್ಲಿ ರಸಗೊಬ್ಬರಕ್ಕೋಸ್ಕರ ಚಳುವಳಿ ನಡೆಸಿದ ರೈತರಿಗೆ ಬಂದೂಕಿನ ಗುಂಡು ಉಡುಗೊರೆ ಸಿಕ್ಕಿದ್ದು ನೆನಪಿದೆಯಷ್ಟೇ! ಸಾವಯವ ಗೊಬ್ಬರದ ಬಗ್ಗೆ ಮಾತನಾಡುವ ಕೃಷಿ ಅಧಿಕಾರಿಗಳಿಗೆ ಅದಕ್ಕೆ ಬೇಕಾದಂತಹ ಪರಿಸರವನ್ನು ಈ ಹಿಂದೆ ಸಂಪೂರ್ಣ ಹಾಳುಗೆಡವಲಾಗಿದೆ ಎಂಬ ವಿಷಯ ಗೊತ್ತಿಲ್ಲವೇನು? ಜಾನುವಾರು ಸಾಕಲು ಸಾಧ್ಯವೇ ಇಲ್ಲದ ರೈತ ಉಳುಮೆ ಮಾಡಲಾಗದೆ ಕಂಗಾಲಾಗಿದ್ದಾನೆ. ಹಸಿರು ಗೊಬ್ಬರಕ್ಕೆ ಬೇಕಾದ ಸೊಪ್ಪು ಸದೆಗಳು ಬೆಳೆಯುವಂತಹ ಬೆಟ್ಟಗುಡ್ಡಗಳು ಇಂದು ಬೋಳು ಗುಡ್ಡೆಗಳಾಗಿವೆ. ಕೃಷಿ ಭೂಮಿ ಕೃಷಿಯೇತರ ಉದ್ದೇಶಗಳಿಗೆಂದು ತುಂಡು ತುಂಡಾಗಿ ಮಾರಾಟವಾಗಿ ಹೋಗಿದೆ. ದಕ್ಷಿಣ ಕನ್ನಡದ ಮತ್ತು ಮಲೆನಾಡಿನ ನದಿಗಳು ಹರಿಯುವ ಕಣಿವೆಗಳಂತೂ ಬರಡು ಭೂಮಿಯಾಗುವಂತೆ ನದಿಗಳನ್ನು ತಮ್ಮ ಜಮೀನುಗಳಿಗೆ ಹರಿಸುವ ಹುನ್ನಾರವನ್ನು ಇಂದಿನ ಆಳುವವರು ಬಹುಮಟ್ಟಿಗೆ ಗುಟ್ಟಿನಲ್ಲಿ ಜರುಗಿಸುತ್ತಿದ್ದಾರೆ. ಹೀಗಿರುವಾಗ ಸಾವಯವ ಕೃಷಿಯ ಮಾತು ಬರೇ ಮೊಣಕೈಗೆ ಬೆಲ್ಲ ಸವರುವ ಹುನ್ನಾರವಲ್ಲದೆ ಮತ್ತೇನು?

ಸರಕಾರದ ರೀತಿ ನೀತಿಗಳು ಬದಲಾಗಬೇಕು, ಜನರ ಆರ್ಥಿಕ ಸುಧಾರಣೆಯೊಂದಿಗೆ ಹಾಗೂ ಬದುಕು ಆರೋಗ್ಯ, ಶಿಕ್ಷಣ, ಸಮನ್ವಯತೆಗಳ ಬೆಳವಣಿಗೆಯೊಂದಿಗೆ ಸ್ವಾವಲಂಬನೆ ಮತ್ತು ಆಂತರಿಕ ಸಂಪನ್ಮೂಲಗಳ ಸದ್ಬಳಕೆ ಮುಖ್ಯವಾಗಿರುವಂಥ ಅಭಿವೃದ್ಧಿ ಮಾರ್ಗಗಳ ಯೋಜನೆಗಳನ್ನು ಸರಕಾರಗಳು ಮುಂದಿಟ್ಟು ಅನುಮತಿ ಪಡೆಯಬೇಕು. ಅದರಂತೆ ಸಾರ್ವಜನಿಕರ ಕೂಡುವಿಕೆಯಿಂದ ಅವುಗಳನ್ನು ನೆರವೇರಿಸಬೇಕು. ಪಂಚಾಯತ್ ಮಟ್ಟದಿಂದ ಸಂಸತ್ತಿನ ಮಟ್ಟದವರೆಗೆ. ಈ ದೃಷ್ಟಿಕೋನದಿಂದ ಅಧಿಕಾರ ದಲ್ಲಿರುವವರು ವರ್ತಿಸಿದಾಗ ದೇಶವು ಮುನ್ನಡೆಯುತ್ತದೆ. ಇಲ್ಲವಾದರೆ ಕೋಮು, ಜಾತಿ, ಲಿಂಗ, ಪ್ರಾದೇಶಿಕತೆ, ಭಾಷೆ, ಯಾವು ಯಾವುದೋ ಕಾರಣಗಳನ್ನು ಮುಂದೊಡ್ಡಿ ಜನರನ್ನು ಛಿದ್ರಗೊಳಿಸಿ ಉಳ್ಳವರು, ಅಧಿಕಾರಸ್ಥರು, ಈ ನಾಡಿನ ಭವಿಷ್ಯತ್ತನ್ನು ಹಿಂದಿರುಗಿಸಲಾರದಂತಹ ಅಧೋಗತಿಗೆ ತಲುಪಿಸುವುದರಲ್ಲಿ ಅನುಮಾನವಿಲ್ಲ. ಆದುದರಿಂದ ಕಾಲ ಮೀರುವ ಮೊದಲೇ ಎಚ್ಚರವಾಗೋಣ, ಒಂದಾಗೋಣ, ವಿಚಾರ ಮಾಡೋಣ, ಕಾರ್ಯಪ್ರವೃತ್ತರಾಗೋಣ. ನಮ್ಮ ಮತ್ತು ನಮ್ಮ ಮಕ್ಕಳ ಭವಿಷ್ಯತ್ತು ನಮ್ಮ ಕೈಯಲ್ಲೇ ಇದೆ. ನಮ್ಮ ಭೂಮಿ, ನಮ್ಮ ಖನಿಜಗಳು, ನಮ್ಮ ನೆಲ, ಜಲ, ಸಂಪತ್ತುಗಳನ್ನೆಲ್ಲ ತಮ್ಮ ಲಾಭಕ್ಕಾಗಿ ಕೊಳ್ಳೆಹೊಡೆಯುವವರ ಅಧಿಕಾರ ಯಾವ ರಾಜ್ಯದಲ್ಲೇ ಆಗಲಿ, ಕೇಂದ್ರದಲ್ಲೇ ಆಗಲಿ ಕೊನೆಗಾಣಬೇಕೆಂಬ ಗುರಿಯಿಟ್ಟುಕೊಂಡು ಹೋರಾಟಕ್ಕೆ ಸನ್ನದ್ಧರಾಗುವುದು ಇಂದಿನ ಯುವಜನರ, ಶ್ರಮಜೀವಿಗಳ ಮತ್ತು ಬುದ್ಧಿಜೀವಿಗಳ ಕರ್ತವ್ಯವಾಗಿದೆ. ಇದು ನಮ್ಮ ಕನ್ನಡ ಜನರ ಪರಂಪರೆ. ಕುವೆಂಪು ಅವರನ್ನು ಅನುಸರಿಸಿ ಹೇಳುವುದಾದರೆ ನೂರು ಶಾಸ್ತ್ರಗಳನ್ನು, ಮನುಧರ್ಮ ಶಾಸ್ತ್ರವನ್ನು, ಕೌಟಿಲ್ಯನ ಅರ್ಥಶಾಸ್ತ್ರವನ್ನು, ಕೃಷ್ಣದೇವರಾಯನ ಆಡಳಿತ ವೈಖರಿಯನ್ನೂ ಬದಿಗಿಟ್ಟು ಭಾರತದ ಏಕತೆ, ರಾಜ್ಯದ ಜನರ ಐಕ್ಯತೆ, ಆರ್ಥಿಕ ಮತ್ತು ಸಾಮಾಜಿಕ ಪ್ರಗತಿ ಇವುಗಳಿಗೆ ಗುರಿಯಿಟ್ಟು ಆಡಳಿತ ನಡೆಯುವಂತಾಗಲು ನಮ್ಮ ಕರ್ತವ್ಯವನ್ನು ನಾವು ನಿರ್ವಹಿಸೋಣ.

ಬಿ. ವಿ. ಕಕ್ಕಿಲ್ಲಾಯ
ನಂ. ೩-೧೭/೪, ''ಗಂಗಾ'', ಸೈಮನ್ ರಸ್ತೆ, ಕಂಕನಾಡಿ, ಮಂಗಳೂರು - ೫೭೫ ೦೦೨

## ಚಿತ್ರ ಸುದ್ದಿ

ನವಕರ್ನಾಟಕ ಪ್ರಕಟಿಸಿರುವ 'ವಿಜ್ಞಾನ – ಸರಳ ಪರಿಚಯ' ಮಾಲೆಯ ಹದಿನಾಲ್ಕು ಕೃತಿಗಳ ಲೋಕಾರ್ಪಣೆ 11-4-2010ರಂದು ಜರುಗಿತು.
ಚಿತ್ರದಲ್ಲಿ ಎಡದಿಂದ ಬಲಕ್ಕೆ :
ಡಾ॥ ಪಿ. ಕೆ. ರಾಜಗೋಪಾಲ್, ಶ್ರೀಮತಿ ಸುಮಂಗಲ ಎಸ್. ಮುಮ್ಮಿಗಟ್ಟಿ, ಡಾ॥ ಎನ್. ಎಸ್. ಲೀಲಾ, ಡಾ॥ ಎಚ್. ಆರ್. ಕೃಷ್ಣಮೂರ್ತಿ, ಶ್ರೀ ಟಿ. ಎಂ. ಕುಮಾರ್, ಪ್ರೊ॥ ಡಿ. ಆರ್. ಬಳೂರಗಿ, ಡಾ॥ ಸರ್ವೋತ್ತಮ ವೈ. ಅಂಬೇಕರ, ಶ್ರೀ ಆರ್. ಎಸ್. ರಾಜಾರಾಮ್ ಮತ್ತು ಶ್ರೀ ವಿ. ಎಸ್. ಎಸ್. ಶಾಸ್ತ್ರಿ.



# ಮೇ ದಿನ 2010: ಶ್ರಮಿಕ ದಿನಾಚರಣೆ

ಪ್ರೊ॥ ಎಮ್. ಆರ್. ನಾಗರಾಜು

ನಾವು ಅನೇಕ ದಿನಾಚರಣೆಗಳನ್ನು ವೈಯಕ್ತಿಕ ಮಟ್ಟದಲ್ಲಿ, ಸಮುದಾಯ ಮಟ್ಟದಲ್ಲಿ, ರಾಷ್ಟ್ರಮಟ್ಟದಲ್ಲಿ ಮತ್ತು ಅಂತರರಾಷ್ಟ್ರೀಯ ಮಟ್ಟದಲ್ಲಿ ಕೈಗೊಳ್ಳುತ್ತೇವೆ. ಅಂಥ ಆಚರಣೆಗಳ ಪೈಕಿ ಶ್ರಮಿಕ ದಿನಾಚರಣೆ ಅಂತರರಾಷ್ಟ್ರೀಯವಾಗಿ ಆಗುವಂತಹುದು.

ಕಾರ್ಮಿಕ ದಿನಾಚರಣೆಯಂದು ಕಾರ್ಖಾನೆಗಳಿಗೆ, ಕಚೇರಿಗಳಿಗೆ ರಜಾ ಘೋಷಿಸುವುದರಾಚೆಗೆ ಆಡಳಿತದಿಂದ ಹೇಳಿಕೊಳ್ಳಬಹುದಾದ ಯಾವ ಚಟುವಟಿಕೆಯೂ ನಡೆಯುವುದಿಲ್ಲ. ಅಂತೂ ಯಂತ್ರಚಾಲಕ ಸೇವಾಕರ್ತರನ್ನು ಒಳಗೊಂಡಂತೆ ಎಲ್ಲ ಶ್ರಮಿಕರಿಗೂ ಅನ್ವಯವಾಗುವ ಆಚರಣೆಗೆ ಯಾಂತ್ರಿಕತೆ ಅಂಟಿಕೊಂಡಿರುವುದು ದೌರ್ಭಾಗ್ಯ. ನಾವು ಅನೇಕರಿಂದ ಉಪಕಾರ ಪಡೆದರೂ ಕೃತಜ್ಞತೆ ಸಲ್ಲಿಸುವುದು ಕೆಲವರಿಗೆ ಮಾತ್ರ. ಏಕೆಂದರೆ, ಉಪಕಾರವನ್ನು ನಾವು ಪಡೆದಿದ್ದೇವೆಂಬ ಅರಿವು ಸ್ಪಷ್ಟವಾಗಿ ಆಗದಿದ್ದರೆ, ಸಹಜವಾಗಿ ಕೃತಜ್ಞತಾ ಭಾವವು ಉಂಟಾಗುವುದಿಲ್ಲ. ಶ್ರಮಿಕರ ಪರಿಶ್ರಮದ ಮೇಲೆಯೇ ಎಲ್ಲ ಆಗು ಹೋಗುಗಳು ನಿಂತಿರುವ ಬಗ್ಗೆ ನಮಗೆ ಎಚ್ಚರ ಉಂಟಾಗುವುದು ಬಹಳ ಅಪರೂಪ. ಯಂತ್ರಾವಲಂಬನೆಯಿಂದ ಮಾನವಾವಲಂಬನೆ ಕಡಿಮೆ ಆಗಿದೆ ಎಂಬುದು ಅನೇಕರ ಭ್ರಮೆ. ನಾವು ಬಸ್ಸಿನಲ್ಲಿ ಪ್ರಯಾಣ ಮಾಡುತ್ತಿದ್ದೇವೆನ್ನೋಣ. ಆಗ ಎಷ್ಟು ಶ್ರಮಿಕರ ಪರಿಶ್ರಮವನ್ನು ಉಪಭೋಗಿಸುತ್ತಿದ್ದೇವೆ ಎಂದು ಊಹಿಸಿ. ಮೊದಲ ಆಲೋಚನೆಗೆ ಚಾಲಕ, ನಿರ್ವಾಹಕ ನೆನಪಾದರೂ ಲೋಹ ತಯಾರಕರು, ಯಂತ್ರ ರೂಪಿಸಿದವರು, ದುರಸ್ತಿ ಮಾಡಿದವರು, ಯಂತ್ರ ಬಿಡಿಭಾಗಗಳನ್ನು ರೂಪಿಸಿದವರು – ಹೀಗೆಯೇ ಪಟ್ಟಿ ಬೆಳೆಯುತ್ತಾ ಹೋಗುತ್ತದೆ.




ಬಸ್ ಪ್ರಯಾಣ ಒಂದು ಉದಾಹರಣೆ ಮಾತ್ರ. ಆದರೆ ಬೆಳಗಿನಿಂದ ಸಂಜೆಯವರೆಗೆ ಬಳಕೆ ಮಾಡುವ ಸಾಮಗ್ರಿಗಳು, ಸೇವೆಗಳು – ಎಲ್ಲವನ್ನೂ ಗಮನಿಸಿ. ಅದಕ್ಕಾಗಿ ಶ್ರಮವಹಿಸಿದವರ ಪಟ್ಟಿ ತಯಾರಿಸಿದಾಗ ಯಾವುದೇ ಸಂವೇದನಾಶೀಲ ವ್ಯಕ್ತಿಗೆ ಇಷ್ಟೊಂದು ಸೇವೆ ಸ್ವೀಕರಿಸಲು ತಾನು ಅರ್ಹನೆ ಎಂದು ಸಂಕೋಚ ಆಗದಿರದು. ಇವರೆಲ್ಲರೂ ನಮ್ಮ ಋಣಾನುಬಂಧವುಳ್ಳವರು ಹಾಗೂ ಮನ್ನಣೆಗೆ ಪಾತ್ರರು. ಈ ಅರಿವು ಇದ್ದಾಗ ಇಷ್ಟೊಂದು ಜನರ ಪೈಕಿ ಕೆಲವರ ಮೊಗದಲ್ಲಿಯಾದರೂ ನಗೆ ಅರಳಿಸುವ ಏನಾದರೂ ಕೆಲಸವನ್ನು ಕುರಿತು ಆಲೋಚಿಸಬೇಡವೇ ?

ಒಂದು ಸಂದರ್ಭವನ್ನು ನೋಡಿ : ಶ್ರಮಿಕರ ಶ್ರಮ ಇಲ್ಲದಿದ್ದರೆ, ಯಾರದೇ ಆಗಿರಲಿ, ಹಣ ನಿರರ್ಥಕ. ಅಮೆರಿಕೆಯಲ್ಲಿರುವ ಗ್ರಾಹಕನೊಬ್ಬನ ಬಳಿ ಹೇರಳವಾಗಿ ಡಾಲರ್‌ಗಳಿವೆಯೆನ್ನಿ. ಆದರೆ ಅವನು ಅಮೆರಿಕೆಯಲ್ಲಿದ್ದುಕೊಂಡು ಹೋಳಿಗೆಯನ್ನು ಕೊಂಡುಕೊಳ್ಳಲಾರ. ಹಣಕ್ಕೆ ಬೆಲೆ ಬರುವುದು ಅದಕ್ಕೆ ಬದಲಾಗಿ ದೊರೆಯುವ ಭೋಗ ಸಾಮಗ್ರಿಯಿಂದಾಗಿ ಮಾತ್ರ. ಅಂದಮೇಲೆ ಹಣಕ್ಕೆ ಬೆಲೆಯನ್ನು ಒದಗಿಸುತ್ತಿರುವುದು, ಅರ್ಥವು ಅರ್ಥಪೂರ್ಣವಾಗುವುದು ಶ್ರಮಿಕರ ಬೆವರಿನಿಂದ. ಹಣ ಕೊಟ್ಟೇನೆಂಬ ಧಿಮಾಕನ್ನು ಬದಿಗಿರಿಸಿ ನೋಡಿದಾಗ ಯಾರ ಹಂಗೂ ಇಲ್ಲದೆ ಬದುಕುತ್ತಿದ್ದೇವೆಂಬ ಭ್ರಮೆ ಹುಸಿಯೆನ್ನುವುದು ಮನವರಿಕೆಯಾಗುತ್ತದೆ. ಅದೂ ಹೋಗಲಿ, ಹಣ ಕೊಟ್ಟು ಗ್ರಾಹಕ ಸಾಮಗ್ರಿಯನ್ನು ಕೊಳ್ಳುವುದರಲ್ಲಿ ನಿರತರಾದ ನಾವು ಎಂದಾದರೂ ಈ ಗ್ರಾಹಕ ಸಾಮಗ್ರಿಯ ಪೂರೈಕೆಯಾಗುವ ವೇಳೆಗೆ ಅದೆಷ್ಟು ಜನರ ಪರಿಶ್ರಮ ಒಳಗೊಂಡಿದೆ ಎಂದು ಪ್ರಶ್ನಿಸಿಕೊಳ್ಳುತ್ತೇವೆಯೆ ? ನಾವು ನೀಡಿದ ಹಣ ಎಲ್ಲ ಪರಿಶ್ರಮ ಹೂಡಿಕೆದಾರರಿಗೂ ಅವರವರ ಪರಿಶ್ರಮಕ್ಕನುಗುಣವಾಗಿ ತಲಪುವ ಬಗ್ಗೆ ಎಂದಾದರೂ ಖಾತರಿ ಪಡಿಸಿಕೊಂಡಿದ್ದೇವೆಯೆ ? ಶ್ರಮ ಪಡುವವರಿಗೆ ಹಣ ದೊರೆಯದ ಬಗ್ಗೆ ನಮಗೆ ತಿಳಿದಿದ್ದರೂ ದಿವ್ಯಮೌನ ವಹಿಸಿದ್ದೇವೆ ಎಂಬುದನ್ನು ಅಲ್ಲಗಳೆಯುವ ಧೀರರಿದ್ದಾರೆಯೆ ? ಸಾಮಾಜಿಕ ನ್ಯಾಯದ ಬಗ್ಗೆ ಮಾತನಾಡುವ ಹಾಗೆಯೇ ಶ್ರಮಿಕ ನ್ಯಾಯ ಆಗದಿರುವ ಬಗ್ಗೆ ನಿಡುಸುಯ್ಯಬೇಡವೆ ?

ಮಾನವ ಇತಿಹಾಸದ ಬೇರಿನಿಂದಲೇ ಪರಿಶೀಲಿಸೋಣ : ಆದಿಮಾನವ, ಇತರ ಪ್ರಾಣಿಗಳಂತೆ ನಿಸರ್ಗದಲ್ಲಿ ಲಭ್ಯವಿರುವ ಸಂಪತ್ತನ್ನು ನೇರವಾಗಿ ಬಳಕೆಮಾಡುತ್ತಿದ್ದ. ಹೀಗಾಗಿ ಅವನ ಕೃತಜ್ಞತೆ ನಿಸರ್ಗದ ಬಗೆಗೆ ಇದ್ದರೆ ಮಾತ್ರ ಸಾಕಾಗಿತ್ತು. ಆದರೆ ಕ್ರಮೇಣ ತನ್ನ ಕುಶಲತೆಯಿಂದ ನೈಸರ್ಗಿಕ ಸಂಪತ್ತಿಗೆ ಪರಿಶ್ರಮವನ್ನು ಬೆರೆಸಿ ಸಂಸ್ಕರಿತ ಸಂಪತ್ತನ್ನು, ಅರ್ಥಾತ್ ಗ್ರಾಹಕ ಸಾಮಗ್ರಿಯನ್ನು, ಬಳಕೆಮಾಡತೊಡಗಿದ. ಸಮಾಜದ ಸಂಕೀರ್ಣತೆ ಕನಿಷ್ಠ ಮಟ್ಟದಲ್ಲಿದ್ದಾಗ ಉತ್ಪಾದಕರು-ಗ್ರಾಹಕರು ಪರಸ್ಪರ ಒಡನಾಡಿಗಳಾಗಿದ್ದರಿಂದ ಶ್ರಮಗಾರರು ಹಾಗೂ ಅವರ ಪರಿಶ್ರಮದ ಪರಿಮಾಣ ಗುಣಾತ್ಮಕವಾಗಿ ಹಾಗೂ ಪರಿಮಾಣಾತ್ಮಕವಾಗಿ ಅರಿವಿಗೆ ಬರುತ್ತಿತ್ತು. ಆಗ ಕೃತಜ್ಞತೆಯನ್ನು ನಿಸರ್ಗಕ್ಕೆ ಹಾಗೂ ಶ್ರಮಿಕರಿಗೆ ತೋರಿಸುವುದರ ಜೊತೆಗೆ ಶ್ರಮಿಕರನ್ನು ಕುರಿತಂತೆ ಕನಿಕರವೂ ಸಹಜವಾಗಿಯೇ ಇರುತ್ತಿತ್ತು. ಆದರೆ, ಇಂದು ಹಾಗಲ್ಲ. ಸೋಫಾಸೆಟ್ ಬಳಸುವವರು, ಸೋಫಾಸೆಟ್ ತಯಾರಿಸುವವರ ಮನೆಯಲ್ಲಿ ಹರಿದ ಚಾಪೆಯೂ ಇಲ್ಲ ಎಂಬುದನ್ನಾಗಲಿ, ಮನೆಯಲ್ಲಿ ಕನಿಷ್ಠ ಅಗತ್ಯಗಳೂ ಇಲ್ಲ ಎಂಬುದನ್ನಾಗಲಿ ತಿಳಿಯುವ ಅವಕಾಶವೇ ಇಲ್ಲ. ಏಕೆಂದರೆ, ಗ್ರಾಹಕ ಮತ್ತು ಬಳಕೆದಾರರ ಮಧ್ಯೆ ಅಭೇದ್ಯಕೋಟೆ ನಿರ್ಮಾಣವಾಗಿದೆ. ಈ ಕೋಟೆಯಲ್ಲಿದ್ದುಕೊಂಡು ತನ್ನ ಕಲ್ಪನೆಯಿಂದ ಶ್ರಮಿಕರ ಪರಿಶ್ರಮವನ್ನು ಆಧುನಿಕ ಮಾನವ ಕಲ್ಪಿಸಿಕೊಳ್ಳುವ ಗೋಜಿಗೆ ಹೋಗುವುದಿಲ್ಲ. ಆದರೆ, ಹಾಗೆ ಕಲ್ಪಿಸಿಕೊಳ್ಳಲು ಬೇಕಾದ ಮಾನವ ಸಹಜ ಕುತೂಹಲವಾಗಲಿ, ರಭಸ ಜೀವನದಿಂದ ಬಿಡುವಾಗಲಿ, ವೈಯಕ್ತಿಕ ಜಂಜಾಟದಿಂದ ಹೊರಬಂದು ಸಾರ್ವತ್ರಿಕ ವಿಚಾರಮಾಡುವ ಬುದ್ಧಿಯ ಎಚ್ಚರವಾಗಲಿ ಇಲ್ಲ. ಹಣದ ಮದ, ಭೋಗ ಸಾಮಗ್ರಿಯ ಅಮಲು ಉಂಟಾಗಿದ್ದು

ಸಹಜವಾಗಿ ಆಗಬಹುದಾಗಿದ್ದ ಅಲ್ಪಸ್ವಲ್ಪ ಜಾಗೃತಿಯನ್ನು ತೊಡೆದುಹಾಕಿದೆ. ಮಾನವೀಯ ಸಂಬಂಧವು ಶಿಥಿಲವಾಗಿರುವ ಬಗ್ಗೆ ಲಿಯೋ ಟಾಲ್‌ಸ್ಟಾಯ್ ಹೀಗೆ ಬರೆಯುತ್ತಾರೆ: 'ಆದಿಮಾನವ ತನ್ನ ಎದುರಾಳಿಗೆ ಗುದ್ದುವಾಗ ಅವನಿಗೆ ಮೂಡಿದ ರಕ್ತ ಇಲ್ಲವೆ ಅವನ ಆಕ್ರಂದನ ಹೊಡೆದವನ ಅಂತಃಕರಣವನ್ನು ಕಲಕುವ ಸಾಧ್ಯತೆಯಿತ್ತು. ಆದರೆ ಆಧುನಿಕ ಮಾನವ ತನ್ನ ಸುಖಜೀವನದ ಚಟದಲ್ಲಿ ಎಷ್ಟು ಮೈಮರೆತಿದ್ದಾನೆಂದರೆ ಈ ಸಾಮಗ್ರಿಗಳ ತಯಾರಿಕೆಯ ಸಲುವಾಗಿ ಅದೆಷ್ಟು ಜನರ ಬೆವರು-ರಕ್ತ ಸುರಿಕೆಯಾಗುವ ಕ್ರೌರ್ಯ ತನ್ನದೆಂದು ಅವನು ಅರಿಯಲೂ ಆರ. ಹಾಗೆ ಅರಿತರೂ ಹೊರಬಾರದಷ್ಟು ಭೋಗ ಜೀವನಕ್ಕೆ ಅವನು ಬಿಗಿಯಾಗಿ ಕಚ್ಚಿಕೊಂಡಿದ್ದಾನೆ.'

ಭೋಗಸಾಮಗ್ರಿಗೆ ತಾನು ನೀಡಿದ ಹಣ ಶ್ರಮಿಕರ ಋಣವನ್ನು ತೀರಿಸಿದೆ ಎಂದು ನಂಬುವ ಮೂರ್ಖರನ್ನಲ್ಲದೆ ಇನ್ನೆಂತಹ ಮಂದಿಯನ್ನು ನಮ್ಮ ವ್ಯವಸ್ಥೆ ರೂಪಿಸಲು ಸಾಧ್ಯ! ಶ್ರಮಿಕರಿಗೆ ಸಹಾನುಭೂತಿ ತೋರಿಸುವವರು ಯಾರು? ಶ್ರಮಿಕನ ಹಾಗೆಯೇ ಅಸಹಾಯಕತೆಯಿಂದ ನಲುಗುತ್ತಿರುವ 'ಸರ್ಕಸ್ ಸಿಂಹ'ಗಳಾದ ಇತರ ದುಃಖಿಗಳು ಮಾತ್ರ. ಏಕೆಂದರೆ, 'ದುಃಖಿಗೆ ನೆರಂ ದುಃಖಿ'. ಇಂತಹ ಅಸಹಾಯಕ ಆಕ್ರಂದನ ಮಾಡುತ್ತಿರುವುದು ಜೀವಿಗಳಾದ ಪ್ರಾಣಿ ವರ್ಗ ಹಾಗೂ ಸಸ್ಯವರ್ಗ. ಯಾರದೋ ಭೋಗ ಸಾಮಗ್ರಿಯ ಸಲುವಾಗಿ ತಮ್ಮ ನಿರಾಳ ಬದುಕಿನ ಹಕ್ಕನ್ನು ಕಳೆದುಕೊಂಡು ಕೇವಲ ಪುಸ್ತಕದ ಚಿತ್ರವಾಗುವ ಹಂತಕ್ಕೆ ಅನೇಕ ಪ್ರಾಣಿ-ಪಕ್ಷಿ-ಸಸ್ಯವರ್ಗಗಳು ಅಳಿವಿನಂಚಿಗೆ ಬಂದಿವೆ. ನಾವ್ಯಾರೂ ಗುಬ್ಬಚ್ಚಿಯನ್ನು ಬಂದೂಕು ಹಿಡಿದು ಬೇಟೆಯಾಡಿಲ್ಲ. ಆದರೂ ನಗರ ಪ್ರದೇಶದಿಂದ ಕಣ್ಮರೆಯಾದ ಗುಬ್ಬಚ್ಚಿಗಳು ಈಗ ಗ್ರಾಮೀಣ ಪ್ರದೇಶದಿಂದಲೂ ಮರೆಯಾಗುತ್ತಿವೆ. ಅವುಗಳ ಆವಾಸವನ್ನು, ಆಹಾರವನ್ನು, ಕಿತ್ತುಕೊಳ್ಳುವ ವಂಚನೆಯೊಂದು ಕಡೆ. ಕೀಟನಾಶಕಗಳಿಂದ ಅವುಗಳಿಗೆ ವಿಷಪ್ರಾಶನ ಮಾಡುವುದು ಇನ್ನೊಂದು ಕಡೆ. ಹೀಗಾಗಿ ಅವುಗಳೂ ನಮ್ಮಲ್ಲಿಂದ ಕಣ್ಮರೆಯಾಗುತ್ತಿವೆ. ಇದನ್ನು ಪರೋಕ್ಷವಾಗಿ ಪ್ರೋತ್ಸಾಹಿಸುವ ನಾವು ಗ್ರಾಹಕ ಸಾಮಗ್ರಿಗೆ ಕಟ್ಟುವ ಹಣವೇ ಈ ಬಗೆಯ ಕ್ರೌರ್ಯಕ್ಕೆ ಬೆಂಬಲ ಎಂಬುದನ್ನು ಅರಿತಿದ್ದೇವೆಯೆ?

ಈ ಶೀತಲಕ್ರೌರ್ಯ ತುಂಬಿದ ನಮ್ಮ ಸಾಮಾಜಿಕರಿಗೆ ದುಡಿಯುವ ಜನರ ಬಗ್ಗೆ ಅರಿವು ಅಗತ್ಯವೆಂದು ಹೇಳಬೇಕಾದ ಸಂದರ್ಭ ಬಂದಿರುವುದು ನಮ್ಮ ಸಾಮಾಜಿಕ ಅಜ್ಞತೆಯ ಬೇರುಗಳು ಎಷ್ಟು ಆಳದವೆಂಬುದನ್ನು ಬಿಂಬಿಸುತ್ತದೆ. ವೈಯಕ್ತಿಕ ಮಟ್ಟದಲ್ಲಿಯಾದರೂ ದುಡಿಮೆಯ ಸರ್ವಾಂಗೀಣ ವ್ಯಾಪಕತೆಯನ್ನು ಗುರುತಿಸಿ ನಮ್ಮ ಜೀವನಶೈಲಿಯನ್ನು ಮರುಪರಿಶೀಲಿಸುವ, ಪರಿಸರಸ್ನೇಹಿ ಮತ್ತು ಶ್ರಮಿಕಸ್ನೇಹಿ ನಿರ್ಧಾರ ಕೈಗೊಳ್ಳುವ ಸರಳ ಜೀವನದ ಸಂಕೀರ್ಣ ಆಲೋಚನೆ ಮಾಡೋಣವೆ?

**ಪ್ರೊ॥ ಎಮ್. ಆರ್. ನಾಗರಾಜು**
ಎಫ್-೩, ಎಸ್.ಎಫ್.ಎಸ್. ನಿವಾಸಗಳು, ೭ನೇ ಅಡ್ಡರಸ್ತೆ,
ಯಲಹಂಕ ಉಪನಗರ, ಬೆಂಗಳೂರು - ೫೬೦ ೧೦೬



## ಸಮಾಧಾನ

ಮಹಾಪೂರ ಬಂದಾಗ
ಮಣ್ಣಿನ ಗುಡ್ಡದಮ್ಯಾಗ ಕುತ್ಕೊಂಡು
ಬದುಕು ಬಯಲಿಗೆ ಬಂತು
ಅಂತ ಚಿಂತಿ ಮಡ್ತಿದ್ಯಾ
ಆಕಾಶದಾಗ ಹಾರಾಡ್ತಿರೋ
ಮಂತ್ರಿಗಳನ್ನ ಕಂಡು ಸಮಾಧಾನವಾಯ್ತು
ನಾವ ಸ್ವಲ್ಪ ಪುಣ್ಯ ಮಾಡಿವಿ
ಈ ಭೂಮಿ ತಾಯಿ
ನಿಲ್ಲಾಕ ನೆಲೆನಾದ್ರೂ ಕೊಟ್ಟಾಳ
ಆ ಮಂತ್ರಿಗಳು
ಏನ್ ಪಾಪ ಮಾಡ್ಯಾರೋ
ಅವ್ರಿಗೆ ಅದು ಸಿಕ್ಕಿಲ್ಲಂತ.

## ಗೊತ್ತಿರಲಿಲ್ಲ

ದೋ ಅಂತ ಸುರಿವ
ಈ ಮಳಿಗೆ ಮನಿ ಅಷ್ಟ
ಹಾಳಕ್ಕಾವಂತ ಗೊತ್ತಿತ್ತು
ಆದ್ರ
ಈ ಸರಕಾರ ಆ ಸಮುದಾಯ
ಹಂಚಿಕೆ ಮಾಡುವ ಪರಿಹಾರದಿಂದ
ಈ ಅಧಿಕಾರಿಗಳು ಆ ಜನನಾಯಕರ
ಮನಸಿಗೂ ಮಂಕ
ಬಡಿತೈತಿ ಅಂತ ಗೊತ್ತಿರಲಿಲ್ಲ.





## ಪರದಾಟ

ಜಲ ಪ್ರಳಯದಿಂದ
ಹಾಳಾದ ಹಳ್ಳಿಯಲಿ
ಹದ್ದು ಕಾಗೆಗಳ ಚೆಲ್ಲಾಟ
ಹರಿದು ಬಂದ
ಪರಿಹಾರದಿಂದ
ಕನಸಿನ ಹೊಸೂರಿನಲ್ಲಿ
ನೆಲೆಗಾಗಿ ಜನಗಳ ಪರದಾಟ.

**ರವಿ ಸೋ. ದೇವರಡ್ಡಿ**
ಹೇಮರಡ್ಡಿ ಮಲ್ಲಮ್ಮ ನಗರ, ಮುಂಡರಗಿ, ಗದಗ ಜಿಲ್ಲೆ

# ಲೋಕಾಯತರ ಸಾಮಾಜಿಕ ದೃಷ್ಟಿ

**ಲೋ**ಕಾಯತ ದರ್ಶನಕ್ಕೆ ದೀರ್ಘ ಇತಿಹಾಸವಿದೆ. ಶಂಕರಾಚಾರ್ಯರ ಕಾಲದಿಂದ ೧೩ನೆಯ ಶತಮಾನದವರೆಗೆ ಅದು ಉಚ್ಛ್ರಾಯ ಸ್ಥಿತಿಯಲ್ಲಿತ್ತು. ಆಮೇಲೆ ಆ ದರ್ಶನದ ಗ್ರಂಥಗಳಾವುವೂ ಇಲ್ಲ. ಯಾವ ರೀತಿಯಲ್ಲೂ ರಾಜಿ ಮಾಡಿಕೊಳ್ಳದ ತತ್ತ್ವಶಾಸ್ತ್ರ ಅದು. ಪರಲೋಕ, ಪುನರ್ಜನ್ಮ, ಸ್ವರ್ಗ-ನರಕ, ಸೃಷ್ಟಿಕರ್ತ ದೇವರು, ಪವಿತ್ರವೆನ್ನಲಾದ ವೇದದ ನಿತ್ಯಸತ್ಯ, ಮುಂತಾದ ಅತಿ ಸಾಂಪ್ರದಾಯಿಕ ನಂಬಿಕೆಗಳನ್ನು ತಿರಸ್ಕರಿಸಿದವರು ಚಾರ್ವಾಕರು. ಅದೊಂದು ಶುದ್ಧ ಭೌತವಾದ. ಅದನ್ನು ನಿರಾಕರಿಸಲು ವೇದಾಂತ, ಮೀಮಾಂಸಾ, ನ್ಯಾಯ, ಬೌದ್ಧ ಮತ್ತು ಜೈನ ದರ್ಶನಗಳು ತಮ್ಮ ತರ್ಕಬಾಣಗಳನ್ನು ನಿರಂತರವಾಗಿ ಪ್ರಯೋಗಿಸಿದುವು. ನಮಗೆ ಲೋಕಾಯತರ ಯಾವ ಗ್ರಂಥವೂ ಲಭ್ಯವಿಲ್ಲ. ಅದರ ವಿರೋಧಿಗಳು ಲೋಕಾಯತರದ್ದೆಂದು ಉದ್ಧರಿಸಿರುವ ವಾಕ್ಯಗಳು ಮಾತ್ರ ಅಲ್ಲಲ್ಲಿ ಸಿಕ್ಕುತ್ತವೆ. ಅವುಗಳ ಆಧಾರದ ಮೇಲೆ ಲೋಕಾಯತ ತತ್ತ್ವವನ್ನು ಸಮಗ್ರವಾಗಿ ನಿರೂಪಿಸುವ ಯತ್ನಗಳು ನಡೆದಿವೆ. ಲೋಕಾಯತರ ಚಿಂತನೆಯನ್ನು ವಿರೂಪಗೊಳಿಸುವ ಕೆಲಸ ಸತತವಾಗಿ ಜಾರಿಯಲ್ಲಿದ್ದಿತು, ಈಗಲೂ ಇದೆ. ಸಾಮಾಜಿಕ-ಆರ್ಥಿಕ - ಸಾಂಸ್ಕೃತಿಕ ಪರ್ಯಾಯದ ರಚನೆಯನ್ನು ವಿರೋಧಿಸಿದವರೆಲ್ಲಾ ಲೋಕಾಯತ ವಿರೋಧಿಗಳೂ ಆಗಿರುವುದು ನಮ್ಮ ಇತಿಹಾಸದಿಂದ ತಿಳಿಯುತ್ತದೆ.

ಚಾರ್ವಾಕರು ನಮ್ಮಲ್ಲಿ ಆದಿ-ಭೌತವಾದಿಗಳೇನಲ್ಲ. ವೈಚಾರಿಕತೆ ಮತ್ತು ಭೌತವಾದದ ಅಂಶಗಳು ಮೊದಲಿನಿಂದಲೂ ಇದ್ದುವೆಂಬುದಕ್ಕೆ ಪ್ರಾಚೀನ ಗ್ರಂಥಗಳು ಆಧಾರ ಒದಗಿಸುತ್ತವೆ. ಭೂಮಿ, ಗಾಳಿ, ಬೆಂಕಿ, ನೀರು ಮತ್ತು ಆಕಾಶವೆಂಬ ಐದು ಮಹಾಭೂತಗಳ ಆದ್ಯತೆಯನ್ನು ಎತ್ತಿಹಿಡಿಯುವ ಸಂಪ್ರದಾಯ ನಮ್ಮಲ್ಲಿ ಬಹಳ ಪ್ರಾಚೀನವಾದ್ದು. ಚೈತನ್ಯಕ್ಕಿಂತಲೂ ಮುಂಚಿನವು ಇವೆಂದು ತಿಳಿಸುತ್ತಾ ಅನೇಕ ಮತಧಾರ್ಮಿಕ ಆಚರಣೆಗಳನ್ನು, ಬ್ರಾಹ್ಮಣರಿಗೆ ದಾನ ಕೊಡುವುದನ್ನು, ಗಂಭೀರವಾಗಿ ಟೀಕಿಸಿದ್ದು ಲೋಕಾಯತ. ಮೊದಲಿನಿಂದಲೂ ಪ್ರಚಲಿತವಾಗಿದ್ದ ಇಂತಹ ಅಭಿಪ್ರಾಯಗಳನ್ನು ಕ್ರೋಡೀಕರಿಸಿರುವ ದರ್ಶನ ಲೋಕಾಯತ. ಅದರ ತಾತ್ವಿಕ ನಿಲುವನ್ನು ಅನೇಕರು ಗುರುತಿಸಿದ್ದಾರೆ, ಆದರೆ ಅದು ಪ್ರತಿನಿಧಿಸುವ ಸಾಮಾಜಿಕ ದೃಷ್ಟಿಯ ಬಗ್ಗೆ ಹೆಚ್ಚು ಚರ್ಚೆ ನಡೆದಿಲ್ಲ. ಕೃಷ್ಣಮಿಶ್ರ ಮತ್ತು ಶ್ರೀಹರ್ಷ ಎಂಬ ಇಬ್ಬರು ವೇದಾಂತಿಗಳು ಸಾಹಿತ್ಯ ರಚನೆ ಮಾಡಿದ್ದಾರೆ. ಅವರು ಚಾರ್ವಾಕರ ಸಾಮಾಜಿಕ ಸಿದ್ಧಾಂತಗಳನ್ನು ಪ್ರಸ್ತಾಪಿಸಿದ್ದಾರೆ. ಉದಾಹರಣೆಗೆ, ಜಾತಿ ಅಥವಾ ವರ್ಣ ಹಾಗೂ ಸ್ತ್ರೀಯರ ಸ್ಥಾನಮಾನದ ಬಗ್ಗೆ ಇವರು ಲೋಕಾಯತರ ವಿಚಾರಗಳನ್ನು ತಮ್ಮ ಕೃತಿಗಳಲ್ಲಿ ಅವಲೋಕಿಸಿದ್ದಾರೆ. ಕೃಷ್ಣಮಿಶ್ರನು 'ಪ್ರಬೋಧ ಚಂದ್ರೋದಯ'ವೆಂಬ ನಾಟಕ ಬರೆದಿದ್ದಾನೆ. 'ತಿಳಿವಳಿಕೆಯೆಂಬ ಚಂದ್ರನ ಉದಯ'ವೆಂದು ಅದರರ್ಥ. ಅದರಲ್ಲಿ ಮಹಾಮೋಹನೆಂಬ ಒಂದು ಪಾತ್ರವಿದೆ. ಅದು (ಅಥವಾ ಅವನು) ಕಟ್ಟಾ ಭೌತವಾದಿ. ಅವನೆನ್ನುತ್ತಾನೆ (೨-೧೮): ''ಶರೀರದ ವಿವಿಧ ಅಂಗಗಳು ಒಂದೇ ತೆರನಾದುವು; ಹೀಗಿರುವಾಗ ಜಾತಿಗಳ ಶ್ರೇಣೀಕರಣ (ಉತ್ತಮ-ಅಧಮ) ಹೇಗೆ ಸಾಧ್ಯ ?''



ಶ್ರೀಹರ್ಷನು ೧೨ನೆಯ ಶತಮಾನದ ಮಹಾ ಅದ್ವೈತಿ. ''ಖಂಡನಖಂಡಖಾದ್ಯ'' ಎಂಬ ಒಂದು ದಾರ್ಶನಿಕ ಗ್ರಂಥವನ್ನವನು ರಚಿಸಿದ್ದಾನೆ. ಅದರರ್ಥ ''ಅದ್ವೈತ ತತ್ತ್ವವನ್ನು ಖಂಡಿಸುವವರನ್ನು ಖಂಡಿಸುವ ಭರ್ಜರಿ (ಸಿಹಿ) ತಿಂಡಿ'' ಎಂದು. ಅವನ ಇನ್ನೊಂದು ಕೃತಿ ''ನೈಷಧಚರಿತ''ವೆಂಬ ಮಹಾಕಾವ್ಯ. ಅದನ್ನು ಶಾಸ್ತ್ರಗ್ರಂಥವೆನ್ನುತ್ತಾರೆ, ಏಕೆಂದರೆ ಕಾವ್ಯದ ಜೊತೆ ಅದರಲ್ಲಿ ದಾರ್ಶನಿಕ ಸಿದ್ಧಾಂತಗಳು ತುಂಬಿಕೊಂಡಿವೆ. ಅದು 'ವಿದ್ವಜ್ಜನರಿಗೆ ಔಷಧಿ' ಎಂಬ ಪ್ರತೀತಿಯನ್ನು ಪಡೆದಿದೆ. ಅರ್ಥಾತ್, ಅದೊಂದು ಕಠಿಣವಾದ ಸಾಹಿತ್ಯ ಕೃತಿ. ಅದರಲ್ಲೊಬ್ಬ ಅಸಾಂಪ್ರದಾಯಿಕ ವ್ಯಕ್ತಿ ಇದ್ದಾನೆ. ಯಥಾಸ್ಥಿತಿವಾದಿಗಳಿಗೆ ಅವನದೊಂದು ಸವಾಲು ಹೀಗಿದೆ (೧೭.೪೦,೪೨ ಮತ್ತು ೫೮) :

''ಜಾತಿಗಳ ಶುದ್ಧತೆಯ ಮಾತನಾಡುತ್ತೀರಿ ನೀವು. ನಿಮ್ಮ ತಾತಂದಿರು, ಅವರ ತಾತಂದಿರು, (ಅದೂ ತಂದೆ-ತಾಯಿ ಎರಡೂ ಕಡೆ) ಎಲ್ಲಾ ಶುದ್ಧವಾಗಿದ್ದರಲ್ಲವೆ ನಿಮ್ಮ ಶುದ್ಧಿ. ಎಷ್ಟು ತಲೆಮಾರುಗಳು ಕಳೆದುಹೋಗಿವೆ! ಅಂಥದರಲ್ಲಿ ಯಾವ ಜಾತಿ ತಾನೆ ಶುದ್ಧವಾಗಿದ್ದೀತು ಹೇಳಿ. ನಿಮ್ಮ ಕುಟುಂಬದ ಪ್ರತಿಷ್ಠೆಯ ಮಾತನಾಡುತ್ತೀರಲ್ಲ, ನಾಚಿಕೆಯಾಗಬೇಕು ನಿಮಗೆ! ಹೊಟ್ಟೆಕಿಚ್ಚಿನಿಂದ ಮಹಿಳೆಯರನ್ನು ಎಂತೆಂತಹ ನಿರ್ಬಂಧಗಳಿಗೆ ಗುರಿಮಾಡಿದ್ದೀರಿ ನೀವು, ಅಲ್ಲವೆ? ಅಂತೆಯೇ ಪುರುಷರನ್ನೇಕೆ ನಿರ್ಬಂಧಿಸಲಿಲ್ಲ? ಕಾಮ ಅಥವಾ ರಾಗದ ಕುರುಡುತನ ಇಬ್ಬರಿಗೂ ಒಂದೇ ತೆರನಾದದ್ದಲ್ಲವೆ !''

''ಸ್ತ್ರೀಯರ ನಿಯಂತ್ರಣವನ್ನು ಕುರಿತ ನಿಮ್ಮ ಹೇಳಿಕೆಗಳೆಲ್ಲಾ ತೃಣಸಮಾನ, ತಿಳಿಯಿತೆ ? ನೀವು ಅವರಿಗಿಂತ ಹೇಗೆ ಶ್ರೇಷ್ಠರು, ಹೇಳಿ. ಜನಗಳಿಗೆ ದಗಾ ಹಾಕುವುದರಲ್ಲಿ ನೀವು ಯಾರಿಗೆ ತಾನೆ ಕಡಿಮೆ !''

ಕೃಷ್ಣಮಿಶ್ರ ಮತ್ತು ಶ್ರೀಹರ್ಷ ಇಬ್ಬರೂ ಚಾರ್ವಾಕರನ್ನು ನಾಸ್ತಿಕರೆಂದು ಪರಿಗಣಿಸುತ್ತಾರೆ. ವರ್ಣವ್ಯವಸ್ಥೆಯನ್ನು ಮಾನ್ಯಮಾಡದವರು ಸಂಪ್ರದಾಯ ವಿರೋಧಿಗಳೆಂಬ ಆಪಾದನೆ ಇರುತ್ತಿದ್ದಾಗ ಚಾರ್ವಾಕರು ಪ್ರಬಲ ಸಂಪ್ರದಾಯ ವಿರೋಧಿಗಳಾಗಿ ಮೆರೆದರು. ನಿಜಕ್ಕೂ ಅವರು ವರ್ಣವ್ಯವಸ್ಥೆಯ ವಿರೋಧಿಗಳೆ ಮತ್ತು ಅದಕ್ಕೆ ಪುರಾವೆಯುಂಟೆ ? ವರ್ಣವಿಂಗಡಣೆಯನ್ನು ಸಮರ್ಥಿಸುವವರು ಋಗ್ವೇದದ ಪುರುಷಸೂಕ್ತದ ಮಾತನ್ನು ಅವಲಂಬಿಸಿದ್ದರು. 'ಪುರುಷ'ನ ಮುಖವು ಬ್ರಾಹ್ಮಣ, ಬಾಹುಗಳು ಕ್ಷತ್ರಿಯ, ತೊಡೆಗಳು ವೈಶ್ಯ ಮತ್ತು ಪಾದಗಳು ಶೂದ್ರ, ಎಂಬುದು ಆ ಮಾತು. ಇದನ್ನು ತುಚ್ಛೀಕರಿಸಿ ಚಾರ್ವಾಕರು ಹೇಳಿದರು, ಎಲ್ಲ ವ್ಯಕ್ತಿಗಳೂ ಭೂಮಿ, ಗಾಳಿ, ಬೆಂಕಿ (ತೇಜಸ್ಸು) ಮತ್ತು ನೀರಿನ ಸಂಘಾತ, ಅಷ್ಟೆ, ಎಂದು. ಸಂಪ್ರದಾಯವು ಜಾತಿಗಳ ಶ್ರೇಷ್ಠತೆ-ಕನಿಷ್ಠತೆಯನ್ನು ಎತ್ತಿಹಿಡಿಯಿತು; ಚಾರ್ವಾಕರು ಅದನ್ನು ಬಡಿದುಹಾಕಿದರು. ಸಾಮಾಜಿಕ ಮೌಲ್ಯಗಳ ಹೆಸರಿನಲ್ಲಿ ಧರ್ಮಶಾಸ್ತ್ರಗಳು ಪ್ರತಿಪಾದಿಸುತ್ತಿದ್ದ ವರ್ಣಭೇದ ಮತ್ತು ವರ್ಣಜ್ಯೇಷ್ಠತೆಯನ್ನು ಕಟ್ಟುನಿಟ್ಟಾಗಿ ಪ್ರಶ್ನಿಸಿದ ಹಿರಿಮೆ ಲೋಕಾಯತರದು. ಜಾತಿಗಳನ್ನು ದೈವೀಸೃಷ್ಟಿಯೆಂದು ಹೇಳುತ್ತಾ ಒಂದು ವರ್ಗವು ಇತರರ ಮೇಲೆ ಅಧಿಕಾರ ಚಲಾಯಿಸುತ್ತಿತ್ತು; ಅದನ್ನು ಲೇವಡಿ ಮಾಡಿ ತಿರಸ್ಕರಿಸಿದ ಲೋಕಾಯತರದ್ದೆನ್ನಲಾದ ಒಂದು ಪದ್ಯ ಹೀಗಿದೆ :

ಸ್ವರ್ಗವೂ ಇಲ್ಲ, ಮೋಕ್ಷವೂ ಇಲ್ಲ,  
ಪರಲೋಕದಲ್ಲಿ ಆತ್ಮವೆಂಥದೂ ಇಲ್ಲ;  
ನಾಲ್ಕು ವರ್ಣಗಳಂತೆ, ಅವರ ನಿಗದಿತ ಕರ್ಮಗಳಂತೆ,  
ಇನ್ನೂ ಏನೇನೋ, ಎಲ್ಲಾ ನಿರರ್ಥಕ, ಮಣ್ಣಾಂಗಟ್ಟಿ.

ಮಹಿಳೆಯರ ಪ್ರಶ್ನೆ ಬಂದಾಗ, ಬುದ್ಧನಂತೆ ಚಾರ್ವಾಕರು ಲಿಂಗ ಸಮಾನತೆಗೆ ಬದ್ಧರು. ಮಹಿಳೆಯರು ''ಸಾಮಾನ್ಯವಾಗಿ ನಂಬಲನರ್ಹರು'' ಎಂದು ಮನು ಹೇಳಿದ್ದ. ಅವರು ವೇದಾಧ್ಯಯನ ಮಾಡಕೂಡದು, ಅಸ್ವತಂತ್ರರು, ಯಾವಾಗಲೂ ಯಾರದೋ ಪೋಷಣೆಯಲ್ಲಿ ಇರುವವರು, ಎಂದೆಲ್ಲಾ ಅವನು ನುಡಿದಿದ್ದ. ಶಾಸ್ತ್ರವಿರೋಧಿಗಳಾಗಿದ್ದ ಲೋಕಾಯತರು ಸಹಜವಾಗಿಯೇ ಸ್ತ್ರೀಪರ ದೃಷ್ಟಿಯುಳ್ಳವರೂ ಆಗಿದ್ದರು. ವೇದದ ಪ್ರಾಮಾಣ್ಯವನ್ನು ಪ್ರಶ್ನಿಸಿದ್ದವರು ಮನುವನ್ನು ಪ್ರಮಾಣವನ್ನಾಗಿ ಅಂಗೀಕರಿಸುತ್ತಾರೆಯೆ ? ಅವರು ಮತಧಾರ್ಮಿಕ ಜಡ್ಡುತನದಿಂದ ಹೊರಬಂದು ಸ್ವತಂತ್ರ ಸಾಮಾಜಿಕ ಮತ್ತು ರಾಜಕೀಯ ಪ್ರಣಾಲಿಕೆಯನ್ನು ಸಿದ್ಧಪಡಿಸುತ್ತಿದ್ದ ಮೊದಲಿಗರು. ವೈಚಾರಿಕತೆಯ ಮೂಲ ಇಂಗಿತವೇ ಅದು. ಈ ನಿಟ್ಟಿನಲ್ಲಿ ಲೋಕಾಯತರು ಕಟ್ಟಾ ಪ್ರಜಾಪ್ರಭುತ್ವವಾದಿಗಳೆಂಬುದು ಗಮನಾರ್ಹ. ಅವೈಚಾರಿಕತೆಯ ಮತ್ತು ಮತಧಾರ್ಮಿಕ ಜಡ್ಡುತನದ ಉಪಟಳ ವ್ಯಾಪಕವಾಗುತ್ತಿರುವ ಪ್ರಸ್ತುತ ಸಂದರ್ಭದಲ್ಲಿ ಲೋಕಾಯತವು ತಣ್ಣನೆಯ ಹನಿಯನ್ನು ಸುರಿಸಿ ವಾತಾವರಣವನ್ನು ತಿಳಿಗೊಳಿಸುವ ಸಾಮರ್ಥ್ಯವನ್ನು ಹೊಂದಿದೆ.

**ರಾಮಕೃಷ್ಣ ಭಟ್ಟಾಚಾರ್ಯ**  
ಪಾವ್ಲೋವ್ ಸಂಸ್ಥೆ, ೯೮ ಮಹಾತ್ಮಾ ಗಾಂಧಿ ರಸ್ತೆ, ಕೋಲ್ಕತಾ - ೭೦೦ ೦೦೭

Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. G. Ramakrishna

**HOSATHU** Kannada Monthly / MAY 2010 Rs. 12 (Total No. of Pages 64)
Regd. KRNA / BGE / 7 / 2009-2011. WPP No. 14. Posted at MBC Bangalore GPO, Bangalore-560 001
on the 28th of every month Licenced to post without prepayment. RNI Regn. No. KARKAN/1999/614.